# ವಾರಸಾ ಕರ ಕಾಯಿದೆ

## (ದಿ ಇಸ್ಟೇಟ ಡ್ಯೂಟಿ ಆ್ಯಕ್ಟ)



ಬರೆದವರು

**ಎನ್. ಕೆ. ದೀಕ್ಷಿತ,** ಬಿ. ಎ., ಎಲ್ ಎಲ್. ಬಿ

ವಕೀಲ, ಧಾರವಾಡ

**ನೆಗಳೂರ ರಂಗನಾಥ,** ಎಂ. ಎ., ಎಲ್ ಎಲ್. ಬಿ

ವಕೀಲ, ಧಾರವಾಡ

೧೯೫೫

ಆಕಳವಾಡಿ ಬುಕ್ ಡಿಪ್ಪೊ, ಧಾರವಾಡ

---

**ಬೆಲೆ : ಮೂರು ರೂಪಾಯಿ**

ಮುದ್ರಕರು

**ಎಸ್. ವಾಯ್. ಪವಾರ**

**ಧಾರವಾಡ ಪ್ರಿಂಟಿಂಗ ಪ್ರೆಸ್**

**ಮಾರ್ಕೆಟ, ಧಾರವಾಡ**



ಮೊದಲ ಮುದ್ರಣ : ೧೯೫೫ ಮಾರ್ಚ

ಬೆಲೆ: ಸಾದಾಪ್ರತಿ : ಮೂರು ರೂಪಾಯಿ

ಕ್ಯಾಲಿಕೋಪ್ರತಿ : ನಾಲ್ಕುರೂಪಾಯಿ









ಪ್ರಕಾಶಕರು

**ರಾಮಣ್ಣ ಈಶ್ವರಪ್ಪ ಆಕಳವಾಡಿ**

**ಆಕಳವಾಡಿ ಬುಕ್ ಡಿಪ್ಪೋ**

**ವಿಜಯ ರೋಡ, ಧಾರವಾಡ**

# ಪ್ರಕಾಶಕರ ಮಾತು



ಇತ್ತೀಚೆಗೆ ಬಂದ ಮಹತ್ವದ ಕಾಯಿದೆಗಳಲ್ಲಿ ಇಸ್ಟೇಟ ಡ್ಯೂಟಿ ಆ್ಯಕ್ಟು ಒಂದು. ಇದರ ಪರಿಣಾಮವು ಸಮಾಜವ್ಯಾಪಿಯಾಗಿರುವುದರಿಂದ ಮತ್ತು ಇದರ ಬಗ್ಗೆ ಸಾಮಾಜಿಕರಲ್ಲಿ ತಿಳಿವಳಿಕೆಯುಂಟಾಗಬೇಕೆಂದು ಈ ಕಾಯಿದೆಯನ್ನು ಕನ್ನಡದಲ್ಲಿ ಬರೆಯಿಸಿ ಪ್ರಕಟಿಸುವ ಸಾಹಸಕ್ಕೆ ತೊಡಗಿದ್ದೇವೆ.

ನಾವು ಕೇಳಿಕೊಂಡೊಡನೆಯೇ ಲೇಖಕರು ಬರೆಯಲು ಒಪ್ಪಿದರು. ಸುಪ್ರಸಿದ್ಧ ಮತ್ತು ಅನುಭವಿಕರಾದ ವಕೀಲರು ಆಗಿರುವ ಶ್ರೀ ಎಸ್. ಕೆ. ದೀಕ್ಷಿತ, ಬಿ.ಎ.,ಎಲ್‌ಎಲ್.ಬಿ. ಅವರು, ಮತ್ತು ಸಾಹಿತಿಗಳೂ ಉದಯೋನ್ಮುಖ ವಕೀಲರೂ ಆಗಿರುವ ಶ್ರೀ ನೆಗಳೂರ ರಂಗನಾಥ ಎಂ. ಎ., ಎಲ್‌ಎಲ್. ಬಿ. ಇವರು ಜತೆಯಾಗಿ ಈ ಗ್ರಂಥವನ್ನು ಬರೆದಿರುವದರಿಂದ ಕಾಯಿದೆಯ ದೃಷ್ಟಿಯಿಂದಲೂ ಸಾಹಿತ್ಯಿಕ ದೃಷ್ಟಿಯಿಂದಲೂ ಈ ಗ್ರಂಥವು ಉತ್ತಮ ದರ್ಜೆಯದು ಆಗಿದೆಯೆಂದು ಹೇಳಲು ಯಾವ ಸಂದೇಹವೂ ಇಲ್ಲ. ವಾಚಕರೂ ಅದೇ ಅಭಿಪ್ರಾಯದವರು ಆದರೆ ನಮ್ಮ ಪ್ರಯತ್ನವು ಸಾರ್ಥಕವಾಗುವುದು.

ಈ ಮೊದಲಿನ ನಮ್ಮ ಕಾಯಿದೆಯ ಪ್ರಕಟನೆಗಳಿಗೆ ಓದುಗರು ಆದರ ಅಭಿಮಾನಗಳನ್ನು, ಸಹಾನುಭೂತಿ, ಸಹೃದಯತೆಯನ್ನು ತೋರಿದಂತೆ ಈ ಗ್ರಂಥಕ್ಕೂ ತೋರಿ ಪ್ರೋತ್ಸಾಹಿಸುವಿರೆಂದು ನಂಬಿದ್ದೇವೆ.

ಗ್ರಂಥಕರ್ತರಿಗೂ ವಾಚಕರಿಗೂ ನಾವು ಕೃತಜ್ಞರಾಗಿದ್ದೇವೆ.

—ಪ್ರಕಾಶಕರು

# ಗ್ರಂಥಕರ್ತರ ನುಡಿ



ಕನ್ನಡ ವಾಚಕರೆದುರು ಈ ವಾರಸಾಕರ ಕಾಯಿದೆಯನ್ನು ಸಾದರ ಪಡಿಸಲು ನಮಗೆ ಬಹಳ ಸಂತೋಷವಾಗುತ್ತದೆ. ವಾರಸಾಕರ ಕಾಯಿದೆಯು ಇತ್ತೀಚಿನ ಬಹು ಮಹತ್ವದ ಕಾಯಿದೆಗಳಲ್ಲಿ ಒಂದಾಗಿದೆ. ಇದರ ಪರಿಣಾಮ ಫಲಗಳು ದೂರಗಾಮಿಯಾಗಿವೆ; ಸಮಾಜವ್ಯಾಪಿಯಾಗಿವೆ. ಈ ಕಾಯಿದೆಯು ಹೊಸದೆಂದು ಕಂಡರೂ ವಿಷಯ ಹೊಸದಲ್ಲ. ಆದಾಯಕರ ಕಾಯಿದೆಯು ಜಾರಿಯಲ್ಲಿ ಬಂದಂದಿನಿಂದ ಒಂದು ಬಗೆಯಿಂದ ಸಾರ್ವಜನಿಕರಿಗೆ ಕರಭಾರದ ವೈಯಕ್ತಿಕ ಅರಿವು ಆಗಿದೆ. ಈ ವಾರಸಾಕರವು ಆದಾಯ ಕರದ ಮುಂದಿನ ಹೆಜ್ಜೆಯಾಗಿದೆ.

ಇಂತಹ ಮಹತ್ವದ ಕಾಯಿದೆಯನ್ನು ಕನ್ನಡ ವಾಚಕರಿಗಾಗಿ ಸಿದ್ಧ ಮಾಡಬೇಕೆಂದು ನಮ್ಮ ಮನಸ್ಸಿನಲ್ಲಿ ಬಂದು ಆರೆಂಟು ತಿಂಗಳಾದುವು. ಅದನ್ನು ಕಾರ್ಯರೂಪದಲ್ಲಿ ತರಲು ನಮ್ಮ ಪ್ರಕಾಶಕರ ಪ್ರೋತ್ಸಾಹವೇ ಕಾರಣ. ಅದಕ್ಕಾಗಿ ನಾವು ಪ್ರಕಾಶಕರಿಗೆ ಕೃತಜ್ಞರಾಗಿದ್ದೇವೆ.

ಈ ಪುಸ್ತಕ ಓದುವವರಿಗೆ ಒಂದು ಸೂಚನೆ: ಅಂಕಿಗಳು ಇಸ್ಟೇಟ ಡ್ಯೂಟಿ ಕಾಯಿದೆಯಲ್ಲಿಯ ಕಲಮುಗಳ ಅಂಕಿಯನ್ನು ಸೂಚಿಸುತ್ತವೆ. ಅದರ ಮುಂದೆ ಕೊಡಲಾದ ಸಣ್ಣದಪ್ಪಕರಗಳ ಮಾಹಿತಿಯು ಆಯಾ ಕಲಮಿನ ಸಾರಾಂಶದ ತಲೆಬರೆಹ. ಕಲಮುಗಳ ಪಠ್ಯವನ್ನು, ಬದಿಯಿಂಬು ಬಿಟ್ಟು ಅಚ್ಚು ಮಾಡಲಾಗಿದೆ. ವಿವರಣೆಗಳು ಕಲಮಿನ ಭಾಗಗಳೇ ಆಗಿವೆ. ವಿವೇಚನೆಯು ಕಲಮುಗಳನ್ನು ತಿಳಿಸುವ ಟಿಪ್ಪಣಿಗಳು.

ಕನ್ನಡ ಓದುಗರನ್ನು ಕಣ್ಣುಮುಂದಿಟ್ಟುಕೊಂಡು ಗ್ರಂಥವನ್ನು ರಚಿಸಿದ್ದೇವೆ. 'ಕಾಯಿದೆಯ ವಿಷಯವೇ ಜಟಿಲವಾದುದರಿಂದ ಅಲ್ಲಲ್ಲಿ ಕ್ಲಿಷ್ಟತೆ ಕಂಡು ಬರುವುದು ಸ್ವಾಭಾವಿಕ. ಕಲಮುಗಳು ಕಠಿಣವೆನ್ನಿಸಿದಾಗ ಅದರ ವಿವೇಚನೆ ಮಾಡುವಾಗ ಉದಾಹರಣೆಗಳನ್ನು ಕೊಟ್ಟು ತಿಳಿಸಲು ಪ್ರಯತ್ನಿಸಿದ್ದೇವೆ. ಕಾಯಿದೆಯ ಸಾರವು ಮತ್ತು ವ್ಯಾಪ್ತಿಯು ಓದುಗರಿಗೆ ಮನವರಿಕೆಯಾದರೆ ನಮ್ಮ ಪ್ರಯತ್ನವು ಸಫಲವೆಂದು ನಾವು ತಿಳಿಯುತ್ತೇವೆ.

—ಗ್ರಂಥಕರ್ತರು

ನ್ಯಾಯ ನಿಷ್ಠುರರೂ ದೇಶ ಸೇವಕರೂ

ವಕೀಲಿ ವ್ಯವಸಾಯದಲ್ಲಿ ನಿರಂತರ ಸ್ಫೂರ್ತಿದಾತರೂ

ಆಗಿರುವ

ಶ್ರೀ ಮುದವೀಡಕರ ವೆಂಕಟರಾಯರು

ಅ ವ ರಿ ಗೆ

ಪ್ರೀತಿ-ಭಕ್ತಿ-ವಿಶ್ವಾಸಗಳಿಂದ

ಅರ್ಪಿಸಿದ

**ಮುಡಿಪು**

—ಎನ್. ಕೆ. ದೀಕ್ಷಿತ

—ನೆಗಳೂರ ರಂಗನಾಥ

# ಪ ರಿ ವಿ ಡಿ

## ಕಂಪನಿಗಳಿಗೆ ಮಾಡಿದ ಹಸ್ತಾಂತರಗಳ ಸಂಬಂಧವಾಗಿ ವಿಶೇಷ ಕಲಮುಗಳು.



## ಭಾಗ ಮೂರು : ವಾರಸಾಕರ ಭಾರಕ್ಕಾಗಿ ಅಪವಾದಗಳು

## ಭಾಗ ನಾಲ್ಕು : ಆಸ್ತಿಯನ್ನು ಕೂಡಿಸುವಿಕೆ ಮತ್ತು ವಾರಸಾಕರದ ದರಗಳು



## ಭಾಗ ಐದು : ಕರದ ಆಕರಣೆಗಾಗಿ ಬೆಲೆ



## ಭಾಗ ಆರು: ಕಡಿತಗಳು

## ಭಾಗ ಎಂಟು : ಆಸ್ತಿಯ ಮೇಲೆ ವಾರಸಾಕರದ ಭಾರ ಮತ್ತು ಅದನ್ನು ಎತ್ತುವ ಅನುಕೂಲತೆಗಳು



## ಭಾಗ ಒಂಬತ್ತು: ಸಂಕೀರ್ಣ

# ವಾರಸಾ ಕರ ಕಾಯಿದೆ

## ಪ್ರಸ್ತಾವನೆ

**ಹೆಸರು**

'ವಾರಸಾ ಕರ ಕಾಯಿದೆ' ಇದು ದಿ ಇಸ್ಟೇಟ ಡ್ಯೂಟಿ ಆ್ಯಕ್ಟ ಎಂದು ಕರೆಯಲ್ಪಡುವ ಕಾಯಿದೆಯ ಕನ್ನಡ ರೂಪ. ಇಸ್ಟೇಟ ಡ್ಯೂಟಿ ಎಂಬುದನ್ನು ನೇರವಾಗಿ ಕನ್ನಡದಲ್ಲಿ ಭಾಷಾಂತರಿಸಿದರೆ 'ಆಸ್ತಿಕರ' ಎಂದು ಆಗುವುದು.. ಆದರೂ 'ವಾರಸಾ ಕರ' ಎಂಬ ರೂಪವನ್ನು ನಾವು ಅಂಗೀಕರಿಸಿದ್ದೇವೆ. ಅದಕ್ಕೆ ಕಾರಣಗಳು ಇವೆ. 'ಆಸ್ತಿಕರ' ಎಂಬ ಭಾಷಾಂತರವು ಅಕ್ಷರಶಃ ಮಾಡಿದ ಭಾಷಾಂತರವು ಆಗುತ್ತದೆ. ಆದರೆ ಹೆಸರು ಹೇಳಿದ ಕೂಡಲೆ ಅರ್ಥವಾಗಬೇಕೆಂದೂ ಅದರಲ್ಲಿಯ ಸತ್ವವು ತಿಳಿಯಬೇಕೆಂದೂ ನಾವು 'ವಾರಸಾಕರ' ಎಂಬ ರೂಪವನ್ನು ರೂಢಿಯಲ್ಲಿ ತಂದಿದ್ದೇವೆ.

ಈ 'ಇಸ್ಟೇಟ ಡ್ಯೂಟಿ' ಎಂಬ 'ಆಸ್ತಿಕರ'ವು ಆ ಆಸ್ತಿಯ ಯಜಮಾನನು ಮರಣಹೊಂದಿದ ನಂತರ ಆಕಾರ ಮಾಡಲ್ಪಡುವುದು. ಆಸ್ತಿಯ ಅಸ್ತಿತ್ವವು ಮುಖ್ಯವಾಗಿದ್ದರೂ ಯಜಮಾನನ ಮರಣವೂ ಅಷ್ಟೇ ಮುಖ್ಯವಾಗುವುದು. ಕರವು ಯಾರಿಗೆ ಭಾರವಾಗುವುದು ? ಆ ಆಸ್ತಿಯ ಯಜಮಾನನು ಮರಣ ಹೊಂದಿರುವುದರಿಂದ ಅವನಿಗೆ ಕರಭಾರದ ಪ್ರಶ್ನೆಯು ಬರುವುದಿಲ್ಲ. ಸತ್ತವರು ಯಾರೂ ಸುಂಕವನ್ನು ಕೊಡುವುದು ಶಕ್ಯವಿಲ್ಲ. ಯಜಮಾನನ ಮರಣನಂತರ ಯಜಮಾನನ ಆಸ್ತಿಯು ಯಾರಿಗೆ ಲಾಭವನ್ನು ತರುವುದೋ ಅವರೇ ಕರದ ಭಾರವನ್ನು ವಹಿಸುವರು. ಅಂದರೆ ಸತ್ತ ಯಜಮಾನನ ಆಸ್ತಿಗೆ ವಾರಸದಾರರಾಗುವವರು ಕರವನ್ನು ಕೊಡಬೇಕಾಗುವುದು. ಆದರೆ ವಾರಸದಾರರು ತಮ್ಮ ಸ್ವಂತದ ಆಸ್ತಿಯ ಬಗ್ಗೆ ಕರ ಕೊಡುವರು ಎಂದಲ್ಲ. ಕರ ಕೊಡುವವರು ವಾರಸದಾರರು ಆದರೂ ಕರ ಕೊಡಬೇಕಾದುದು ಸತ್ತ ಯಜಮಾನನ ಆಸ್ತಿಯ ಬಗ್ಗೆ; ಆ ಆಸ್ತಿಯ ಮೇಲೆ ಕರ ಕೊಡಬೇಕಾಗುವುದು. ಆದುದರಿಂದ ಆಸ್ತಿಯ ಮೇಲೆಯೆ ಕರ ಕೊಟ್ಟಂತಾಗುವುದು. ಆದಕ್ಕಾಗಿ ಆಸ್ತಿಕರ ಎಂದು ಹೆಸರು ಬಂದಿದೆ. ಆಸ್ತಿಯ ಯಜಮಾನನು ಮರಣಹೊಂದಿ ವಾರಸದಾರರು ಅವನ ಆಸ್ತಿಗೆ ಬಾಧ್ಯರಾಗಿ ಅವರು ಆ ಆಸ್ತಿಯ ಮೇಲೆ ಕರ ಕೊಡುವರೆಂಬ ಕಾರಣಕ್ಕಾಗಿ 'ವಾರಸಾಕರ' ಎಂಬ ಪದವು ಹೆಚ್ಚು ಸಮರ್ಪಕ ಮತ್ತು ಹೆಚ್ಚು ಅರ್ಥವತ್ತಾಗುವುದು. 'ವಾರಸಾ' ಶಬ್ದದ ಉಚ್ಚಾರದಿಂದ ಯಾರೊಬ್ಬರು ಸತ್ತಿದ್ದಾರೆಂಬುದೂ ಸತ್ತವರಿಗೆ ಆಸ್ತಿ ಎಂಬುದು ಇದೆಯೆಂಬುದೂ ಸೂಚಿತವಾಗುವುದರಿಂದ ಆಸ್ತಿಕರ ಎಂಬ ಹೆಸರಿನ ಬದಲು ನಾವು 'ವಾರಸಾಕರ' ಎಂದೇ ಉಪಯೋಗಿಸಿದ್ದೇವೆ.

## ಉದ್ದೇಶ

ಯಾವುದೊಂದು ಬಗೆಯ ಕರವು ಹೇರಲ್ಪಡುವ ಉದ್ದೇಶವು ಕರಹೇರುವ ಸರಕಾರಕ್ಕೆ ಸರಕಾರವೆಂದು ಕಾರ್ಯವನ್ನು ಕಾರ್ಯಕ್ಷಮವಾಗಿ ನಡಸಲಿಕ್ಕೆ ಬೇಕಾಗುವ ಧನಸಂಗ್ರಹ ಮಾಡುವುದೇ ಮೂಲ ಉದ್ದೇಶವಾಗಿರುವುದು ಎಲ್ಲ ವಿಚಾರವಂತರಿಗೂ ತಿಳಿದ ಮಾತು. ಉಳಿದ ಕರಗಳಿಗೆಲ್ಲ ಅನ್ವಯಿಸುವ ಸಾಮಾನ್ಯ ತತ್ವವು ವಾರಸಾ ಕರಕ್ಕೂ ಅನ್ವಯಿಸುವುದು. ಆದರೆ ವಾರಸಾ ಕರ ಹಾಕುವುದಕ್ಕೆ ವಿಶಿಷ್ಟವಾದ ಉದ್ದೇಶವೂ ಇದೆ. ಸಮಾಜದಲ್ಲಿ ಸಂಪತ್ತು ಒಂದೆಡೆಗೆ ಸಂಗ್ರಹವಾಗುತ್ತ ಹೋಗುವುದರಿಂದ ಸಮಾಜದಲ್ಲಿ ಸಾಂಪತ್ತಿಕ ಸಮತೂಕವು ತಪ್ಪುವುದು. ಸಮಾಜದಲ್ಲಿ ಸಾಂಪತ್ತಿಕ ವಿಷಮತೆ ಹೆಚ್ಚಿದಂತೆಲ್ಲ ಸಮಾಜದಲ್ಲಿ ಅಸುಖ–ಅಸಮಾಧಾನಗಳು ತಲೆದೋರುವುವು. ಸುಖ–ಸಮಾಧಾನ–ಸಂರಕ್ಷಣೆ–ಸಂವರ್ಧನೆಗಳಿಗೆ ಆಸ್ಪದ ಮಾಡಿಕೊಡುವುದೇ ಸಮಾಜದ ಕರ್ತವ್ಯ. ಈ ಕರ್ತವ್ಯವನ್ನು ಸರಕಾರವು ವಹಿಸಿಕೊಂಡಿರುತ್ತದೆ. ಸಮಾಜ ಕಲ್ಯಾಣದೃಷ್ಟಿಯಿಂದ ಸರಕಾರವನ್ನು ನಡಸುತ್ತಿರುವಾಗ ಸಮಾಜದಲ್ಲಿ ಯಾವ ಬಗೆಯ ವಿಷಮತೆ, ಅಸಮಾನತೆ, ಅಸುಖ, ಅಸಮಾಧಾನ, ಅತೃಪ್ತಿ, ಇವುಗಳನ್ನು ಇಲ್ಲದಾಗಿಸುವಂತೆ ಮಾಡುವುದು, ಕನಿಷ್ಠಪಕ್ಷಕ್ಕೆ ಇವುಗಳ ವ್ಯಾಪ್ತಿಯನ್ನು ಕಡಿಮೆ ಮಾಡುವುದು ಸರಕಾರದ ಧ್ಯೇಯವಾಗಿರುವುದು. ಸಾಂಪತ್ತಿಕ ವಿಷಮತೆಯು ಸಕಲ ಸಾಮಾಜಿಕ ಸಂಕಟಗಳ ತವರು ಎಂದು, ತಿಳಿದು ಸಾಮಾಜಿಕ ಸಂಕಟಗಳ ನಿವಾರಣೆಗಾಗಿ ಸಾಂಪತ್ತಿಕ ವಿಷಮತೆಯನ್ನು ಹೋಗಲಾಡಿಸಬೇಕೆಂಬ ಉದ್ದೇಶವು ಎದ್ದುಕಾಣುವುದು. ವಾರಸಾ ಕರದಿಂದ ಸಾಮಾಜಿಕ ವಿಷಮತೆಯನ್ನು ಕಡಿಮೆಮಾಡುವ ಉದ್ದೇಶವಿದೆ. ಸಮತೆ–ಸಮಾನತೆಗಳು ಸಮಾಜವಾದದ ತತ್ವದಲ್ಲಿ ಅಡಕವಾದ ಶಬ್ದಗಳಾಗಿವೆ. ಜಾಗತಿಕ ವಿಚಾರದ ಸೆಳವು ಈ ಶತಕದಲ್ಲಿ ಸಮಾಜವಾದ ಮತ್ತು ಸಮತಾವಾದದ ಕಡೆಗೆ ಇದೆಯೆಂಬುದನ್ನು ಯಾರೂ ಗಮನಿಸತಕ್ಕ ಮಾತು. ಪ್ರತಿಯೊಬ್ಬ ವ್ಯಕ್ತಿಗೂ ಅವನ ಯೋಗ್ಯತಾ ವಿಕಾಸಕ್ಕೆ ಸಮಾನಾವಕಾಶ ಕಲ್ಪಿಸಿಕೊಡಬೇಕಾದರೆ, ಸರಕಾರವು ಹೆಚ್ಚಿನ ಹೊಣೆಯನ್ನು ಹೊರಬೇಕಾಗುವುದು. ಅನಿವಾರ್ಯವಾದ ಈ ಹೊಣೆಯನ್ನು ವಹಿಸಿಕೊಂಡ ಸರಕಾರವು ಸಾಂಪತ್ತಿಕ ದಾರ್ಢ್ಯ ಪಡೆಯಲು, ಸಮಾಜದಲ್ಲಿಯ ಸಾಂಪತ್ತಿಕ ವಿಷಮತೆ ದೂರಮಾಡಲು ವಾರಸಾ ಕರವನ್ನು ರೂಢಿಯಲ್ಲಿ ತಂದಿದೆ.

## ಇತಿಹಾಸ

ವಾರಸಾಕರವು ಕೇವಲ ಆಧುನಿಕ ಯುಗದ ಕೂಸು ಅಲ್ಲ. ಬಹು ಪ್ರಾಚೀನ ಕಾಲದಿಂದಲೂ ಇದೆ. ಕಾಲಗತಿಯಲ್ಲಿ ರೂಪ ಬದಲಾಗುತ್ತ ನಡೆದಿದೆಯೆ ಹೊರತು ರೂಢಿ ಬದಲಾಗಿಲ್ಲ. ಉತ್ತರ ಕ್ರಿಯಾಕರ್ಮಗಳಲ್ಲಿ ಪ್ರೇತ ಪ್ರೀತ್ಯರ್ಥವಾಗಿ ದಾನ ಧರ್ಮಾದಿಗಳನ್ನು ಮಾಡಬೇಕೆಂದು ಬಹು ಹಳೆಯ ಕಾಲದಿಂದಲೂ ಹೇಳಿಕೊಳ್ಳುತ್ತ

ಒಂದಿದ್ದಿತೆ. ಸತ್ತವನ ಆಸ್ತಿಗೆ ಉತ್ತರಾಧಿಕಾರಿಯಾಗುವವನೇ ಉತ್ತರ ಕ್ರಿಯೆಗಳನ್ನೂ ಮಾಡಲು ಅಧಿಕಾರಿಯು; ಅವನೇ ದಾನ ಧರ್ಮಗಳನ್ನೂ ಮಾಡಬೇಕಾಗುತ್ತಿತ್ತು. ದಾನಧರ್ಮದ ಗಾತ್ರವ್ಯಾಪ್ತಿಯು ಸತ್ತವನ ಐಹಿಕ ಸ್ಥಾನಮಾನ ಸಂಪತ್ ಸಾಧನಗಳನ್ನೂ ಅವಲಂಬಿಸುತ್ತಿತ್ತು. ಧಾರ್ಮಿಕ ಆಚರಣೆಯೆಂದು ಕಂಡು ಬಂದರೂ ಅದು ಆರ್ಥಿಕ ವಿತರಣೆಯ ಉದ್ದೇಶವನ್ನೇ ಇಟ್ಟುಕೊಂಡಿರುತ್ತಿತ್ತು. ಉತ್ತರಾಧಿಕಾರಿಗೆ ಅವನ ಸ್ವಂತದ ಶ್ರಮವಿಲ್ಲದೆ ಆಸ್ತಿ ದೊರಕುತ್ತಿತ್ತೆಂದು ಅವನು ದಾನಧರ್ಮ ಮಾಡಬೇಕು; ಮಾಡಿದರೆ ಸಂಪತ್ತಿನ ವಿತರಣೆಯು ಸಮಾಜದಲ್ಲಿ ಆಗುತ್ತಿತ್ತು, ಎಂದು ಸೂಚನೆ ಇದ್ದಿತು. ದಾನಧರ್ಮಗಳು ಬ್ರಾಹ್ಮಣರಿಗೆ ಮಾಡಬೇಕಾಗುತ್ತಿದ್ದಿತು. ಇವರು ಸಮಾಜದಲ್ಲಿ ಇದ್ದುಳ್ಳ ವರ್ಗವಾಗಿದ್ದಿಲ್ಲ. ಆದ್ದರಿಂದ ಇದ್ದುಳ್ಳವರು ಇಲ್ಲದವರಿಗೆ ಯೋಗ್ಯರಿಗೆ ದಾನಮಾಡಬೇಕು, ಎಂಬ ಧಾರ್ಮಿಕ ವಿಧಿನಿಯಮದ ಆಡಿಯಲ್ಲಿ ಈಗಿನ ವಾರಸಾಕರದ ಭಾವನೆಯೇ ಇದ್ದಿರಬೇಕೆಂದು ಅನ್ನಿಸುತ್ತದೆ.

ಇತಿಹಾಸ ಪೂರ್ವದ ಕಾಲದ ಮಾತು ಧಾರ್ಮಿಕ ತಳಹದಿಯದ್ದು. ಆಗ ಎಲ್ಲವೂ ಧರ್ಮ ಎಂಬ ಹೆಸರಿನಲ್ಲಿಯೇ ಬರುತ್ತಿತ್ತು. ಧರ್ಮವು ಕರ್ತವ್ಯವು. ಧರ್ಮವೆ ಕಾಯಿದೆ. ಆದ್ದರಿಂದ ಆಗಿನ ಸಾಮಾಜಿಕ ಸಂಘಟನೆಯನುಸಾರ ಅದೊಂದು ಕರಭಾರವೇ ಆಗಿದ್ದಿತೆಂದು ಹೇಳಿದರೆ ತಪ್ಪಲ್ಲ. ಧರ್ಮದ ಶಕ್ತಿಯು ಕಡಿಮೆಯಾಗಿ ಶಾಸನದ ಪ್ರಭಾವವು ಹೆಚ್ಚಾಗತೊಡಗಿದ ಹಾಗೆ ಕರಭಾರಗಳು ಕಾಯಿದೆಯ ಅಂಗವಾಗತೊಡಗಿದುವು. ಶಾಸನವೆಂದು ಆಗುವ ಕಾಲಕ್ಕೆ ರಾಜಧರ್ಮವು ಅರ್ಥಶಾಸ್ತ್ರವಾಗಿದ್ದಿತು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ವಿವಿಧ ರೀತಿಯಿಂದ ರಾಜನು ತನ್ನ ಬೊಕ್ಕಸವನ್ನು ತುಂಬಿಕೊಳ್ಳುವ ರೀತಿ ನೀತಿಗಳನ್ನು ಹೇಳಲಾಗಿದೆ. ಅರ್ಥ-ಶಾಸ್ತ್ರದ ವಿಧಿನಿಯಮಗಳಿಗಾದರೂ ಪೂರ್ವಕಾಲದ ಆಧಾರಗಳಿವೆ. ವೇದೋಪನಿಷತ್ತುಗಳಲ್ಲಿ ಧರ್ಮವನ್ನು ಹೇಳಲಾದರೆ ಸೂತ್ರಕಾಲದಲ್ಲಿ ನೀತಿನಿಯಮಗಳನ್ನು ಹೇಳಲಾಯಿತು. "ರಾಜಧರ್ಮ ಎಂಬ ಆಖ್ಯಾಯಿಕೆಯ ಕೆಳಗೆ ಚರ್ಚಿಸಲಾದ ಧರ್ಮ-ಕಾಯಿದೆಗಳು, ನಾಗರಿಕ ಕಾಯಿದೆ ಕಾನೂನುಗಳಿಗೆ ವಿಶಿಷ್ಟವಾದವುಗಳು ಆಗಿದ್ದವು. ಮುಖ್ಯತಃ ಅವು ಕರಭಾರ ಮತ್ತು ವಾರಸಾ ಹಕ್ಕುಗಳಿಗೆ ಸಂಬಂಧಪಟ್ಟಿದ್ದವು. ಗೌತಮ ಸೂತ್ರಗಳ ಪ್ರಕಾರ ರಾಜನು ಪ್ರಜೆಗಳಿಂದ ಅವರು ಉತ್ಪಾದಿಸಿದುದರಲ್ಲಿ ೧/೧೦, ೧/೮, ಇಲ್ಲವೆ ೧/೬ ತೆಗೆದುಕೊಳ್ಳಬಹುದಾಗಿದ್ದಿತು. ಕೈಗಾರಿಕೆಯಲ್ಲಿ ತೊಡಗಿದವನಿಂದ ಒಂದು ತಿಂಗಳಿಗೆ ಒಂದು ದಿನದ ಕೆಲಸದ ಬೆಲೆಯನ್ನು ತೆಗೆದುಕೊಳ್ಳಲಾಗುತ್ತಿದ್ದಿತು. ಸರಕುಗಳ ಮೇಲೆ ರಾಜನಿಗೆ ೧/೨೦ ದೊರೆಯುತ್ತಿದ್ದಿತು. ದನಕರುಗಳ ಮತ್ತು ಬಂಗಾರದ ೧/೫, ಗಡ್ಡೆ, ಬೇರುಗಳು, ಹಣ್ಣು, ಹೂ, ವನಸ್ಪತಿ, ಜೇನು, ಮಾಂಸ, ಹುಲ್ಲು, ಉರುವಲು ಕಟ್ಟಿಗೆ ಮುಂತಾದವುಗಳಲ್ಲಿ ೧/೬೦ ಪಾಲು ರಾಜನದು." ಎಂದು ರಾಧಾಕುಮುದ ಮುಖರ್ಜಿಯವರು ವೇದೋತ್ತರ ಸಾಹಿತ್ಯದ ಬಗ್ಗೆ ಬರೆಯುವಾಗ ಉಲ್ಲೇಖಿಸಿರುವರು.

ಕೌಟಿಲ್ಯನು ಇಂತಹ ವಿಷಯಗಳನ್ನು ಕ್ರೋಢೀಕರಿಸಿ ತನ್ನ ಅರ್ಥಶಾಸ್ತ್ರದಲ್ಲಿ ಮಂಡಿಸಿದನು. "ಸಿರಿವಂತರು ತಮ್ಮಲ್ಲಿದ್ದ ಧನಕನಕಗಳನ್ನು ಶಕ್ಯವಿದ್ದಷ್ಟು ಹೆಚ್ಚಿಗೆ ರಾಜನಿಗೆ ಕೊಡಬೇಕು. ಇಲ್ಲವಾದರೆ ಅವರು ಸತ್ತಮೇಲೆ ಗೂಢಚಾರರು ಮಾಂತ್ರಿಕರ ಸೋಗಿನಲ್ಲಿ ಇದ್ದದ್ದನ್ನೆಲ್ಲ ದೋಚಿಕೊಳ್ಳುವರು" ಎಂದು ಕೌಟಿಲ್ಯನು ಹೇಳಿದ್ದಾನೆ. ಉಳಿದ ರೀತಿಯ ಕರಗಳ ಆಕರಣೆ ಮತ್ತು ವಸೂಲಿಯ ಬಗ್ಗೆ ವಿವರವಾಗಿ ಹೇಳಿದ್ದಾನೆ.

ವಾರಸಾಕರವು ಹಳೆಯಕಾಲದಲ್ಲಿ ಕೇವಲ ಭಾರತದಲ್ಲಿ ಮಾತ್ರವಿದ್ದಿತು, ಎಂದು ತಿಳಿಯಲಾಗದು. ಕ್ರಿ. ಪೂರ್ವದ ಇಜಿಪ್ತದಲ್ಲಿ ಹತ್ತು ಶತಾಂಶ ಕರವು ವಾರಸಾ ಹಕ್ಕಿನ ಮೇಲೆ ಆಕಾರ ಮಾಡುತ್ತಿದ್ದರೆಂದು ತಿಳಿಯುತ್ತದೆ. ಗ್ರೀಕರು ಇಜಿಪ್ತದ ಸಂಸ್ಕೃತಿಯಿಂದ ಪ್ರಭಾವಿತರಾಗಿರುವರು. ಅವರಲ್ಲಿಯೂ ಈ ಮಾದರಿಯ ಕರದ ಅಸ್ತಿತ್ವವಿದ್ದುದು ಕಂಡು ಬರುವದು. ರೋಮನ್ ಸಮ್ರಾಟ ಅಗಸ್ಟಸನು ವಾರಸಾ ಕರವನ್ನು ಆಸ್ತಿಯ ಐದು ಶತಾಂಶದಷ್ಟು ವಿಧಿಸಿದ್ದನು. ಈ ಕರವು ಮೃತ್ಯುಪತ್ರದ ಮುಖಾಂತರವಾಗಿ ಬಂದ ಇಲ್ಲವೆ ಮೃತ್ಯುಪತ್ರವಿಲ್ಲದೆಯೆ ಹಾಗೆಯೆ ಬಂದ ಆಸ್ತಿಗೂ ಅನ್ವಯಿಸುತ್ತಿದ್ದಿತು.

ಮಾನವ ಇತಿಹಾಸವನ್ನು ಜನಾಂಗಿಕವಾಗಿ ಇಲ್ಲವೆ ದೇಶವಾರುವಾಗಿ ನೋಡಿದರೂ ಎಲ್ಲೆಡೆಯಲ್ಲಿಯೂ ಕರಭಾರದ ವ್ಯವಸ್ಥೆಯು ಒಂದಿಲ್ಲೊಂದು ಸ್ವರೂಪದಲ್ಲಿ ಇದ್ದುದೂ ಆಸ್ತಿಯ ಕರವು, ವಾರಸಾಕರವು, ಮೃತ್ಯುಕರವು ರೂಪುಗೊಳ್ಳುತ್ತ ನಡೆದುದೂ ಕಂಡುಬರುವವು. ಸಮಾಜ ವ್ಯವಸ್ಥೆಯಲ್ಲಿ ರಾಜಸತ್ತೆಯು ರೂಢವಾಗಿದ್ದ ಕಾಲದವರೆಗೆ ಕಪ್ಪ-ಕಾಣಿಕೆಗಳ ರೂಪದಲ್ಲಿಯೂ ಕರ ತೆರಿಗೆಗಳ ರೂಪದಲ್ಲಿಯೂ ಸಾರ್ವಜನಿಕ ಬೊಕ್ಕಸವು ತುಂಬಲ್ಪಟ್ಟು, ಆ ಹಣದಿಂದ ಸಾರ್ವಜನಿಕ ಸಂರಕ್ಷಣೆಯನ್ನು ಸಮಾಜದ ಸದಸ್ಯರಿಗೆ ಕೊಡಲಾಗುತ್ತಿದ್ದುದು ಸ್ಪಷ್ಟವಾಗಿ ಕಾಣುವುದು. ಸಾಂಪತ್ತಿಕ ಸಮಾನ ವಿತರಣೆಯ ವಿಚಾರವು ಆಧುನಿಕ ಅರ್ಥದಲ್ಲಿ ಕಂಡುಬರದೆ ಇದ್ದರೂ ಸಾಂಪತ್ತಿಕ ಕೇಂದ್ರೀಕರಣವು ಒಳ್ಳಿತಲ್ಲವೆಂಬ ಹಾಗೆ ಸಮಾಜದಲ್ಲಿ ಭಾವನೆಯುಂಟಾಗುವಂತೆ, ಸಮಾಜದಲ್ಲಿ ತಾತ್ವಿಕ ವಿಚಾರಗಳು, ಧಾರ್ಮಿಕ ವಿಚಾರಗಳು, ರೂಢವಾಗಿದ್ದುವು. ಭಾರತದಲ್ಲಿಯ ಚತುರಾಶ್ರಮ ಮತ್ತು ಚತುರ್ವಿಧ ಪುರುಷಾರ್ಥಗಳಲ್ಲಿ ಅಡಕವಾದ ವಿಚಾರಗಳನ್ನು ನೋಡಿದರೆ, ಮಾನವನು ಜೀವನಾಂತದಲ್ಲಿ ದಾನ ಧರ್ಮಗಳಿಂದ ಮುಕ್ತಿಸಾಧನ ಮಾಡಿಕೊಳ್ಳಬೇಕೆಂದು ಹೇಳಿದುದು ಪರ್ಯಾಯವಾಗಿ ಸಾಂಪತ್ತಿಕ ವಿಕೇಂದ್ರೀಕರಣವೇ ಆಗಿದ್ದಿತು.

ಪ್ರಾಚೀನಕಾಲದಲ್ಲಿ ಧಾರ್ಮಿಕವಾಗಿದ್ದುದು ಆಧುನಿಕ ಕಾಲದಲ್ಲಿ ಶಾಸನಿಕವಾಗಿದೆ. ೧೭-೧೮ ನೆಯ ಶತಕದ ಸುಮಾರಿಗೆ ಯುರೋಪದ ಅನೇಕ ರಾಷ್ಟ್ರಗಳಲ್ಲಿ ಮುಖ್ಯತಃ ಇಂಗ್ಲಂಡ, ಫ್ರಾನ್ಸ್, ಸ್ಪೇನ, ಪೋರ್ತುಗಾಲ, ಹಾಲಂಡ ದೇಶಗಳಲ್ಲಿ

ಉತ್ತರಾಧಿಕಾರಿತ್ವದ ತೆರಿಗೆಯು ಜಾರಿಯಲ್ಲಿ ಒಂದಿದ್ದಿತು. ಭಾರತದಲ್ಲಿಯ ಮಲಬಾರ ದಲ್ಲಿಯೂ ಈ ಬಗೆಯ ತೆರಿಗೆಯು ಅಸ್ತಿತ್ವದಲ್ಲಿ ಬಂದಿದ್ದಿತು. ಆಧುನಿಕ ರೂಪದಲ್ಲಿ ಕಾಯಿದೆಯ ಅಂಗವಾಗಿ ವಾರಸಾಕರವು ಮೂಲತಃ ಫ್ರಾನ್ಸದಲ್ಲಿ ೧೭೯೬ ರಲ್ಲಿ ಪ್ರಾರಂಭವಾಯಿತು. ಫ್ರೆಂಚ ರಾಜ್ಯಕ್ರಾಂತಿಗೆ ಆ ದೇಶದಲ್ಲಿಯ ಸಿರಿವಂತ–ಮತ್ತು ಬಡವರಲ್ಲಿಯ ಸಾಂಪತ್ತಿಕ ವೈಷಮ್ಯವು ಮುಖ್ಯ ಕಾರಣವಾಗಿದ್ದಿತು. ಸಂಪತ್ತು ಕೆಲವೇ ಜನರಲ್ಲಿ ಕೇಂದ್ರೀಕೃತವಾಗುವುದರಿಂದ ಅವರೇ ಅಧಿಕಾರ ಸತ್ತೆ ನಡೆಸುವ ಸಂಗಡವಾಗುವುದು. ಪ್ರಜಾಸತ್ತೆಯ ಯುಗವು ಪ್ರಾರಂಭವಾಗುವ ಮುನ್‌ಸೂಚಿಯಂತೆ ರಾಜ್ಯಕ್ರಾಂತಿಯು ಒದಗಿ ಬಂದಿತು. ಅದರ ಪರಿಣಾಮವಾಗಿ, ಸಾಂಪತ್ತಿಕ ಸಮಾನತೆಯನ್ನುಂಟುಮಾಡಬೇಕೆಂಬ ಹವ್ಯಾಸ ಕಂಡು ಬಂದಿತು. ಸಾಂಪತ್ತಿಕ ಸಮಾನತೆಯನ್ನುಂಟುಮಾಡಲು ವಾರಸಾಕರವು ಬಹು ಪರಿಣಾಮ ಕಾರಿಯಾದುದು.

ಫ್ರಾನ್ಸದಲ್ಲಿ ಕ್ರಾಂತಿಯ ಮೂಲಕ ಒದಗಿಬಂದ ಅನೇಕ ಸ್ಥಿತ್ಯಂತರಗಳು ಪ್ರಪಂಚದ ದೇಶಗಳ ವಿಚಾರದಲ್ಲಿ ವಿವಿಧ ರೀತಿಯ ಪಲ್ಲಟ ಒದಗಿಸಿದರೂ ಆಚರಣೆ ಯಲ್ಲಿ ನೆಲೆನಿಲ್ಲಲು ಬಹುಕಾಲಬೇಕಾಯಿತು. ೧೮೮೮ ರಲ್ಲಿ ನ್ಯೂಜೀಲಂಡದಲ್ಲಿ ವಾರಸಾ ಕರವು ಆಚರಣೆಯಲ್ಲಿ ಬಂದಿತು. ಕಾನಡಾದಲ್ಲಿ ೧೮೯೨ ರಲ್ಲಿ ವಾರಸಾಕರವು ರೂಢಿ ಯಲ್ಲಿ ಬಂದಿತು. ಇಂಗ್ಲಂಡದಲ್ಲಿ ೧೮೯೪ ರಲ್ಲಿ ಶಾಸನಬದ್ಧವಾಗಿ ಆಧುನಿಕ ರೂಪದಲ್ಲಿ ಬಂದಿತು. ಮೃತ್ಯುಕರ–ವಾರಸಾಕರಗಳ ಆಧುನಿಕ ಇತಿಹಾಸದಲ್ಲಿ ಈ ಕಾಯಿದೆಯು ತಾಯಿಬೇರಾಗಿ ನಿಂತಿದೆ. ಉಳಿದ ದೇಶಗಳಿಗೆ ಸ್ಫೂರ್ತಿಯನ್ನು ಕೊಟ್ಟುದು ಇಂಗ್ಲಂಡದ ಕಾಯಿದೆಯೆ. ಅದೇ ಮಾರ್ಗದರ್ಶನಮಾಡಿದೆ. ೧೯೦೫ ರಲ್ಲಿ ಜಪಾನು ಮೃತ್ಯುಕರವನ್ನು ಜಾರಿಯಲ್ಲಿ ತಂದಿತು. ೧೯೧೪ ರಲ್ಲಿ ಆಸ್ಟ್ರೇಲಿಯವು ವಾರಸಾಕರ ಕಾಯಿದೆಯನ್ನು ಮಾಡಿತು. ಅಮೇರಿಕೆಯ ಸಂಯುಕ್ತ ಸಂಸ್ಥಾನವು ೧೯೧೬ ರಲ್ಲಿ ಕಾಯಿದೆ ಪಾಸು ಮಾಡಿತು. ಈ ಕಾಯಿದೆ ಕಾನೂನುಗಳಿಗೆ ೧೮೯೪ ರ ಇಂಗ್ಲಂಡದ ವಾರಸಾಕರ ಕಾಯಿದೆಯು ತಳಹದಿಯಾಗಿದೆ. ಭಾರತದ ಇಂದಿನ ಕಾಯಿದೆಯಾದರೂ ಇಂಗ್ಲಂಡದ ಕಾಯಿದೆಯನ್ನೇ ಕಣ್ಣುಮುಂದಿಟ್ಟುಕೊಂಡಿದೆ.

ಭಾರತದ ಈ ಕಾಯಿದೆಯನ್ನು ಮೂಲತಃ ದಿವಂಗತ ಸರ ಬೆನಗಲ್ ನರಸಿಂಗ ರಾಯರು ರೂಪಿಸಿದರು. ಅದನ್ನು ೧೯೪೬ ರಲ್ಲಿ ಕೇಂದ್ರ ಶಾಸನಸಭೆಯಲ್ಲಿ ಸರ ಆರ್ಚಿಬಾಲ್ಡ ರೊಲಂಡ್ಸರು ಮಂಡಿಸಿದರು. ಆದರೆ ಅದರ ಪ್ರಗತಿಯಾಗಲಿಲ್ಲ. ಮುಂದೆ ೧೯೪೭ರಲ್ಲಿ ಸ್ವಾತಂತ್ರ್ಯ ಪ್ರಾಪ್ತಿಯಾಯಿತು. ಸ್ವಾತಂತ್ರ್ಯ ಪ್ರಾಪ್ತಿಯನಂತರ ೧೯೪೮ ರಲ್ಲಿ ಪುನಃ ಶಾಸನಸಭೆಯೆದುರು ಬಂದರೂ ಘಟನಾತ್ಮಕ ಬದಲಾವಣೆಗಳು ನಡೆದು ದರಿಂದ ಆಗಲೂ ಅದು ಪ್ರಗತಿ ಹೊಂದಲಿಲ್ಲ. ಈ ಮಸೂದೆಯು ಮೂರನೆಯ ಸಲ ೧೯೫೨ ರಲ್ಲಿ ಲೋಕಸಭೆಯಲ್ಲಿ ಮಂಡಿತವಾಯಿತು. ೧೯೫೩ ರ ಸಪ್ಟಂಬರ ೨೧ ಕ್ಕೆ

ಕಾಯಿದೆಯು ಪಾಸಾಯಿತು. ೧೯೫೩ ರ ಅಕ್ಟೋಬರ ೬ ನೆಯ ದಿನಾಂಕಕ್ಕೆ ಕಾಯಿದೆಗೆ ರಾಷ್ಟ್ರಪತಿಗಳ ಅಂಕಿತ ಬಿದ್ದಿತು. ೧೯೫೩ ನೆಯ ಅಕ್ಟೋಬರ ೧೫ ನೆಯ ದಿನಾಂಕಕ್ಕೆ ಈ ವಾರಸಾಕರ ಕಾಯಿದೆಯು ಜಾರಿಯಲ್ಲಿ ಬಂದಿತು.

**ವಾರಸಾಕರದ ಗುಣಾವಗುಣಗಳು**

ಈ ಪ್ರಪಂಚದಲ್ಲಿ ಗುಣಾವಗುಣಗಳಿಲ್ಲದ ಯಾವುದೇ ವಸ್ತು, ಅಥವಾ ವಿಚಾರ ಪ್ರಣಾಲಿ ಇಲ್ಲ. ಒಂದು ಬಗೆಯಿಂದ ಒಳ್ಳಿತು ಮಾಡಿದರೆ ಇನ್ನೊಂದು ಬಗೆಯಿಂದ ಅದು ಕೇಡು ಮಾಡುವುದು. ಕೇಡನ್ನು ಬದಿಗೆ ಸರಿಸಿ ಒಳ್ಳಿತಾದುದನ್ನು ಪಡೆಯುತ್ತ ಹೋಗುವುದೇ ಜಾಣ ಮಾನವನ ಕಾರ್ಯವಾಗಿದೆ ಅದಕ್ಕಾಗಿ ಪ್ರತಿಯೊಂದರ ಗುಣಾವಗುಣ ಒಳಿತು ಕೇಡು ಇವುಗಳನ್ನು ತಿಳಿಯಬೇಕಾಗುವುದು.

ವಾರಸಾಕರವು "ನೈಮಿತ್ತಿಕವಾದ ಆಸ್ತಿಕರ" ವೆಂದು ಬಣ್ಣಿಸೆ ಮಾಡಲ್ಪಟ್ಟಿದೆ. ಮಾಲಕನ ಮರಣದ ನಿಮಿತ್ತ ಆಸ್ತಿಯ ಮೇಲೆ ಹೇರಲಾದ ಕರ ಇದು ಆಗುವುದರಿಂದ ಆಸ್ತಿಯಕರಗಳಿಗೆ ಇರುವ ಎಲ್ಲ ಸ್ವಭಾವಜನ್ಯದೋಷಗಳು ಇದರಲ್ಲಿ ಇರುವುವು. ಈಗಿನ ಜಟಿಲತಮವಾದ ಸಾಮಾಜಿಕ ಯುಗದಲ್ಲಿ ಆಸ್ತಿಯ ರೂಪವು ಬಹುವಿಧವಾಗಿದೆ. ಪ್ರತಿಯೊಂದು ರೂಪದ ಆಸ್ತಿಯ ಉತ್ಪನ್ನ ಹುಟ್ಟುವಳಿಯ ಪ್ರಮಾಣವೂ ಬೇರೆ ಬೇರೆಯಾಗಿದೆ. ಆದುದರಿಂದ ಸಮಾನತೆಯನ್ನು ಉಂಟುಮಾಡುವ ಉದ್ದೇಶದಿಂದ ಮುಂದಾದ ಆಸ್ತಿಕರವು ವಿಷಮತೆಗೆ ಎಡೆಮಾಡಿಕೊಡುವ ಸಂಭವವಿದೆ. ಸಾರ್ವತ್ರಿಕವಾಗಿ ನ್ಯಾಯ ಉಂಟಾಗುವಂತೆ ಮಾಡಬೇಕೆಂದಾಗ ಕೆಲವಡೆಗಳಲ್ಲಿ ಅನ್ಯಾಯವಾಗುವುದು.

ವಾರಸಾಕರದ ಮೂಲವು ಮರಣದಲ್ಲಿರುವುದರಿಂದ ಮರಣ ಪ್ರಮಾಣ ಹೆಚ್ಚಾಗಿರುವ ಕುಟುಂಬಗಳಿಗೆ ಹೆಚ್ಚು ಆಘಾತವಾಗುವುದು. ಒಂದೆರಡು ಪೀಳಿಗೆಯ ಕಾಲಾವಧಿ ದಾಟುವಷ್ಟರಲ್ಲಿ ಆಸ್ತಿಯು ನಿರ್ನಾಮವಾಗಬಹುದು. ವಿಮಾ ಕಂಪನಿಯವರು ಮರಣ ಪ್ರಮಾಣವನ್ನು ಅಂಕಿಸಂಖ್ಯೆಗಳ ಮೂಲಕ ಕಂಡುಹಿಡಿದಿರುತ್ತಾರೆ. ವಾರಸಾಕರ ಜಾರಿಯಲ್ಲಿರುವ ಇಂಗ್ಲಂಡದಲ್ಲಿಯ ಈ ಅಂಕಿಗಳು ಲಕ್ಷಿಸುವಂತಹವಿವೆ. ೧೦೦೦೦ ಪೌಂಡುಗಳಕ್ಕಿಂತ ಹೆಚ್ಚು ಬೆಲೆಯುಳ್ಳ ೬೦೦೦ ಆಸ್ತಿಗಳಲ್ಲಿ ಮೂರು ಶತಾಂಶದಷ್ಟು ಆಸ್ತಿಗಳು ಐದು ವರುಷಗಳಲ್ಲಿ ಎರಡು ಸಲ ಕೈಬದಲಾಗುವುವು. ಮುಂದಿನ ಐದು ವರುಷಗಳಲ್ಲಿ ಐದು ಶತಾಂಶದಷ್ಟು, ಆ ಮುಂದಿನ ಐದು ವರುಷಗಳಲ್ಲಿ ಏಳೆಂಟು ಶತಾಂಶದಷ್ಟು, ಅಂದರೆ ೧೫ ವರುಷಗಳಲ್ಲಿ ೧೫–೧೬ ಶತಾಂಶದಷ್ಟು ಆಸ್ತಿಗಳು ಎರಡು ಸಲ ಕೈಬದಲಾಗುವುವು.

ವಾರಸಾಕರಕ್ಕೆ ಪಾತ್ರವಾದ ಆಸ್ತಿಯು ಹೇಗೆ ಗಳಿಸಲ್ಪಟ್ಟಿತು; ಹೇಗೆ ಬೆಳಿಸಲ್ಪಟ್ಟಿತು, ಎಂಬುದನ್ನು ಲಕ್ಷಿಸದೆ ಇದ್ದರೆ ಅನ್ಯಾಯವಾಗುವ ಸಂಭವವಿರುವುದು. ಬಹುಕಾಲದಿಂದ ನಡೆದು ಬಂದ ಆಸ್ತಿಯನ್ನು ಬಹುಕಾಲ ಉಪಭೋಗಿಸಲಾದ ಆಸ್ತಿ

ಯನ್ನು ಕಷ್ಟಾರ್ಜಿತವಾದ ಅಲ್ಪಕಾಲ ಉಪಭೋಗಿಸಲಾದ ಆಸ್ತಿಗೆ ಸಮವಾಗಿ ತೋಲಿಸಿ ಅವುಗಳಲ್ಲಿ ಭೇದವೆಣಿಸದೆ ಕರ ಹಾಕಲಾಗುವುದು. ಈ ಎರಡು ವಿಧದ ಆಸ್ತಿಗಳಿಗೆ ಕರಭಾರ ತಡೆದುಕೊಳ್ಳುವ ಶಕ್ತಿ ಬೇರೆಯಾಗಿಯೇ ಇರುತ್ತದೆ.

ವಾರಸಾಕರವನ್ನು ಆಯಾ ಆಸ್ತಿಯ ಮೇಲೆ ಮರಣದ ಸಮಯಕ್ಕೆ ಆಗುವ ಆ ಆಸ್ತಿಯ ಬೆಲೆಯ ಮೇಲೆ ಹೇರಲಾಗುವುದು. ಆಸ್ತಿಯಲ್ಲಿ ಕಂಪನಿಗಳ ಪಾಲುಗಳು ಇದ್ದರೆ ಅವುಗಳ ಬೆಲೆಯು ಆಗಾಗ ಏರಿಳಿತ ತೋರುವುದು. ಮರಣ ಸಮಯಕ್ಕೆ ಆ ಆಸ್ತಿಗೆ ಕರಕೊಡುವ ಶಕ್ತಿಯು ನಿಜವಾದ ಶಕ್ತಿಯನ್ನು ತೋರುವುದು, ಎಂದು ಸಾಮಾನ್ಯವಾಗಿ ಕಂಡು ಬರುವುದಿಲ್ಲ. "ನಿಜವಾದ ಬೆಲೆ ಬರುವಾಗ ಯಜಮಾನರಿಗೆ ಮರಣ ಬರಲಿ" ಎಂದು ವಾರಸದಾರರು ಹಾರೈಸುವಂತಾಗುವುದು. ಕರಭಾರದ ದರದಲ್ಲಿಯೂ ಕಾಲ ಕಾಲಕ್ಕೆ ಸ್ಥಿತ್ಯಂತರವಾದರೆ ಆಸ್ತಿಯು ಬೇಗನೆ ಕರಗಲು ಆಸ್ಪದ ಮಾಡಿಕೊಟ್ಟಂತಾಗುವುದು.

ಆದರೆ ಇವೆಲ್ಲ ತೊಡಕುಗಳ ಬಗ್ಗೆ ವಾರಸದಾರರು ದುಃಖಪಡುವ ಕಾರಣ ವಿಲ್ಲೆಂದು ಅರ್ಥಶಾಸ್ತ್ರಜ್ಞರು ಹೇಳುತ್ತಾರೆ. ಆಸ್ತಿ ಮಾಡಿದವನು ಜೀವಂತ ಇರುವ ಕಾಲದಲ್ಲಿ ಕರಭಾರವು ಬೀಳದು. ವಾರಸದಾರರು ಆಗುವವರ ಮೇಲೆ ಭಾರ ಬೀಳು ವುದು. ಆದರೆ ಅದು ಅವರಿಗೆ ಭಾರವೆನ್ನಿಸುವ ಕಾರಣವಿಲ್ಲ. ಏಕೆಂದರೆ, ಆಯತ್ತವಾಗಿ ಬರುವಾಗ ಸ್ವಲ್ಪ ಹೆಚ್ಚು ಕಡಮೆ ಕೈಗೆ ಬಂದರೂ ವಾರಸದಾರರು ಖುಶಿಯಲ್ಲಿಯೆ ಇರುವರು.

ಆದಾಯಕರ ತಪ್ಪಿಸಿದವರು ತಮ್ಮ ಆಸ್ತಿಯ ಮೇಲೆ ವಾರಸಾಕರ ಕೊಟ್ಟಾಗ ಹಿಂದಿನ ತಪ್ಪುಗಳು ಮುಚ್ಚಿ ಹೋಗುವಷ್ಟು ಕರವು ಸರಕಾರಕ್ಕೆ ಬರುವುದು. ವಾರ ಸಾಕರವು ತಡ ಮಾಡಿಕೊಟ್ಟ ಉತ್ಪನ್ನಕರವೆಂದು ಕೆಲ ದೇಶಗಳಲ್ಲಿ ಈ ಕಾರಣಕ್ಕಾ ಗಿಯೆ ಕರೆಯಲ್ಪಡುತ್ತದೆ.

ಕೆಲವು ದೇಶಗಳಲ್ಲಿ ಕರಭಾರವು ಸತ್ತವನ ಸಂಬಂಧ ಸಾಮೀಪ್ಯದ ಮೇಲೆ ಹೆಚ್ಚುಕಡಿಮೆ ಆಗುವುದುಂಟು; ಸಮೀಪದ ಸಂಬಂಧವಿದ್ದರೆ ಕರಭಾರ ಕಡಿಮೆ; ದೂರದ ಸಂಬಂಧವಿದ್ದಷ್ಟು ಕರಭಾರ ಹೆಚ್ಚು. ಏಕೆಂದರೆ ಅವರಿಗೆ ಆಸ್ತಿ ಬರುವುದೆಂದರೆ ಲಾಟರಿ ಹತ್ತಿದಂತೆ ಆಗಿರುವುದು.

### ಭಾರತದ ವಾರಸಾಕರ ಕಾಯಿದೆಯ ರೂಪರೇಷೆ

ಇದುವರೆಗೆ ವಾರಸಾಕರ ಕಾಯದೆಯ ತಾತ್ವಿಕ ಚರ್ಚೆ ಮಾಡಲಾಯಿತು. ಇನ್ನು ಮುಂದೆ ಭಾರತದ ವಾರಸಾಕರ ಕಾಯದೆಯ ಸ್ಥೂಲ ರೂಪರೇಷೆ ಕೊಡ ಲಾಗುವದು. ಇದರಿಂದ ಮುಂದೆ ಕಲಮುವಾರ ವಿವೇಚಿಸಲಾಗುವ ಕಾಯಿದೆಯು ಬೇಗನೆ ತಿಳಿವುದು; ಚೆನ್ನಾಗಿ ತಿಳಿವುದು ಎಂದು ಆಶಿಸಿದ್ದೇವೆ.

ವಾರಸಾಕರಕಾಯಿದೆಯು ೪ ವಿಭಾಗಗಳಲ್ಲಿ ಹೇಳಲಾಗಿದ್ದು ಒಟ್ಟು ಅದರಲ್ಲಿ ೮೫ ಕಲಮುಗಳು ಇವೆ. ಮೊದಲಿನ ಭಾಗದಲ್ಲಿ ಪೀಠಿಕೆಯಾಗಿರುವ ಕಲಮುಗಳಿದ್ದು ಕಾಯಿದೆಯ ವ್ಯಾಪ್ತಿ, ಅದರಲ್ಲಿ ಬರುವ ಶಬ್ದಗಳ ವ್ಯಾಖ್ಯೆ, 'ಅರ್ಥವಿವರಣೆ' ಮತ್ತು ಅಧಿಕಾರಿ ವರ್ಗದವರು ಇವುಗಳ ಬಗ್ಗೆ ಹೇಳಲಾಗಿದೆ.

ಎರಡನೆಯ ಭಾಗದಲ್ಲಿ ವಾರಸಾರಕರಕ್ಕೆ ಪಾತ್ರವಾಗಿರುವ ಆಸ್ತಿಗಳ ಬಗ್ಗೆ ಹೇಳಲಾಗಿದೆ. ಮರಣದ ನಂತರ " ಇಳಿದುಬರುವ ಎಲ್ಲ ಆಸ್ತಿಯ ಮೇಲೆ ಕರ ಹಾಕಲಾಗುವದು. ಕೆಲವೊಂದು ವಿಶಿಷ್ಟ ಸಂದರ್ಭಗಳಲ್ಲಿ, ಆಸ್ತಿಯು ಇಳಿದು ಬರುವುದೆಂದು ಗಣಿಸಲ್ಪಡಲಾಗುವದು. " ಎಂದು ಸಾರುತ್ತದೆ. ಇಂತಹ ಆಸ್ತಿಗಳ ವಿವರ ಹೀಗಿದೆ.

೧. ಆಸ್ತಿಯು ಮರಣ ಸಂಭವಿಸುವ ತನಕ ಅಸ್ತಿತ್ವದಲ್ಲಿರದೆ ಇದ್ದು ಮರಣದ ಕ್ಷಣಕ್ಕೆ ಅಸ್ತಿತ್ವದಲ್ಲಿ ಬರುವುದು. ಇದರಲ್ಲಿ ಹಿಂದು ಏಕತ್ರ ಕುಟುಂಬದಲ್ಲಿಯ ಹಿಸೆಯ ಮೂಲಕ ಬರುವ ಹಿತಸಂಬಂಧಗಳು ಸಮಾವೇಶವಾಗುವವು.

೨. ವಾರಸಾ ಕರವನ್ನು ತಪ್ಪಿಸುವ ಇಚ್ಛೆಯಿಂದ ಹಸ್ತಾಂತರ ಮಾಡಲಾದುವು. ಮರಣೋನ್ಮುಖ ಸ್ಥಿತಿಯಲ್ಲಿ ಮಾಡಿದ ದಾನಪತ್ತಿಗಳು. ಮರಣಪೂರ್ವದಲ್ಲಿಯ ಎರಡು ವರುಷಗಳಲ್ಲಿ ಕೊಟ್ಟ ದಾನದತ್ತಿಗಳು. ದಾನಿಯು ತನ್ನ ಹಿತಸಂಬಂಧಗಳನ್ನು ಕಾಯಿದು ಇಟ್ಟುಕೊಂಡು ಹಿಂದೆ ಯಾವುದೇ ಕಾಲಕ್ಕೆ ಕೊಟ್ಟ ದಾನಗಳು. ಮಿತಪರಿಮಾಣದಲ್ಲಿ ಹಸ್ತಾಂತರಮಾಡಲಾಗಿದ್ದ ಮರಣಪೂರ್ವದ ಎರಡು ವರುಷಗಳಲ್ಲಿಯ ವ್ಯವಹಾರಗಳು. ಇನ್ನೊಬ್ಬನ ಜತೆಗೆ ಜತೆ ಹೆಸರಿನಲ್ಲಿ ತೊಡಗಿಸಿದ ಹಣ-ಆಸ್ತಿ. ಇನ್ನೊಬ್ಬರ ಹಿತಕ್ಕಾಗಿ ಮೃತನು ಇಳಿಸಿದ ವಿಮಾ ಹಣವು. ಮೃತನಿಂದ ನಿಯಂತ್ರಿತವಾಗಿರುವ ಕಂಪನಿಯಲ್ಲಿ ಮೃತನಿಗೆ ಜೀವಂತವಾಗಿರುವ ತನಕ ಆದಾಯ ಬರಬೇಕೆಂದು ಮಾಡಿದ ಕಂಪನಿಯ ಆಸ್ತಿಯ ಭಾಗ, ಮುಂತಾಗಿ.

ಮೂರನೆಯ ಭಾಗದಲ್ಲಿ ಅಪವಾದಗಳ ವಿವರಣೆ ಮಾಡುತ್ತ ಯಾವ ಆಸ್ತಿಯು ಕರಭಾರಕ್ಕೆ ಯೋಗ್ಯವಾಗಿಲ್ಲವೆಂಬುದನ್ನು ಹೇಳಲಾಗಿದೆ. ಮರಣಾನಂತರ ವಾರಸದಾರರಿಗೆ ಆಸ್ತಿಯು ಇಳಿದು ಬಂದಿದ್ದರೂ ಅದರ ಬೆಲೆಯು ಕೆಲವೊಂದು ಪ್ರಮಾಣದಕಿಂತ ಕಡಿಮೆ ಆದರೆ ಅದು ಕರಭಾರಕ್ಕೆ ಪಾತ್ರವಾಗುವದಿಲ್ಲ:

ಮರಣ ಪೂರ್ವದಲ್ಲಿ ಆರುತಿಂಗಳ ಒಳಗೆ ೨೫೦೦ ರೂಪಾಯಿಗಳ ವರೆಗೆ ಸಾರ್ವಜನಿಕ ಧರ್ಮಾರ್ಥಕಾರ್ಯಗಳಿಗಾಗಿ ಕೊಟ್ಟ ದಾನಪತ್ತಿಗಳು. ಬೇರೆ ಯಾವುದೇ ಉದ್ದೇಶಗಳಿಗಾಗಿ, ಮರಣ ಪೂರ್ವದ ಎರಡು ವರ್ಷಗಳಲ್ಲಿ ೧೫೦೦ ರೂ. ಗಳ ವರೆಗೆ ಕೊಟ್ಟ ದಾನಗಳು. ವಾರಸಾಕರ ಕೊಡುವ ಉದ್ದೇಶದಿಂದ ಸರಕಾರಕ್ಕೆ ಹಕ್ಕು ಬಿಟ್ಟು ಕೊಟ್ಟ ವಿಮಾಪಾಲಿಸಿಯ ಹಕ್ಕಿನ ಹಣ ಕೊಡಬೇಕಾದ ಕರದ ಮೊತ್ತದಷ್ಟು ಆದರೂ

೫,೦೦೦ ರೂಪಾಯಿಗಳಕಿಂತ ಹೆಚ್ಚಾಗಿ ಆಗದಷ್ಟು. ಇದೇ ರೀತಿಯಾಗಿ ಇದೇ ಉದ್ದೇಶಕ್ಕಾಗಿ ಸರಕಾರದಲ್ಲಿ ಠೇವು ಇಟ್ಟ ಹಣವು. ಮೃತನ ಮೇಲೆ ಜೀವನಾವಶ್ಯಕತೆಗಳಿಗಾಗಿ ಅವಲಂಬಿಸಿದ್ದ ಸಂಬಂಧಿಕರಾದ ಹೆಣ್ಣುಮಕ್ಕಳ ಮದುವೆಗಾಗಿ ಒಬ್ಬೊಬ್ಬರ ಹೆಸರಿಗೆ ೫,೦೦೦ ರೂಪಾಯಿಗಳಕಿಂತ ಹೆಚ್ಚಾಗದಷ್ಟು ಹಣವು, ವಿಮೆಯ ರೂಪದಲ್ಲಿರಲಿ ಇಲ್ಲವೆ ವಿಶ್ವಸ್ತನಿಧಿಯಾಗಿರಲಿ, ಅಂತಹ ಹಣವು.

ಇವಲ್ಲದೆ ಕೆಲ ಮಾದರಿಯ ಆಸ್ತಿಯು ಕರಭಾರಕ್ಕೆ ಪಾತ್ರವಾಗಲಾರದು. ಪರದೇಶದಲ್ಲಿದ್ದ ಸ್ಥಾವರ ಆಸ್ತಿ- ಮೃತನು ವಿಶ್ವಸ್ತನಾಗಿ ಆಡಳಿತ ನಡಸುತ್ತಿದ್ದ ಆಸ್ತಿಯು. ಅಧಿಕಾರ ಪದದ ಮೂಲಕವಾಗಿ ಹಿತಸಂಬಂಧ ಬಂದಿದ್ದ ಮತ್ತು ಅಧಿಕಾರಪದಕ್ಕೆ ಅಂಟಿಕೊಂಡಿದ್ದ ಆಸ್ತಿ. ಅವಿಭಕ್ತಕುಟುಂಬದ ಸದಸ್ಯನು ಮೃತಪಟ್ಟಾಗ ೧೮ ವರ್ಷದ ವಯಸ್ಸಿನವನಾಗಿರದಿದ್ದರೆ, ಅವನ ಆಸ್ತಿ ವಾರಸಾ ಕರಕ್ಕೆ ಪಾತ್ರವಿಲ್ಲ. ಆದರೆ ಅವನಿಗೆ ೧೮ ವಯಸ್ಸು ಆಗಿರದೆ ಇದ್ದರೂ ಆತನ ತಂದೆ, ಅಜ್ಜ, ಇಲ್ಲವೆ ಮುತ್ತಜ್ಜ ಇವರಲ್ಲಿ ಯಾರೂ ಜೀವಂತವಾಗಿರದಿದ್ದರೆ, ಅವನ ಆಸ್ತಿಯೂ ವಾರಸಾಕರ ಪಾತ್ರವಾಗುವುದು. ಮೃತನು ಮತ್ತೊಬ್ಬರ ಹೆಸರನಲ್ಲಿ ಮಾಡಿಟ್ಟ ವ್ಯವಸ್ಥಾಪತ್ರದ ಅನ್ವಯವಾಗಿದ್ದ ಆಸ್ತಿಯು ಆ ಮತ್ತೊಬ್ಬನ ಮರಣದ ಮೂಲಕ ಮರಳಿ ಬಂದರೆ ಆ ಆಸ್ತಿಯು ವಾರಸಾಕರ ಪಾತ್ರವಲ್ಲ. ಗಂಡನ ಅಥವಾ ಹೆಂಡತಿಯ ಆಸ್ತಿಗಳ ಮೇಲೆ ಒಮ್ಮೆ ವಾರಸಾಕರ ಕೊಡಲಾಗಿದ್ದು, ಗಂಡನಿಗಾಗಲಿ ಇಲ್ಲವೆ ಹೆಂಡತಿಗಾಗಲಿ ಆ ಆಸ್ತಿಗಳ ಮೇಲೆ ಪೂರ್ಣಾಧಿಕಾರವಿದ್ದರೆ, ಅಂತಹ ಆಸ್ತಿಗಳು ಕರಪಾತ್ರವಲ್ಲ. ಮನೆತನದ ಉಪಯೋಗಕ್ಕೆ ಬೇಕಾಗುವ ಸಲಕರಣೆಗಳು, ಶೇತಕಿ ಕೆಲಸಕ್ಕೆ ಬೇಕಾಗುವ ಸಾಮಾನುಗಳು ಒಟ್ಟು ೨೫೦೦/- ಕಿಂತ ಹೆಚ್ಚು ಬೆಲೆ ಆಗದ ಆಸ್ತಿಯು ಕರಪಾತ್ರವಲ್ಲ. ಮಾರಾಟಕ್ಕೆ ಅಲ್ಲದ ಪುಸ್ತಕಗಳು, ಅರಿವೆ-ಅಂಚಡಿಗಳು, ಅಪರೂಪ ಹಾಗೂ ಪ್ರಾಚೀನ ವಸ್ತುಗಳು, ಚಿತ್ರಗಳು ಕರಪಾತ್ರವಲ್ಲ.

ಪಾತ್ರಾಪಾತ್ರತೆಯ ವಿಚಾರ ವಿಂಗಡಿಸಿ ನೋಡಿದರೆ, ಮೃತನ ಹಿತಸಂಬಂಧವಿದ್ದ ಆಸ್ತಿಯು ಪಾತ್ರವಾಗಿರುವುದು; ಹಿತಸಂಬಂಧವಿಲ್ಲದಿದ್ದರೆ ಪಾತ್ರವಲ್ಲ, ಎಂಬ ಸ್ಥೂಲರೂಪದ ಸೂತ್ರ ಸ್ಪಷ್ಟವಾಗಿ ಕಾಣುವುದು.

ಆಸ್ತಿಯ ಮೊತ್ತವನ್ನು ನಿರ್ಣಯಿಸುವಾಗ ಉತ್ತರಕ್ರಿಯೆಗಾಗಿ ೧,೦೦೦/- ರೂಪಾಯಿಗಳಿಗೆ ಮೀರದಷ್ಟು ಹಣವನ್ನು, ಮೃತನ ಸಾಲ-ಹೊಣೆಗಾರಿಕೆಗಾಗಿ ೫೦೦೦/- ರೂಪಾಯಿಗಳಿಗೆ ಮೀರದಷ್ಟು ಹಣವನ್ನು, ಪರದೇಶದಲ್ಲಿಯ ಆಸ್ತಿಯ ಆಡಳಿತಕ್ಕಾಗಿ ಇಲ್ಲವೆ ಪಡೆಯುವದಕ್ಕಾಗಿ ಆಸ್ತಿಯ ೫% ದ ಕಿಂತ ಹೆಚ್ಚು ಆಗದಷ್ಟು ಹಣವನ್ನು ಮರಣ ಸಮಯದ ವರೆಗೆ ಬಾಕಿ ಇರುವ ಯಾವುದೇ ತರಹದ ಕರ-ತೆರಿಗೆ, ಇವು ಒಟ್ಟು ಆಸ್ತಿಯಲ್ಲಿ ವಾರಸಾಕರ ಆಕರಣೆ ಮಾಡುವ ಮೊದಲು ಕಳೆಯಲು

ಯೋಗ್ಯವಾದವುಗಳು. ಮೃತನ-ಸಾಲಹೊಣೆಗಾರಿಕೆಗಳು ಅವನ ಹಿತದ ಸಲುವಾಗಿ ಪೂರ್ಣಬೆಲೆಗಾಗಿ ಮಾಡಿದಂತಹವಿರಬೇಕು. ಸಾಲದ ನೋಗು ಹಾಕಿ ಕರಭಾರ ತಪ್ಪಿಸುವ ಹವಣಿಕೆ ಕಂಡು ಬರುವಂತಹ ಸಾಲಗಳಿಗೆ ಮೇಲಿನ ಮುಕ್ತತೆ ಇಲ್ಲ.

ವಾರಸಾಕರಕ್ಕೆ ಪಾತ್ರವಾದ ಆಸ್ತಿಯ ಬೆಲೆಯು ಮರಣ ಸಮಯಕ್ಕೆ ಸಾಮಾನ್ಯವಾಗಿ ಆಸ್ತಿಗೆ ಆಗುವ ಬೆಲೆಯೆಂದು ನಿರ್ಣಯಿಸಬೇಕು. ಮೃತನ ಆಸ್ತಿಯ ವಾರಸದಾರರು ಯಜಮಾನನ ಮರಣವಾಗಿ ಆರು ತಿಂಗಳಾಗುವುದರೊಳಗೆ ಆಸ್ತಿಯ ವಿವರ ಯಾದಿ ಮತ್ತು ಅದರ ಕಿಮ್ಮತ್ತುಗಳನ್ನು ಸರಕಾರಕ್ಕೆ ತಿಳಿಸಬೇಕು. ಮೃತನು ಅವಿಭಕ್ತ ಕುಟುಂಬದ ಸದಸ್ಯನಾಗಿದ್ದು ಮರಣ ಪೂರ್ವದಲ್ಲಿಯೆ ಹಿಸೆಯಾಗಿದ್ದರೆ ಅವನ ಪಾಲಿಗೆ ಬಂದ ಆಸ್ತಿಯಷ್ಟೆ ಬೆಲೆ ಕಟ್ಟಲು ಯೋಗ್ಯವಾಗುವುದು. ಆಸ್ತಿಯ ಕಿಮ್ಮತ್ತು ೫೦೦೦೦ ದ ಒಳಗೆ ಆಗುತ್ತಿದ್ದರೆ ಅದಕ್ಕೆ ವಾರಸಾಕರವಿಲ್ಲ. ಅದಕ್ಕೂ ಮೇಲ್ಪಟ್ಟು ಬೆಲೆ ಆಗುತ್ತಿದ್ದರೆ, ಎಷ್ಟು ಹೆಚ್ಚು ಆಗುವದೋ ಆ ಹಣದ ಮೇಲೆ ಮಾತ್ರ ಅದರ ಗಾತ್ರ ವ್ಯಾಪ್ತಿಯ ಪ್ರಕಾರ ೫ ಶತಾಂಶದಿಂದ ೪೦ ಶತಾಂಶದ ವರೆಗೆ ಕರವು ಬೀಳುವದು.

ವಾರಸಾಕರವನ್ನು ಅದಕ್ಕಾಗಿ ರಚಿತವಾಗಿರುವ ವಸೂಲಿ ಮಾಡುವ ಸಮಿತಿಯೊಂದು ವಸೂಲ ಮಾಡುವದು. ಈ ಸಮಿತಿಯ ಅಂಕಿತವಾಗಿ ಆದಾಯಕರ ವಸೂಲ ಮಾಡುವ ಈಗಿರುವ ವಿಭಾಗದ ಅಧಿಕಾರಿಗಳು ಕೆಲಸಮಾಡುವರು. ಆಸ್ತಿಯ ಬೆಲೆ ಕಟ್ಟುವಾಗ ಅನ್ಯಾಯವಾಗಿದೆಯೆಂದು ವಾರಸದಾರರಿಗೆ ಅನ್ನಿಸಿದರೆ ಅವರು ಬೋರ್ಡಿಗೆ ಅಪೀಲುಮಾಡಿಕೊಳ್ಳಲು ಅವಕಾಶವಿದೆ. ಬೆಲೆಯನ್ನು ನಿರ್ಣಯಿಸಲು ಮಧ್ಯಸ್ಥಗಾರರನ್ನು ನೇಮಿಸಬೇಕೆಂದೂ ಕೇಳಿಕೊಳ್ಳಬಹುದು. ಸಮಿತಿಯು ಕೊಟ್ಟ ಯಾವುವೇ ನಿರ್ಣಯ ಕಾಯಿದೆಯ ವಿರುದ್ಧವಾಗಿದೆಯೆಂದು ಕಂಡು ಬಂದರೆ ಹಾಯಕೋರ್ಟಿಗೆ ನಿವೇದನೆಮಾಡಿಕೊಳ್ಳಲು ಅವಕಾಶವಿದೆ. ಯಾವದೊಂದು ವಿಷಯದ ಬಗ್ಗೆ ಹಾಯಕೋರ್ಟುಗಳ ನಿರ್ಣಯಗಳು ಒಂದಕ್ಕೊಂದು ವಿಸಂಗತವಾಗುವಂತಹವಿದ್ದರೆ ಆ ವಿಷಯವು ಬಹುಮಹತ್ವದ್ದಿದ್ದರೆ ಅದರ ನಿರ್ಣಯಕ್ಕಾಗಿ ವರಿಷ್ಠ ನ್ಯಾಯಾಲಯಕ್ಕೆ ನಿವೇದಿಸುವ ಅಧಿಕಾರವೂ ಇದೆ.

ಈ ಸ್ಥೂಲವಾದ ರೂಪರೇಷೆಯಿಂದ ಕಾಯಿದೆಯ ಸತ್ವವು ಏನಿದೆಯೆಂಬುದರ ಕಲ್ಪನೆ ಬರುವಂತಿದೆ. ಇನ್ನು ವಿವರವಾಗಿ ಕಾಯಿದೆಯ ಅಭ್ಯಾಸಕ್ಕೆ ತೊಡಗೋಣ.

—:::—

# ವಾರಸಾಕರ ಕಾಯಿದೆ ೧೯೫೩

## ೧೯೫೩ ರ XXXIV ಆ್ಯಕ್ಟ್

ವಾರಸಾಕರ ಹಾಕುವುದಕ್ಕೆ ಮತ್ತು ವಸೂಲು ಮಾಡುವುದಕ್ಕೆ ಅನುಕೂಲಿಸುವ ಕಾಯಿದೆ

ಪಾರ್ಲಿಮೆಂಟಿನಿಂದ ಈ ಕೆಳಗಿನಂತೆ ಕಾಯಿದೆ ಮಾಡಲ್ಪಡಲಿ.

## ಭಾಗ ಒಂದು : ಪೀಠಿಕೆ

**೧ ಹೆಸರು, ವ್ಯಾಪ್ತಿ, ಮತ್ತು ಪ್ರಾರಂಭ**

(೧) ಈ ಕಾಯಿದೆಯು ೧೯೫೩ ರ ವಾರಸಾಕರ ಕಾಯಿದೆ ( ಇಸ್ಟೇಟ ಡ್ಯೂಟಿ ಆ್ಯಕ್ಟ ) ಎಂದು ಕರೆಯಲ್ಪಡಬೇಕು.

(೨) ಜಮ್ಮು ಮತ್ತು ಕಾಶ್ಮೀರ ರಾಜ್ಯವನ್ನು ಬಿಟ್ಟು ಈ ಕಾಯಿದೆಯು ಇಡೀ ಭಾರತಕ್ಕೆ ಅನ್ವಯಿಸುವುದು.

(೩) ಕೇಂದ್ರ ಸರಕಾರವು ಸರಕಾರಿ ಗ್ಯಾಜೆಟದಲ್ಲಿ ಪ್ರಕಟನೆಯಿಂದ ಗೊತ್ತುಮಾಡುವ ದಿನಾಂಕದಿಂದ ಈ ಕಾಯಿದೆಯು ಜಾರಿಯಲ್ಲಿ ಬರುವದು.

**ವಿವೇಚನೆ**

ಈ ಕಾಯಿದೆಯ ಉದ್ದೇಶವು ಯಾವನೊಬ್ಬ ವ್ಯಕ್ತಿಯು ಮರಣಹೊಂದಿದ ಕೂಡಲೆ ವಾರಸದಾರರಿಗೆ ಇಳಿದು ಬರುವ ಇಲ್ಲವೆ ಇಳಿದು ಬರುವುದೆಂದು ಗಣಿಸಲ್ಪಡುವ ಆಸ್ತಿಯ ಮೇಲೆ ಕರ ಹಾಕುವದೇ ಆಗಿದೆ. ಈ ಕಾಯಿದೆಯನ್ನು ಪಾಸು ಮಾಡಲು ಒಂದು ತೀವ್ರವಾದ ಕಾರಣವಿತ್ತು. ಮಹಾಯುದ್ಧದ ನಂತರ ಎಲ್ಲ ಬೆಲೆಗಳು ಏರಿದುವು. ಆದಾಯವು ಹೆಚ್ಚಿತು. ಆದಾಯ ಕರದ ದರದಲ್ಲಿ ಹೆಚ್ಚಳವಾಯಿತು. ಆದರೆ ಆದಾಯ ಪಡೆದವರು ಮಾತ್ರ ಕರಕೊಡುವದನ್ನು ತಪ್ಪಿಸುವ ಹವಣಿಕೆ ನಡಸಿದರು. ಅನೇಕ ಪ್ರಕರಣಗಳು ಆದಾಯಕರ ವಿಚಾರಣಾ ಸಮಿತಿಯ ಲಕ್ಷ್ಯಕ್ಕೆ ಬಂದವು. ಸಿರಿವಂತರಾಗಿದ್ದವರ ಕೈಯಲ್ಲಿ ಹೆಚ್ಚು ಹೆಚ್ಚು ಸಂಪತ್ತು ಕೇಂದ್ರೀಕೃತವಾಗತೊಡಗಿತು. ಸಾಂಪತ್ತಿಕ ಸಮಾನ ವಿತರಣವಾಗಬೇಕೆಂದು ಆದಾಯಕರ ಹೇರಿದುದರ ಫಲ ಸಿಕ್ಕಲಿಲ್ಲ. ಈ ಪರಿಸ್ಥಿತಿಯನ್ನು ಬಹುಮಟ್ಟಿಗೆ ಸುಧಾರಿಸಬೇಕೆಂದು ವಾರಸಾಕರ ಕಾಯಿದೆಯು ಬಂದಿತು. ಈ ಕಾಯಿದೆಯಿಂದ ರಾಜ್ಯಸರಕಾರಗಳ ಅನೇಕ ಅಭಿವೃದ್ಧಿ ಯೋಜನೆಗಳಿಗೆ ಆರ್ಥಿಕ ನೆರವು ದೊರೆವುದು. ಯೋಜನಾ ಸಮಿತಿಯು ತನ್ನ ವರದಿಯ ಕರಡಿನಲ್ಲಿ ವಾರಸಾಕರವನ್ನು ಭಾರತದಲ್ಲಿ ಆಕರಿಸುವ ವ್ಯವಸ್ಥೆಯನ್ನು ಆದಷ್ಟು ಬೇಗನೇ ಮಾಡಬೇಕೆಂದು ಸೂಚಿಸಿದ್ದಿತು. ಈ ಎಲ್ಲ ಮಾತುಗಳ ಬೆಳಕಿನಲ್ಲಿ ಈ ಕಾಯಿದೆಯು ಅಸ್ತಿತ್ವದಲ್ಲಿ ಬಂದಿದೆ.

ಈ ಕಾಯದೆಯು ೧೯೫೩ ರ ಆಕ್ಟೋಬರ ೧೫ ಕ್ಕೆ ಜಾರಿಯಲ್ಲಿ ಬಂದಿದೆ.

೨ ವ್ಯಾಖ್ಯೆಗಳು

ಈ ಕಾಯಿದೆಯಲ್ಲಿ ಸಂಬಂಧಾರ್ಥವು ಬೇರೆಯಾಗಿ ಅರ್ಥಕೊಡುವಂತೆ ಇರದಿದ್ದರೆ ಈ ಕೆಳಗಿನ ಶಬ್ದಗಳ ಅರ್ಥವು ಹೀಗೆ ಆಗುವುದು.

(೧) "ಮೌಲ್ಯ ಮಾಪನದ ಪ್ರತಿಜ್ಞಾಪತ್ರ (ಅಫಿಡವೇಟು)" ಎಂದರೆ ೧೮೭೦ನೆಯ ಇಸವಿಯ ಕೋರ್ಟ ಫೀ ಆ್ಯಕ್ಟ (೧೮೭೦ ರ VII ಆ್ಯಕ್ಟು) ದ ೧೯–೧ ನೆಯ ಕಲಮಿನನ್ವಯವಾಗಿ ಪ್ರಾತಿನಿಧ್ಯ ಪಡೆಯುವುದಕ್ಕಾಗಿ ಮಾಡಿಕೊಂಡ ಅರ್ಜಿಯ ಸಂಬಂಧದಲ್ಲಿ ಮಾಡಿದ ಮೌಲ್ಯಮಾಪನ ಪ್ರತಿಜ್ಞಾಪತ್ರ ಎಂದು ಅರ್ಥ.

(೨) "ಬೋರ್ಡು" (ಸಮಿತಿ) ಎಂದರೆ ಸೆಂಟ್ರಲ್ ರೆವಿನ್ಯೂ ಬೋರ್ಡ ಆ್ಯಕ್ಟ (೧೯೨೪ ರ IV ಆ್ಯಕ್ಟು)ದ ಅನ್ವಯವಾಗಿ ಸಂಘಟಿಸಲಾದ ಸೆಂಟ್ರಲ್ ರೆವಿನ್ಯೂ ಬೋರ್ಡು ( ಕೇಂದ್ರ ಕಂದಾಯ ಸಮಿತಿ ) ಎಂದು ಅರ್ಥ.

(೩) "ಕಂಪನಿ" ಎಂಬ ಶಬ್ದವು ಸಂಘಟಿತವಾದ ಯಾವುದೇ ಸಂಸ್ಥೆಯನ್ನು, ಅದು ಎಲ್ಲಿ ಬೇಕಾದಲ್ಲಿ ಸಂಸ್ಥಾಪಿಸಲ್ಪಟ್ಟಿರಲಿ, ಒಳಗೊಳ್ಳುವುದು.

(೪) "ನಿಯಂತ್ರಿತ ಕಂಪನಿ" ಅಂದರೆ ೧೭ ನೆಯ ಕಲಮಿನಲ್ಲಿ ವ್ಯಾಖ್ಯೆಮಾಡಲಾದ ಕಂಪನಿ ಎಂದು ಅರ್ಥ.

(೫) "ನಿಯಂತ್ರಕ" ಎಂದರೆ, ೪ ನೆಯ ಕಲಮಿನನ್ವಯವಾಗಿ ವಾರಸಾಕರ ನಿಯಂತ್ರಕನೆಂದು ನೇಮಿಸಲಾದ ವ್ಯಕ್ತಿ ಮತ್ತು ಈ ಶಬ್ದವು ವಾರಸಾಕರ ಉಪನಿಯಂತ್ರಕನೆಂದು ಇಲ್ಲವೆ ವಾರಸಾಕರ ಸಹಾಯಕ ನಿಯಂತ್ರಕನೆಂದು ನೇಮಿಸಲಾದ ವ್ಯಕ್ತಿಯನ್ನು ಒಳಗೊಳ್ಳುತ್ತದೆ.

(೬) "ಮೃತವ್ಯಕ್ತಿ" ಮತ್ತು "ಮೃತನು" ಎಂದರೆ ಈ ಕಾಯಿದೆಯು ಪ್ರಾರಂಭವಾದ ನಂತರ ಮರಣಹೊಂದಿದ ವ್ಯಕ್ತಿ ಎಂದು ಅರ್ಥವಾಗುವುದು.

(೭) "ವಾರಸಾಕರ ( ಇಸ್ಟೇಟ ಡ್ಯೂಟಿ )" ಎಂದರೆ ಈ ಕಾಯಿದೆಯು ಸ್ವಯವಾಗಿರುವ ವಾರಸಾಕರ ಎಂದು ಅರ್ಥ.

(೮) "ಮೃತ್ಯುಲೇಖಾಧಿಕಾರಿ" ಎಂದರೆ ಮೃತವ್ಯಕ್ತಿಯ ಮೃತ್ಯುಲೇಖಾಧಿಕಾರಿ ಇಲ್ಲವೆ ಆಡಳಿತಗಾರ ಎಂದು ಅರ್ಥ.

(೯) "ಸಾಮಾನ್ಯ ಅಧಿಕಾರ" ಎಂಬ ಶಬ್ದವು ಪ್ರತಿಗ್ರಾಹಿ ಇಲ್ಲವೆ ಆ ಅಧಿಕಾರದ ಮೂಲಕ ಧಾರಣಮಾಡಿದ ಬೇರೆಯವನು ತನಗೆ ಯೋಗ್ಯಕಂಡಂತೆ ನೇಮಿಸಲು ಇಲ್ಲವೆ ಆಸ್ತಿಯನ್ನು ವಿನ್ಯಾಸಮಾಡಲು, ಜೀವಂತವಾಗಿದ್ದಾಗಿನ

ಅಧಿಕಾರಪತ್ರದ ಮೂಲಕ ಇಲ್ಲವೆ ಮೃತ್ಯುಲೇಖದ ಮೂಲಕ ಇಲ್ಲವೆ ಎರಡೂ ರೀತಿಯಿಂದ ಕಾರ್ಯಾಚರಣೆ ಮಾಡಲು ಯೋಗ್ಯವಿರುವ ಪ್ರತಿಯೊಂದು ಅಧಿಕಾರ ಇಲ್ಲವೆ ಅನುಜ್ಞೆಯನ್ನು ಒಳಗೊಳ್ಳುವದು; ಆದರೆ ತಾನೇ ಮಾಡಿದ ವಿನ್ಯಾಸಯೋಗದನ್ವಯವಾಗಿ ವಿಶ್ವಸ್ತಪದ ಸಾಮರ್ಥ್ಯದಿಂದ ಇಲ್ಲವೆ ಆಧಿಗ್ರಾಹಕ (ಒತ್ತಿ ಹಿಡಿವವ) ನೆಂದು ನಡೆಯಿಸಲ್ಪಡುವ ಯಾವುದೇ ಅಧಿಕಾರವನ್ನು ಹೊರತುಪಡಿಸಬೇಕಾಗುವುದು.

(೧೦) "ಋಣಭಾರಗಳು" ಎಂಬ ಶಬ್ದವು ಆಧಾರ (ಒತ್ತಿ) ಗಳನ್ನು ಮತ್ತು ಆವಧಿಕ-ಋಣಗಳು ಇವುಗಳನ್ನು ಒಳಗೊಳ್ಳುತ್ತದೆ.

(೧೧) "ಆಗಾಮಿ ಹಿತಸಂಬಂಧ" ಎಂಬ ಶಬ್ದವು ದಾಯಶೇಷವನ್ನು ಇಲ್ಲವೆ ಶೇಷಭೋಗಾಧಿಕಾರವನ್ನು ಮತ್ತು ಅಂತರ್ಗತ ಇಲ್ಲವೆ ಅವಲಂಬಕವಾಗಿರುವ ಪ್ರತಿಯೊಂದು ಭಾವೀಹಿತಸಂಬಂಧಗಳನ್ನು ಒಳಗೊಳ್ಳುತ್ತದೆ; ಆದರೆ ಗೇಣಿ ಕರಾರು ಮುಕ್ತಾಯವಾದನಂತರ ಬರಬಹುದೆಂದು ಅಪೇಕ್ಷಿಸಲಾದ ಶೇಷಭೋಗಾಧಿಕಾರಗಳನ್ನು ಒಳಗೊಳ್ಳುವದಿಲ್ಲ.

(೧೨) "ನ್ಯಾಯಿಕ-ಪ್ರತಿನಿಧಿ" ಎಂದರೆ ಮೃತವ್ಯಕ್ತಿಯ ಆಸ್ತಿಯನ್ನು ಕಾಯಿದೆಯ ಪ್ರಕಾರ ಪ್ರತಿನಿಧಿಸುವ ವ್ಯಕ್ತಿ ಎಂದು ಅರ್ಥ ಮತ್ತು, ಆ ಶಬ್ದವು

(i) ಮೃತ್ಯುಲೇಖಾಧಿಕಾರಿ,

(ii) ಈ ಕಾಯಿದೆಯನ್ವಯವಾದ ಯಾವುದೇ ಹೊಣೆಯ ಸಂಬಂಧವಾಗಿ ಮೃತವ್ಯಕ್ತಿಯ ಆಸ್ತಿಯನ್ನು ಇಲ್ಲವೆ ಅದರ ಭಾಗವನ್ನು ವಶಪಡಿಸಿಕೊಳ್ಳುವ ಇಲ್ಲವೆ ಅದರ ಬಗ್ಗೆ ವ್ಯವಹರಿಸುವ ಯಾವುದೇ ವ್ಯಕ್ತಿ, ಮತ್ತು,

(iii) ಮೃತವ್ಯಕ್ತಿಯು ಹಿಂದು ಕುಟುಂಬದ ದಾಯಾದಿಯಾಗಿದ್ದರೆ, ಆ ಕಾಲಕ್ಕೆ ಆ ಕುಟುಂಬದ ಸಂಚಾಲಕನು.

ಇವರನ್ನು ಒಳಗೊಳ್ಳುತ್ತದೆ.

(೧೩) "ಆಸ್ತಿ ನೇಮಿಸುವ ಅಧಿಕಾರ" ಎಂದರೆ, ಆ ಆಸ್ತಿಯ ಯಜಮಾನನಾಗಿರದೆ ಇರುವ ವ್ಯಕ್ತಿಯನ್ನು ಯಾವ ಆಸ್ತಿಯ ವಿನ್ಯಾಸದ ಬಗ್ಗೆ ಅಧಿಕರಿಸಲಾಗಿರುವುದೋ ಆ ಆಸ್ತಿಯ ವಿನ್ಯಾಸ ನಿರ್ಣಯಿಸುವ ಅಧಿಕಾರ.

(೧೪) "ಗೊತ್ತುಮಾಡಿದ" ಅಂದರೆ ಈ ಕಾಯಿದೆಯನ್ವಯವಾಗಿ ಮಾಡಲ್ಪಟ್ಟ ನಿಯಮಗಳಿಂದ ಗೊತ್ತುಮಾಡಿದ ಎಂದು ಅರ್ಥ.

(೧೫) "ಆಸ್ತಿ" ಎಂಬ ಶಬ್ದವು, ಆಸ್ತಿಯಲ್ಲಿಯ, ಅದು ಸ್ಥಾವರವಿರಲಿ ಇಲ್ಲವೆ ಜಂಗಮವಿರಲಿ, ಯಾವುದೇ ಹಿತಸಂಬಂಧವನ್ನು ಮತ್ತು

ಆಸ್ತಿಯ ಮಾರಾಟದ ಹಣವನ್ನು ಮತ್ತು ಆ ಕಾಲಕ್ಕೆ ಮಾರಾಟದ ಹಣವನ್ನು ಪ್ರತಿನಿಧೀಕರಿಸುವ ಯಾವುದೇ ಹಣ ಇಲ್ಲವೆ ಧನವಿನಿಯೋಗವನ್ನು ಮತ್ತು ಯಾವುದೇ ಪದ್ಧತಿಯಿಂದ ಒಂದು ಮಾದರಿಯಿಂದ ಮತ್ತೊಂದು ಮಾದರಿಗೆ ಬದಲಾಯಿಸಲಾದ ಯಾವುದೇ ಆಸ್ತಿಯನ್ನು ಒಳಗೊಳ್ಳುವುದು.

**ವಿವರಣೆ ೧** ಒಬ್ಬ ವ್ಯಕ್ತಿಯಿಂದ ಇಲ್ಲವೆ ಅವನ ಸಮ್ಮತಿಯಿಂದ ನಿರ್ಮಿಸಲಾದ ಸಾಲ ಇಲ್ಲವೆ ವೈಯಕ್ತಿಕವಾದ ಅವನ ವಿರುದ್ಧ, ಇಲ್ಲವೆ ಅವನು ವಿನ್ಯಾಸಮಾಡಿದ ಇಲ್ಲವೆ ಮಾಡಲು ಸಮರ್ಥನಾದ ಇಲ್ಲವೆ ತನ್ನ ಹಿತದ ಸಲುವಾಗಿ ಋಣಿಯಾಗಿಸುವ ಇಲ್ಲವೆ ಭಾರಹೊರಿಸುವ ಆಸ್ತಿಯ ವಿರುದ್ಧ ಜಾರಿ ಮಾಡಲ್ಪಡುವಂತಹ ಬೇರೆ ಯಾವುದೇ ಹಕ್ಕು ಆ ವ್ಯಕ್ತಿಯಿಂದಲೇ ಮಾಡಲ್ಪಟ್ಟ ವಿನ್ಯಾಸವೆಂದು ಗಣಿಸಲ್ಪಡಲಾಗುವುದು. ಮತ್ತು ಇಂತಹ ವಿನ್ಯಾಸದ ಸಂಬಂಧವಾಗಿ ' ಆಸ್ತಿ ' ಎಂಬ ಪದವು ಹಾಗೆ ನಿರ್ಮಿಸಲಾದ ಸಾಲ ಇಲ್ಲವೆ ಹಕ್ಕು ಇವುಗಳನ್ನು ಒಳಗೊಳ್ಳುತ್ತದೆ.

**ವಿವರಣೆ ೨** ಮೃತನಿಗೆ ವ್ಯತ್ಯಯ ಬರುವ ಹಾಗೆ ಯಾವುದೇ ಸಾಲ ಇಲ್ಲವೆ ಹಕ್ಕು ನಾಶಮಾಡಲ್ಪಟ್ಟದು ಯಾರ ಹಿತದ ಸಲುವಾಗಿ ಆ ಸಾಲ ಇಲ್ಲವೆ ಹಕ್ಕು ನಾಶಮಾಡಲ್ಪಟ್ಟಿತೋ ಆ ವ್ಯಕ್ತಿಯ ಅನುಕೂಲಕ್ಕಾಗಿ ಮೃತನಿಂದ ವಿನ್ಯಾಸಮಾಡಲ್ಪಟ್ಟಿತೆಂದು ಗಣಿಸಲ್ಪಡಲಾಗುವುದು. ಇಂತಹ ವಿನ್ಯಾಸದ ಸಂಬಂಧವಾಗಿ ' ಆಸ್ತಿ ' ಯೆಂಬ ಪದವು ಆ ಸಾಲ ಇಲ್ಲವೆ ಹಕ್ಕು ನಾಶಮಾಡಲ್ಪಡುವುದರಿಂದ ಉಂಟಾಗುವ ಲಾಭವನ್ನು ಒಳಗೊಳ್ಳುವದು.

(೧೬) " ಮರಣಕಾಲಕ್ಕೆ ಇಳಿದು ಬಂದ ಆಸ್ತಿ " ಎಂಬ ಶಬ್ದವು ಮರಣಕಾಲಕ್ಕೆ ತಾತ್ಕಾಲಿಕವಾಗಿ ಇಲ್ಲವೆ ಯಾವುದೇ ಸಮಯಾನಂತರ ನಿಶ್ಚಿತವಾಗಿ ಇಲ್ಲವೆ ಅವಲಂಬಕವಾಗಿ ಮತ್ತು ಮೌಲಿಕವಾಗಿ ಇಲ್ಲವೆ ಬದಲಾಯಿಸಿದ ಕಾಲ ಮಿತಿಯಿಂದ ಇಳಿದು ಬಂದ ಆಸ್ತಿಯನ್ನು ಒಳಗೊಳ್ಳುತ್ತದೆ. ಮತ್ತು " ಮರಣಕಾಲಕ್ಕೆ " ಎಂಬುದು " ಮರಣದ ಸಂಬಂಧದಿಂದಲೇ ನಿಶ್ಚಿತಗೊಳಿಸಬಹುದಾದ ಕಾಲಕ್ಕೆ " ಎಂಬುದನ್ನು ಒಳಗೊಳ್ಳುವುದು.

(೧೭) " ಸಾರ್ವಜನಿಕ ಧರ್ಮಾರ್ಥ ಉದ್ದೇಶ " ಎಂಬ ಶಬ್ದವು ಬಡವರಿಗೆ ಪರಿಹಾರ, ಶಿಕ್ಷಣ, ವೈದ್ಯಕೀಯ ಪರಿಹಾರ, ಮತ್ತು ಭಾರತದ ಪ್ರದೇಶದಲ್ಲಿ ಸಾಮಾನ್ಯವಾಗಿ ಸಾರ್ವಜನಿಕ ಉಪಯುಕ್ತತೆಯುಳ್ಳ ಯಾವುದೇ ಬೇರೆ ಉದ್ದೇಶಾಭಿವೃದ್ಧಿಯನ್ನು ಒಳಗೊಳ್ಳುವುದು.

(೧೮) " ಪ್ರತಿನಿಧಿಸುವಿಕೆ " ಎಂದರೆ ಮೃತ್ಯುಲೇಖಾಧಿಕಾರಪತ್ರ (ಪ್ರೊಬೇಟ) ಇಲ್ಲವೆ ಆಡಳಿತಾಧಿಕಾರ ಪತ್ರ ಎಂದು ಅರ್ಥ.

(೧೯) " ನಿವೇಶಿತ ಆಸ್ತಿ " ಎಂದರೆ ಆ ನಿವೇಶನವು ಈ ಕಾಯಿದೆಯು ಪ್ರಾರಂಭವಾಗುವ ಮೊದಲು ಇಲ್ಲವೆ ನಂತರ ಆಗಿರಲಿ ಉತ್ತರಾಧಿಕಾರಿತ್ವ ದಿಂದ ಹೊರತು ಇಲ್ಲವೆ ನ್ಯಾಯಿಕವಾಗಿ ಯಾವುದೇ ವ್ಯಕ್ತಿಗಳಿಗೆ ಮಿತವಾದ ಇಲ್ಲವೆ ವಿಶ್ವಸ್ತವಾದ ಆಸ್ತಿ ಎಂದು ಅರ್ಥ ಮತ್ತು " ನಿವೇಶನ " ಎಂದರೆ ಸಮರ್ಪಣೆ ಇಲ್ಲವೆ ಪತ್ರಿಗಳನ್ನೊಳಗೊಂಡು ಯಾವುದರಿಂದ ಆಸ್ತಿಯನ್ನು ನಿವೇಶನ ಮಾಡಲಾಗಿರುವುದೋ ಅಂತಹ ಯಾವುದೇ ವಿನ್ಯಾಸ ಎಂದು ಅರ್ಥ.

(೨೦) " ಮೌಲ್ಯಮಾಪಕ " ಎಂದರೆ ೪ ಕಲಮಿನನ್ವಯವಾಗಿ ನೇಮಿಸಲಾದ ಮೌಲ್ಯಮಾಪಕನು ಎಂದು ಅರ್ಥ.

**ವಿವೇಚನೆ**

ಈ ಕಲಮಿನಲ್ಲಿ ೨೦ ವ್ಯಾಖ್ಯೆಗಳು ಇವೆ. ಈ ವ್ಯಾಖ್ಯೆಗಳು ಇಡಿ ಕಾಯಿದೆಯ ತಳಹದಿಯಾಗಿರುವುವು. ಆದ್ದರಿಂದ ಅವುಗಳ ವ್ಯಾಪಕಾರ್ಥವನ್ನೂ ಸರಿಯಾದ ಅರ್ಥವನ್ನೂ ತಿಳಿದುಕೊಳ್ಳುವುದು ಅವಶ್ಯ. ಈ ಮುಂದೆ ಒಂದೊಂದೆ ವ್ಯಾಖ್ಯೆಯನ್ನು ಎತ್ತಿಕೊಂಡು ಅದರಲ್ಲಿ ಅಂತರ್ಗತವಾಗಿರುವ ಅರ್ಥವನ್ನು ವಿವರಿಸಲಾಗುವುದು. ವಿವರಣೆ ವಿವೇಚನೆ ಅಗತ್ಯವಾಗಿದ್ದುದನ್ನು ಮಾತ್ರ ಇಲ್ಲಿ ಕೊಟ್ಟಿದೆ.

೧. ಕೋರ್ಟ ಫೀ ಕಾಯಿದೆಯಲ್ಲಿಯ ೧೯–೧ ನೆಯ ಕಲಮಿನಲ್ಲಿ ಮೌಲ್ಯಮಾಪನದ ಪ್ರತಿಜ್ಞಾಪತ್ರದ ಬಗ್ಗೆ ವಿವರಣೆ ಇರುವುದು. ಯಾರಾದರೂ ಮೃತ್ಯುಲೇಖದ ಅಧಿಕಾರ ಪತ್ರಕ್ಕಾಗಿ ಇಲ್ಲವೆ ಆಡಳಿತದ ಅಧಿಕಾರ ಪತ್ರಕ್ಕಾಗಿ ಅರ್ಜಿಮಾಡುವವರಿದ್ದರೆ ಅವರು ಆಸ್ತಿಯ ಬೆಲೆಯನ್ನು ತೋರಿಸುವ ಪ್ರತಿಜ್ಞಾಪತ್ರವನ್ನು ಹಾಜರ ಮಾಡಬೇಕಾಗುತ್ತದೆ. ಮೃತನ ವಶದಲ್ಲಿದ್ದ ಇಲ್ಲವೆ ಮರಣ ಕಾಲಕ್ಕೆ ವಶಾಧಿಕಾರವಿದ್ದ ಮತ್ತು ಅರ್ಜದಾರನ ಕೈಗೆ ಬಂದಿದ್ದ ಇಲ್ಲವೆ ಬರಬಹುದಾದ ಸೊತ್ತುಗಳ ವಿವರಗಳನ್ನು ಕೊಡಬೇಕಾಗುವುದು. ಈ ಪ್ರತಿಜ್ಞಾಪತ್ರದಲ್ಲಿ ಸ್ಥಾವರ ಜಂಗಮ ಆಸ್ತಿಗಳ ವಿವರವೂ ಸಾಲಗಳ ಪಟ್ಟಿಯೂ ಇರಬೇಕು. ಆ ಕಾಯಿದೆಯಲ್ಲಿಯಂತೆ ಈ ಕಾಯಿದೆಯನ್ವಯವಾಗಿಯೂ ಅಂತಹ ಮೌಲ್ಯಮಾಪನವುಳ್ಳ ಪ್ರತಿಜ್ಞಾಪತ್ರವನ್ನು ವಾರಸಾಕರ ನಿಯಂತ್ರಕನಿಗೆ ವಾರಸದಾರರು ಈ ಕಾಯಿದೆಯ ೫೭ ನೆಯ ಕಲಮಿನನ್ವಯವಾಗಿ ಹಾಜರಮಾಡಬೇಕಾಗುವುದು. ಪ್ರತಿಜ್ಞಾಪತ್ರದ ರೂಪರೇಷೆ ಹೇಗೆ ಇರಬೇಕೆಂಬುದನ್ನು ಕೋರ್ಟ ಫೀ ಆ್ಯಕ್ಟದ ಮೂರನೆಯ ಕೋಷ್ಟಕದಲ್ಲಿ ಕೊಡಲಾಗಿದೆ. ಅದೇ ನಮೂನೆಯನ್ನೆ ಈ ವಾರಸಾಕರ ಕಾಯಿದೆಯು ಅಂಗೀಕರಿಸಿದೆ. ವಾರಸಾಕರ ಪಾತ್ರವಾದ ಆಸ್ತಿಯ ವಿವರಗಳನ್ನು ಆ ನಮೂನೆಯಲ್ಲಿ ಕೊಡಬೇಕು.

(೩) ಪರದೇಶದಲ್ಲಿ ಸಂಸ್ಥಾಪಿಸಲಾದ ಕಂಪನಿಯೂ ಈ ಪದದಲ್ಲಿ ಸಮಾವೇಶವಾಗಿದೆ.

(೪) ನಿಯಂತ್ರಿತ ಕಂಪನಿಯ ವ್ಯಾಖ್ಯೆಯನ್ನು ವಿವರವಾಗಿ ಈ ಕಾಯಿದೆಯ ೧೭ನೆಯ ಕಲಮಿನಲ್ಲಿ ಮಾಡಲಾಗಿದೆ. ಅಲ್ಲಿ ಅದರ ಚರ್ಚೆ ಮಾಡಲಾಗುವುದು. ಆ ವ್ಯಾಖ್ಯೆಯನ್ನು ಬಹು ವ್ಯಾಪಕ ಮಾಡಲಾಗಿದೆ. ಕರ ಕೊಡುವದನ್ನು ತಪ್ಪಿಸಲು ಹೂಡಿದ ಎಲ್ಲ ಪದ್ಧತಿ-ರೀತಿಗಳನ್ನು ಲಕ್ಷಿಸಿ ಅವು ಸಮಾವೇಶವಾಗಿರುವ ಹಾಗೆ ಆ ವ್ಯಾಖ್ಯೆಯು ಹಿಗ್ಗುವಂತೆ ಮಾಡಲಾಗಿದೆ.

(೮) ಮೃತ್ಯುಲೇಖಾಧಿಕಾರಿ ಪದದ ವ್ಯಾಖ್ಯೆಯನ್ನು ಹಿಗ್ಗಿಸಲು ಬರುವಂತೆ ಮಾಡಲಾಗಿದೆ. ಇದರಲ್ಲಿ ಮೃತ್ಯುಲೇಖಾಧಿಕಾರಿ, ಸಮೀಪದ ಸಂಬಂಧಿಕ, ಸಾಲ ಕೊಟ್ಟ ಸಾಹುಕಾರ, ಇಲ್ಲವೆ ಮೃತನ ಆಸ್ತಿಯನ್ನು ವಶದಲ್ಲಿಟ್ಟುಕೊಂಡವರು ಇಲ್ಲವೆ ವ್ಯವಸ್ಥೆ ಮಾಡುವವರು, ಇವರೆಲ್ಲರೂ ಬರುವರು. ನ್ಯಾಯಿಕ ಪ್ರತಿನಿಧಿಯ ಬಗ್ಗೆ ಹೇಳುವಾಗ ಇದರ ಬಗ್ಗೆ ಹೆಚ್ಚಿಗೆ ಹೇಳಲು ಆಸ್ಪದವಿದೆ. ಆದ್ದರಿಂದ ಅಲ್ಲಿ ವಿವರವಾಗಿ ಚರ್ಚಿಸೋಣ.

(೯) ಸಾಮಾನ್ಯ ಅಧಿಕಾರವನ್ನು ಪಡೆದ ವ್ಯಕ್ತಿಯು ಆ ಆಸ್ತಿಯನ್ನು ತನ್ನ ಮನಸ್ಸಿಗೆ ಯೋಗ್ಯ ಕಂಡ ಹಾಗೆ ವಿನ್ಯಾಸಮಾಡುವ ಅಧಿಕಾರವುಳ್ಳವನು ಆಗಿರುತ್ತಾನೆ. ಸಾಮಾನ್ಯ ಅಧಿಕಾರವು ಆಸ್ತಿಯ ಒಡೆತನದಿಂದ ಉಂಟಾಗುವದು. ಇಲ್ಲವೆ ಒಡೆತನವಿದ್ದವನು ಅಧಿಕಾರ ಹಸ್ತಾಂತರ ಮಾಡಿಕೊಟ್ಟಿರುವನೆಂದು ಉಂಟಾಗುವದು. ಅಧಿಕಾರವುಳ್ಳವನು ತನ್ನ ವಿವೇಕದಂತೆ ಆಸ್ತಿಯ ವಿನ್ಯಾಸಮಾಡಬಹುದು. ವಿನ್ಯಾಸ ಮಾಡಲು ಅವನಿಗೆ ಯಾವುದೇ ಬಗೆಯ ಅಡ್ಡಿ ಆತಂಕಗಳು ಇದ್ದರೆ, ಅದು ಸಾಮಾನ್ಯ ಅಧಿಕಾರವೆಂದು ಆಗದು. ಈ ಅಧಿಕಾರವನ್ನು ಯಾವ ರೀತಿಯಲ್ಲಿ ನಿರ್ವಹಿಸಬೇಕು ಎಂಬುದು ಅಷ್ಟು ಮಹತ್ವದ್ದಲ್ಲ. ವಿಶ್ವಸ್ತನ ಪದಾಧಿಕಾರದಿಂದ ಅಧಿಗ್ರಾಹಕನ ಸ್ಥಾನದಿಂದ ನಿರ್ವಹಿಸಬಹುದಾದ ಅಧಿಕಾರವನ್ನು ಮಾತ್ರ ಈ ಸಾಮಾನ್ಯ ಅಧಿಕಾರದಿಂದ ಹೊರತುಪಡಿಸಲಾಗಿದೆ. ಹೊರತುಪಡಿಸಿದ ಅಧಿಕಾರ ಕ್ಷೇತ್ರವನ್ನು ಬಿಟ್ಟು ಉಳಿದ ಕ್ಷೇತ್ರದಲ್ಲಿ ನಿರಾತಂಕವಾದ ಅಧಿಕಾರವಿದೆಯೆಂದೆ ಅದು ಸಾಮಾನ್ಯ ಅಧಿಕಾರವಾಗಿದೆ. ಆ ಮಟ್ಟಿಗೆ ಅದು ಪೂರ್ಣಾಧಿಕಾರವಾಗಿದೆ.

(೧೦) ಆವರ್ಧಿಕ ಋಣಗಳು ಎಂದರೆ ಯಾವುದೊಂದು ಘಟನೆ ಸಂಭವಿಸಿದ ನಂತರ ಇಲ್ಲವೆ ಕ್ಲಿಪ್ತಕಾಲಾವಧಿ ಮುಗಿದನಂತರ ಮುಕ್ತಾಯವಾಗುವ ಋಣಗಳು. ಉದಾಹರಣೆ: **ಅ** ನು ತನ್ನ ಮಗನಾದ **ಬ** ನ ಹೆಸರಿನಲ್ಲಿ ಆಸ್ತಿ ಇಡುವನು. ಆ ಆಸ್ತಿಯಲ್ಲಿಂದ **ಅ** ನ ಹೆಂಡತಿಗೆ ಅವಳ ಜೀವಮಾನದ ವರೆಗೆ ೧೦೦ ರೂಪಾಯಿ ವಾರ್ಷಿಕ ವೇತನ ಕೊಡಬೇಕೆಂಬ ಕರಾರು ಹಾಕಿರುವನು. **ಅ** ನ ಹೆಂಡತಿಯ ಮರಣದಿಂದ ಆ ಭಾರದ ಮುಕ್ತಾಯವಾಗುವುದು. ವಾರ್ಷಿಕ ವೇತನವೆಂದು ಕೊಡಬೇಕಾದುದು ಆವಧಿಕ ಋಣವು. **ಅ** ನ ಹೆಂಡತಿಯ ಜೀವಮಾನ ಎಂದು ಕರಾರು ಹಾಕುವ

ಬದಲು ಅ ನು ಸತ್ತೆ ಹತ್ತು ವರುಷಗಳ ತನಕ ಅ ನ ಹೆಂಡತಿಗೆ ವಾರ್ಷಿಕ ನೂರು ರೂಪಾಯಿ ಕೊಡಬೇಕೆಂದು ಕರಾರು ಹಾಕಿದ್ದರೆ, ಅ ನ ಮರಣದ ನಂತರ ಆ ಹತ್ತು ವರುಷದ ಕಾಲಾವಧಿಯ ವರೆಗೆ ವಾರ್ಷಿಕ ವೇತನವು ಅವಧಿಕ ಋಣ ವಾಗುವುದು.

(೧೧) ಹಿತ ಸಂಬಂಧಗಳು ಎರಡು ತೆರ. ಅಸ್ತಿತ್ವದಲ್ಲಿದ್ದ ವರ್ತಮಾನ ಹಿತ ಸಂಬಂಧಗಳು; ನಾಳೆ ಉಂಟಾಗಬಹುದಾದ ಭವಿಷ್ಯತ್ ಕಾಲದ ಹಿತ ಸಂಬಂಧಗಳು- ಎರಡನೆಯ ತೆರನಾಗಿದ್ದುದೆ ಆಗಾಮಿ ಹಿತಸಂಬಂಧ; ಆಗಾಮಿ ಹಿತಸಂಬಂಧದ ಒಡೆ ಯನಿಗೆ ಸದ್ಯದ ಉಪಭೋಗಕ್ಕೆ ಅದು ದೊರೆವುದಿಲ್ಲ. ಉದಾಹರಣೆ : ಅನು ತನ್ನ ಆಸ್ತಿ ಯನ್ನು ಬನಿಗೆ ಅವನ ಜೀವಮಾನದ ವರೆಗೆ ಉಪಭೋಗಿಸಲು ಕೊಡುತ್ತಾನೆ. ಬನ ಮರಣದನಂತರ ಅದು ಕ ನಿಗೆ ಹೋಗಬೇಕೆಂದು ಹೇಳಿರುತ್ತಾನೆ. ಆ ಆಸ್ತಿಯಲ್ಲಿಯ ಕ ನ ಹಿತಸಂಬಂಧವು ಆಗಾಮಿ ಹಿತಸಂಬಂಧವು ಆಗಿರುವುದು. ಇದು ಶೇಷ ಭೋಗಾಧಿಕಾರದ ಸ್ವರೂಪವಾಗಿದೆ. ಆದರೆ ಇದರಲ್ಲಿ ಒಂದು ಪ್ರಸಂಗವನ್ನು ಹೊರತು ಪಡಿಸಲಾಗಿದೆ. ಗೇಣಿಯ ಮುಕ್ತಾಯದ ನಂತರ ಪುನರಾವರ್ತವಾಗುವುದನ್ನು ಸ್ಪಷ್ಟ ವಾಗಿ ಹೊರತು ಪಡಿಸಲಾಗಿದೆ ಎಂಬುದನ್ನು ನೆನೆಯಬೇಕು.

(೧೨) ಈ ವ್ಯಾಖ್ಯೆಯು ಸಿವಿಲ ಪ್ರೊಸೀಜರ ಕೋಡದಲ್ಲಿಯ ವ್ಯಾಖ್ಯೆಯ ಮಾದರಿಯಲ್ಲಿದೆ. ಮೃತ್ಯುಲೇಖಾಧಿಕಾರಿಯನ್ನು ಇದು ಒಳಗೊಳ್ಳುವುದು. ವ್ಯಾಖ್ಯೆಯು ಬಹುವ್ಯಾಪಕವಾಗಿದೆ. ಮೃತ್ಯುಲೇಖಾಧಿಕಾರಿಯಾದ ವ್ಯಕ್ತಿಯು ಮೃತನ ಕೊನೆಯ ಇಚ್ಛೆಯನ್ನು ಪೂರೈಸುವ ಕರ್ತವ್ಯವುಳ್ಳವನು. ಎಲ್ಲಿ ಮೃತ್ಯುಲೇಖಾಧಿಕಾರಿಯು ಇರು ವುದಿಲ್ಲ, ಅಲ್ಲಿ ಆಸ್ತಿಯನ್ನು ವ್ಯವಸ್ಥೆ ಮಾಡುವುದಕ್ಕಾಗಿ ಸಮರ್ಥ ಅಧಿಕಾರಿಗಳಿಂದ ನೇಮಿಸಲ್ಪಟ್ಟವನು ಆಡಳಿತ ನಡಸುವ ಅಧಿಕಾರಿಯು. ನ್ಯಾಯಿಕ ಪ್ರತಿನಿಧಿಯೆಂಬ ಪದದಲ್ಲಿ ಮೇಲ್ಕಾಣಿಸಿದ ಮೃತ್ಯುಲೇಖಾಧಿಕಾರಿಯೂ ಆಡಳಿತ ನಡಸಲು ನೇಮಿಸ ಲ್ಪಟ್ಟ ವ್ಯಕ್ತಿಯೂ ಸಮಾವೇಶವಾಗುವರು. ಈ ಉಪಕಲಮಿನ ವಾಕ್ಯಾವಳಿ (ii) ರಲ್ಲಿ ಹೇಳಲಾದ ವ್ಯಕ್ತಿಗಳು ಈ ಕಾಯಿದೆಯ ಸಂಬಂಧವಾಗಿ ಮಾತ್ರ ನ್ಯಾಯಿಕ ಪ್ರತಿನಿಧಿ ಗಳು. (iii) ರ ಪ್ರಕಾರ ಹಿಂದು ಕುಟುಂಬದ ಸಂಚಾಲಕನು ನ್ಯಾಯಿಕ ಪ್ರತಿನಿಧಿಯು. ಕಾನೂನಿನ ದೃಷ್ಟಿಯಲ್ಲಿ ಮೃತ ವ್ಯಕ್ತಿಯ ಪ್ರತಿನಿಧಿಯಾಗಿ ಕೆಲಸಮಾಡುವವನೂ ನ್ಯಾಯಿಕ ಪ್ರತಿನಿಧಿಯು, ಎಂಬ ವ್ಯಾಪಕಾರ್ಥದಲ್ಲಿ ಈ ಪದದ ಉಪಯೋಗವಾಗಿದೆ.

(೧೩) ಇದನ್ನು ೧೯೨೫ ರ ಇಂಡಿಯನ್ ಸಕ್ಸೆಶನ್ ಆ್ಯಕ್ಟದ ೭೯ ನೆಯ ಕಲಮಿಗೆ ಇರುವ ವಿವರಣೆಯಿಂದ ತೆಗೆದುಕೊಳ್ಳಲಾಗಿದೆ. ಇದರನ್ವಯವಾಗಿ ಬರುವ ಅಧಿಕಾರವು ಸಾಮಾನ್ಯ ಅಧಿಕಾರ ಎಂಬ ಪದದ ಕಕ್ಷೆಯಲ್ಲಿ ಬರುವ ಅಧಿಕಾರದಲ್ಲಿ ಬರುವುದು. ಆಸ್ತಿಯ ಒಡೆಯನಾಗಿರದೆ ಇದ್ದ ವ್ಯಕ್ತಿಗೆ ಆ ಆಸ್ತಿಯ ವಿನ್ಯಾಸ ಮಾಡುವ ಅಧಿಕಾರವು ಬರುವುದು.

(೧೫) ಈ ಕಾಯಿದೆಯ ಪ್ರಕಾರ ಕರ ಹಾಕುವುದು ಆಸ್ತಿಯ ಮೇಲೆ. ಆದ್ದರಿಂದ ಆಸ್ತಿ ಎಂದರೆ ಏನೇನು ಆ ಪದದಲ್ಲಿ ಬರುವುದು, ಎಂಬುದನ್ನು ಸ್ಪಷ್ಟಮಾಡಲಿಕ್ಕೆ ಬೇಕು. ಸ್ಥಾವರ ಜಂಗಮ ಆಸ್ತಿಯಂತೂ ಆಸ್ತಿ; ಇವಲ್ಲದೆ ಸಾಲ ಇಲ್ಲವೆ ಹಕ್ಕುಗಳು ಕೂಡ ಆಸ್ತಿಯಲ್ಲಿ ಸಮಾವೇಶವಾಗುವುವು. ಈ ಪದವನ್ನು ಬಹು ವ್ಯಾಪಕಾರ್ಥದಲ್ಲಿ ಬಳಸಲಾಗಿದೆ. ವಾರಸಾಕರದ ಆಕರಣೆಯಾಗುವ ಮೊದಲು ಅದು ಮೃತನ ಆಸ್ತಿಯಾಗಿರಬೇಕು. ಮೃತನಿಂದ ವಾರಸದಾರರಿಗೆ ಇಳಿದು ಬಂದಿರಬೇಕು. ಇಲ್ಲವೆ ಇಳಿದು ಬಂದಿದೆಯೆಂದು ಗಣಿಸಲ್ಪಡಬೇಕು. ಈ ಶಬ್ದದಲ್ಲಿ ವಾಸ್ತವಿಕ ಮತ್ತು ವ್ಯಕ್ತಿಗತ ಆಸ್ತಿಯ ಸಮಾವೇಶವಾಗಿರುವುದು. ಆಯಾ ಆಸ್ತಿಗಳ ಮಾರಾಟದ ಹಣವು; ಯಾವುದೊಂದು ವ್ಯವಹಾರದಲ್ಲಿ ತೊಡಗಿಸಲ್ಪಟ್ಟ ಹಣವೂ ಇದರಲ್ಲಿ ಬರುವುದು. ವಿವರಣೆ ೧–೨ ರಿಂದ ಸಾಲ ಇಲ್ಲವೆ ಹಕ್ಕುಗಳ ನಿರ್ಮಿತಿ ನಾಶಗಳನ್ನು ಲಕ್ಷಿಸಲಾಗಿದೆ. ಆ ಬಗೆಯಿಂದ ಮಾಡಿದ ನಿರ್ಮಿತಿ ನಾಶಗಳನ್ನು ಆಸ್ತಿಯ ವಿನ್ಯಾಸವೆಂದು ಗಣಿಸಲ್ಪಡುವುದರಿಂದ ಆ ಆಸ್ತಿಯು ಮೃತನ ಆಸ್ತಿಯೇ ಆಗಿ ಕರಯೋಗ್ಯವಾಗುವುದು.

(೧೬) ವಾರಸಾಕರವು ಮರಣದಿಂದ ಇಳಿದು ಬರುವ ಮೃತನ ಆಸ್ತಿಯ ಮೇಲೆ ಹಾಕಲ್ಪಟ್ಟಿರುವುದರಿಂದ ಮರಣದಿಂದ ಇಳಿದು ಬರುವ ಎಲ್ಲ ಬಗೆಯ ಹಕ್ಕು, ಅಧಿಕಾರ, ಹಿತ ಸಂಬಂಧಗಳನ್ನು ಒಳಗೊಳ್ಳುವಂತೆ ಈ ಪದದ ಅರ್ಥವನ್ನು ವ್ಯಾಪಕವಾಗಿ ಮಾಡಲಾಗಿದೆ. ಇಳಿದು ಬರುವುದು, ಎಂದರೆ ಹಸ್ತಾಂತರವಾಗುವುದು ಎಂಬ ಅರ್ಥದಲ್ಲಿ ಬಳಸಲಾಗಿದೆ. ಮರಣದ ಮೂಲಕ ಮೃತನ ಆಸ್ತಿಯು ಹಸ್ತಾಂತರವಾಗುವ ಸಂದರ್ಭವನ್ನು ಇದು ಸೂಚಿಸುವುದು. ಹಸ್ತಾಂತರವು ಮರಣವಾದ ಕೂಡಲೇ ಆಗಬಹುದು. ಉದಾಹರಣೆ: ಅನು ಸತ್ತ ಕೂಡಲೆ ಅನ ವಾರಸದಾರನಾದ ಬನಿಗೆ ತಾತ್ಕಾಲಿಕವಾಗಿ ಅವನ ಆಸ್ತಿಯು ಹಸ್ತಾಂತರವಾಗುವುದು. ಮರಣದ ನಂತರ ಕೆಲ ಸಮಯದ ಮೇಲೆಯೂ ಹಸ್ತಾಂತರವಾಗಬಹುದು. ಉದಾಹರಣೆ: ನಿವೇಶಿತ ಆಸ್ತಿಗಳು; ಆವಧಿಕ ಋಣಗಳು ಈ ಕಕ್ಷೆಯಲ್ಲಿ ಬರುವುವು. ಇನ್ನೂ ಬೇರೆ ರೀತಿಯಿಂದ ವರ್ಗೀಕರಿಸಲಾಗಿದೆ. ನಿಶ್ಚಿತವಾಗಿ ಇಳಿದು ಬರುವಂತಹವು. ಅವಲಂಬಕವಾಗಿ ಯಾವುದಾದರೊಂದು ಘಟನೆಯನ್ನು ಅವಲಂಬಿಸಿ ಬರುವಂತಹವು. ಮೌಲಿಕವಾಗಿ ಇಳಿದು ಬರುವಂತಹವು ಮತ್ತು ಬದಲಾಯಿಸಿದ ಕಾಲಮಿತಿಯಿಂದ ಬರುವಂತಹವು. ಒಟ್ಟಿನಲ್ಲಿ ಹೇಗೆಯೆ ಬರಲಿ, ಎಂದೇ ಬರಲಿ, ಆಸ್ತಿಯು ಹಸ್ತಾಂತರವಾಗಿ ಮರಣದ ಮೂಲಕ ಇಳಿದು ಬರುತ್ತಿದ್ದರೆ ಅಂತಹ ಆಸ್ತಿಯೆಲ್ಲವೂ ಕರಯೋಗ್ಯವಾಗುವುದು. ಮರಣ ಸಮಯ ಎಂದರೆ ಮರಣದ ಘಟನೆಯನ್ನು ಲಕ್ಷಿಸಿ ಯಾವ ಸಮಯವನ್ನು ಅಳೆಯಲು ಶಕ್ಯವಾಗುವುದೋ ಆ ಸಮಯ ಎಂದು ವಿಶದ ಮಾಡಲಾಗಿದೆ. ಉದಾಹರಣೆ: ಒಂದು ವಿಶ್ವಸ್ತ ವ್ಯವಹಾರದ ಮೂಲಕ ವ್ಯವಸ್ಥೆ ಮಾಡಿದ ಮೃತನು ತಾನು ಸತ್ತ ಮೇಲೆ ಹತ್ತುವರುಷದ ನಂತರ ಆ ಆಸ್ತಿಯು ಭೋಗಾಧಿಕಾರಿಗೆ ಹೋಗಬೇಕೆಂದು

ಮಾಡಿದ್ದರೆ, ಹತ್ತುವರುಷದ ಅವಧಿಯು ಮರಣ ಸಮಯದಿಂದಲೇ ಗುರುತಿಸಲು ಸಾಧ್ಯವಾಗುವುದರಿಂದ ಮರಣ ಸಮಯವೆಂದರೆ ಆ ಹತ್ತುವರುಷ ನಂತರ ಎಂದು ಅರ್ಥಮಾಡಬೇಕಾಗುವುದು. ಹೀಗೆ ನಿವೇಶಿತ ಆಸ್ತಿಯೂ ಕೂಡ ಮರಣ ಸಮಯಕ್ಕೆ ಹಸ್ತಾಂತರವಾಯಿತೆಂದೆ ತಿಳಿಯಬೇಕು.

(೧೭) ಸಾರ್ವಜನಿಕ ಧರ್ಮಾರ್ಥ ಉದ್ದೇಶವೆಂಬುದಕ್ಕೆ ಪ್ರಾದೇಶಿಕ ವ್ಯಾಪ್ತಿಯನ್ನು ಇಡಿ ಭಾರತದ ಪ್ರದೇಶ ಎಂದು ಸೂಚಿಸಲಾಗಿದೆ. ವಾರಸಾಕರ ಕಾಯಿದೆಯು ಮೂಲತಃ ಜಮ್ಮು ಕಾಶ್ಮೀರಗಳನ್ನು ಬಿಟ್ಟು ಉಳಿದ ಭಾರತದ ಪ್ರದೇಶಕ್ಕೆ ಅನ್ವಯಿಸುತ್ತಿದ್ದರೂ ಈ ಉಪಕಲಮಿನ ಕ್ಷೇತ್ರವು ಮಾತ್ರ ಇಡಿ ಭಾರತ ಪ್ರದೇಶ; ಅದರಲ್ಲಿ ಜಮ್ಮು ಮತ್ತು ಕಾಶ್ಮೀರ ರಾಜ್ಯವೂ ಬರುವುದು. ಧರ್ಮಾರ್ಥ ಉದ್ದೇಶಗಳಿಗಾಗಿ ಮಾತ್ರ ಈ ರಿಯಾಯಿತಿ ತೋರಿಸಲಾಗಿದೆ. ಮೊದಲನೆಯ ಕಲಮಿನಲ್ಲಿಯ ಮಾತಿಗೆ ಈ ವಿಷಯದಲ್ಲಿ ಮಾತ್ರ ಇದು ಅಪವಾದ.

(೧೯) ನಿವೇಶಿತ ಆಸ್ತಿಯ ಬಗ್ಗೆ ಇಲ್ಲಿ ಹೇಳಲಾಗಿದೆ. ನಿವೇಶನವು ೧೫-೧೦-೫೩ಕ್ಕೆ ಮೊದಲು ಆಗಿದ್ದರೂ ಅದು ಈ ಕಾಯಿದೆಯ ದೃಷ್ಟಿಯಿಂದ ನಿವೇಶಿತವಾದುದೇ. ನಿವೇಶನ ಪದದ ವ್ಯಾಖ್ಯೆಯಿಂದ ಯಾವುದೇ ತರಹದ ವಿನ್ಯಾಸವು ಇದರ ಕಕ್ಷೆಯಲ್ಲಿ ಬರುವುದು. ವ್ಯಕ್ತಿಗಳ ಹಿತಕ್ಕಾಗಿ ಮಾಡಿರಲಿ; ಧರ್ಮಾರ್ಥ ಸಂಸ್ಥೆಗಳ ಹಿತಕ್ಕಾಗಿ ಮಾಡಿರಲಿ; ಈ ಆಸ್ತಿಯ ಸ್ವರೂಪದಿಂದ ಅದು ಕ್ರಮವಾಗಿ ಒಬ್ಬರ ಕೈಯಿಂದ ಇನ್ನೊಬ್ಬರ ಕೈಗೆ ಬರುವುದು ಮತ್ತು ಸಾಮಾನ್ಯವಾಗಿ ವಿಶ್ವಸ್ತ ಸ್ವರೂಪದ್ದಿರುವುದು ಎಂದು ಕಂಡು ಬರುವುದು.

(೨೦) ವಾರಸಾಕರ ನಿರ್ಣಯ ಮಾಡುವಾಗ ಮುಖ್ಯ ವಿಷಯವೆಂದರೆ ಕರಯೋಗ್ಯ ಆಸ್ತಿಯ ಪೇಟೆಯ ಕಿಮ್ಮತ್ತು. ಆದುದರಿಂದ ವಾರಸದಾರರಿಗೆ ಆಸ್ತಿಯ ಯೋಗ್ಯ ಬೆಲೆ ಮಾಡಿಸುವ ಹಕ್ಕು ಇದೆ. ಸರಕಾರದವರು ನಿಯಮಿಸುವ ಮೌಲ್ಯಮಾಪಕನಿಂದ ಬೆಲೆ ಕಟ್ಟಿಸಲು ಕೇಳಿಕೊಳ್ಳಬಹುದು. ಈ ಮೌಲ್ಯಮಾಪಕರು ಸರಕಾರೇತರ ವ್ಯಕ್ತಿಗಳು. ಎಕ್ಸೆಸ್ ಪ್ರಾಫಿಟ್ಸ್ ಆ್ಯಕ್ಟದನ್ವಯವಾಗಿರುವ ನಿರ್ಣಾಯಕರಂತೆ ಇರುವರು.

**೩ ಅರ್ಥ ವಿವರಣೆ**

(೧) ಈ ಕಾಯಿದೆಯ ಉದ್ದೇಶಗಳಿಗಾಗಿ

(ಅ) ಒಬ್ಬ ವ್ಯಕ್ತಿಯು ಯಾವನು ಸ್ವಂತ ವ್ಯವಹಾರ ನಡಸಲು ಕಾಯಿದೆಯ ದೃಷ್ಟಿಯಿಂದ ಪ್ರೌಢ ವಯಸ್ಕನಾಗಿದ್ದರೆ ಆಸ್ತಿಯ ವಿನ್ಯಾಸ ಮಾಡಲು ಸಮರ್ಥನಾಗುತ್ತಿದ್ದನೋ ಅವನಿಗೆ ಇಂತಹ ಆಸ್ತಿಯಿದ್ದರೆ, ಇಲ್ಲವೆ ಆಸ್ತಿಯಲ್ಲಿಯ ಹಿತ ಸಂಬಂಧವಿದ್ದರೆ ಇಲ್ಲವೆ ಅದರ ಬಗೆ ಸಾಮಾನ್ಯ ಅಧಿಕಾರವಿದ್ದರೆ ಅವನು ಆಸ್ತಿಯ ವಿನ್ಯಾಸಮಾಡ ಸಮರ್ಥನೆಂದು ಗಣಿಸಲ್ಪಡಲಾಗುವುದು.

(ಬ) ಮೃತನ ಹಿತ ಸಂಬಂಧಗಳ ಪೈಕಿ ಪರಿಣಾಮಕಾರಿಯಾಗುತ್ತಲಿರುವ ವಿನ್ಯಾಸವು ಅದಕ್ಕೆ ಬೇರೊಬ್ಬನ ಸಮ್ಮತಿಯು ಬೇಕಾಗಿರಲಿ ಇಲ್ಲವೆ ಬಿಡಲಿ, ಅವನಿಂದ ವಿನ್ಯಾಸ ಮಾಡಲ್ಪಟ್ಟಿತೆಂದು ಗಣಿಸಲ್ಪಡಲಾಗುವುದು,

(ಕ) ಒಬ್ಬ ವ್ಯಕ್ತಿಗೆ ಇನ್ನೊಬ್ಬ ವ್ಯಕ್ತಿಯ ಆಸ್ತಿಯ ಮೇಲೆ ಋಣ ಭಾರಹಾಕುವ ಸಾಮಾನ್ಯ ಅಧಿಕಾರವಿದ್ದಾಗ ಹಣವು ಮೊದಲನೆಯ ವ್ಯಕ್ತಿಗೆ ಯಾವ ಆಸ್ತಿಯು ವಿನ್ಯಾಸ ಮಾಡುವ ಅಧಿಕಾರವಿದೆಯೋ ಆ ಆಸ್ತಿಯಲ್ಲಿಯ ಹಿತ ಸಂಬಂಧವೆಂದು ಗಣಿಸಲ್ಪಡಲಾಗುವುದು.

(ಡ) ಒಬ್ಬ ವ್ಯಕ್ತಿಯ ವಾಸ ಪ್ರದೇಶವನ್ನು ನಿರ್ಣಯಿಸುವಾಗ ೧೯೨೫ ನೆಯ ಇಸವಿಯ ಇಂಡಿಯನ್ ಸಕ್ಸೆಸನ್ ಆ್ಯಕ್ಟ ( ೧೯೨೫ ರ XXXIX ) ಆ ವಿಷಯದ ಬಗ್ಗೆ ಅನ್ವಯಿಸುತ್ತದೆಂದು ತಿಳಿದು ನಿರ್ಣಯಿಸಬೇಕು.

(೨) ಈ ಕಾಯಿದೆಯ ಭಾಗ II ಮತ್ತು III ರ ರಲ್ಲಿ ವಿನ್ಯಾಸ ಮಾಡಿದ ಯಾವುದೇ ಹಿತ ಸಂಬಂಧಕ್ಕೆ ಬಾಧಿಸಲ್ಪಟ್ಟ ವಿಮಾ ಪಾಲಿಸಿಗೆ, ಕೊಂಡು ಕೊಳ್ಳಲಾದ ಇಲ್ಲವೆ ವ್ಯವಸ್ಥೆಮಾಡಲಾದ ವಾರ್ಷಿಕವೇತನ ಇಲ್ಲವೆ ಬೇರೆ ಹಿತ ಸಂಬಂಧಕ್ಕೆ, ಇಲ್ಲವೆ ಯಾವುದೇ ದಾನ, ನಿವೇಶನ, ವಿನ್ಯಾಸ ಇಲ್ಲವೆ ಹಸ್ತಾಂತರ ಮಾಡಲಾದ ಆಸ್ತಿ ಇವುಗಳಿಗೆ, ಯಾವುದೇ ರೀತಿಯಲ್ಲಿ ನಿರ್ದೇಶ ಮಾಡಲಾದಾಗ ಅದು ಈ ಕಾಯಿದೆಯು ಪ್ರಾರಂಭವಾಗುವ ಮೊದಲು ಇಲ್ಲವೆ ನಂತರ ವಿನ್ಯಾಸ ಮಾಡಲ್ಪಟ್ಟಿರಲಿ, ಬಾಧಿಸಲ್ಪಟ್ಟಿರಲಿ, ಕೊಂಡುಕೊಳ್ಳಲ್ಪಟ್ಟಿರಲಿ, ಇಲ್ಲವೆ ವ್ಯವಸ್ಥೆ ಮಾಡಲ್ಪಟ್ಟಿರಲಿ, ಸಂದರ್ಭಾನುಸಾರ ಇಂತಹ ಯಾವುದೇ ಹಿತ ಸಂಬಂಧ, ಪಾಲಿಸಿ ವಾರ್ಷಿಕವೇತನ, ದಾನ, ನಿವೇಶನ, ವಿನ್ಯಾಸ ಇಲ್ಲವೆ ಹಸ್ತಾಂತರ ಇವುಗಳನ್ನು ಒಳಗೊಳ್ಳುವುದೆಂದು ಅರ್ಥ ಹಚ್ಚಲಾಗುವುದು.

**ವಿವೇಚನೆ**

ಈ ಕಲಮು ಎರಡನೆಯ ಕಲಮಿನಲ್ಲಿ ಹೇಳಲಾದ ವ್ಯಾಖ್ಯೆಯ ವ್ಯಾಪ್ತಿಯನ್ನು ಹೆಚ್ಚಿಸುವುದು ಅರ್ಥ ಹಚ್ಚುವ ಪ್ರಸಂಗ ಬಂದಾಗ ಹೇಗೆ ಅರ್ಥ ಹಚ್ಚಬೇಕೆಂದು ಸ್ಪಷ್ಟಪಡಿಸುತ್ತಿದೆ.

ಆಸ್ತಿಯ ವಿನ್ಯಾಸ ಮಾಡುವ ಸಾಮರ್ಥ್ಯದ ಬಗ್ಗೆ ಇಲ್ಲಿ ಹೇಳಲಾಗಿದೆ. ಇದೇ ಕಾಯಿದೆಯ ೬ ನೇ ಕಲಮಿನಲ್ಲಿ ಈ ಸಾಮರ್ಥ್ಯದ ಬಗ್ಗೆ ಮಾತು ಬರುವುದು. ಯಾವ ವ್ಯಕ್ತಿಗೆ ಯಾವುದೊಂದು ಆಸ್ತಿಯು ವಿನ್ಯಾಸ ಮಾಡುವ ಅಧಿಕಾರವಿದ್ದರೆ

ಆ ವ್ಯಕ್ತಿಯ ಮರಣದ ಸಮಯಕ್ಕೆ ಆ ಆಸ್ತಿಯು ವಾರಸದಾರರಿಗೆ ಇಳಿದು ಬರುವು ದೆಂದು ಗಣಿಸಲ್ಪಡಲಾಗುವುದೆಂದು ೬ ನೆಯ ಕಲಮಿನಲ್ಲಿ ಹೇಳಿದ್ದರಿಂದ ವಿನ್ಯಾಸ ಮಾಡುವ ಸಾಮರ್ಥ್ಯದ ಬಗ್ಗೆ ಸ್ಪಷ್ಟ ವಿವರಣೆ ಅವಶ್ಯವಾಯಿತು. ವಿನ್ಯಾಸ ಸಾಮ ರ್ಥ್ಯವೆಂದರೇನು ? ಆ ವ್ಯಕ್ತಿಗೆ ವಿನ್ಯಾಸ ಮಾಡುವಂತಹ ಆಸ್ತಿ ಇರಬೇಕು. ಮತ್ತು ಅವನು ಸ್ವಂತದ ವ್ಯವಹಾರವನ್ನು ಕಾಯಿದೇಶೀರ ಮಾಡಲಿಕ್ಕೆ ಯೋಗ್ಯವಾಗಿರುವ ಪ್ರೌಢ ವಯಸ್ಸಿನವನಾಗಿರಬೇಕು. ಅಂದರೆ ಅವನ ವಶದಲ್ಲಿದ್ದ ಇಲ್ಲವೆ ಸಾಮಾನ್ಯ ಅಧಿಕಾರದಲ್ಲಿದ್ದ ಆಸ್ತಿಯ ವಿನ್ಯಾಸಮಾಡಲು ಅವನಿಗೆ ಸಾಮರ್ಥ್ಯವಿದೆ, ಎಂದ ಹಾಗಾ ಗುವುದು. ಹಾಗೆ ಅವನಿಗೆ ಯಾವ ಆಸ್ತಿಯ ಬಗ್ಗೆ ಸಾಮರ್ಥ್ಯವಿದೆಯೊ ಆ ಆಸ್ತಿಯು ವಾರಸಾಕರ ಪಾತ್ರವಾಗುವುದು.

ಈ ಕಲಮಿನ ಉಪಕಲಮು (ಅ) ದಿಂದ (ಕ) ದ ವರೆಗೆ ವ್ಯಕ್ತಿಗೆ ವಿನ್ಯಾಸ ಮಾಡಲು ಅಧಿಕಾರವಿದೆಯೆಂದು ಗಣಿಸಲ್ಪಡಲಾದ ಬೇರೆ ಬೇರೆ ಮಾದರಿಯ ಆಸ್ತಿಗಳ ವರ್ಣನೆ ಮಾಡಲಾಗಿದೆ. (ಅ) ದಲ್ಲಿ ವ್ಯಕ್ತಿಗೆ ಆಸ್ತಿಯ ವಿನ್ಯಾಸ ಮಾಡಲು ಪೂರ್ಣ ಅಧಿಕಾರವಿಪ್ಪ ಆಸ್ತಿಯ ವಿಷಯ ಹೇಳಲಾಗಿದೆ. (ಬ) ದಲ್ಲಿ ವ್ಯಕ್ತಿಯ ಹಿತಸಂಬಂಧ ಗಳ ಪೈಕಿ ಪರಿಣಾಮಕಾರಿಯಾಗುವ ವಿನ್ಯಾಸದ ಬಗ್ಗೆ ಹೇಳಲಾಗಿದೆ. ಇಲ್ಲಿ ಆಸ್ತಿಯು ಕೇವಲ ಮೃತನ ಸಂಪೂರ್ಣ ಅಧಿಕಾರದಲ್ಲಿರಬೇಕೆಂದಿಲ್ಲ. ಆ ಆಸ್ತಿಯಲ್ಲಿ ಅವನ ಹಿತ ಸಂಬಂಧವಿದ್ದರೆ ಸಾಕು; ಸಂಯುಕ್ತ ಒಡೆತನವಿದ್ದ ಆಸ್ತಿಯ ವಿಷಯವಿದು. ಉದಾ ಹರಣೆ: ಅನು ಜೀವಮಾನವಿರುವರೆಗೆ ಉಪಭೋಗಿಸಬೇಕೆಂದೂ ನಂತರ ಬನಿಗೆ ಹೋಗುವ ಹಾಗೆ ವ್ಯವಸ್ಥೆಮಾಡಲ್ಪಟ್ಟ ಆಸ್ತಿಯೊಂದು ಇದೆ. ಅ ಮತ್ತು ಬ ಇಬ್ಬರೂ ಕೂಡಿ ಆ ಆಸ್ತಿಯನ್ನು ಮತ್ತೊಬ್ಬರ ಹೆಸರಿನಲ್ಲಿ ನಿವೇಶನ ಮಾಡುವರು. ಇಲ್ಲಿ ಪುನ ರ್ನಿವೇಶನ ಮಾಡಲ್ಪಟ್ಟುದರಲ್ಲಿ ಅನ ಜೀವಮಾನದ ಹಿತ ಸಂಬಂಧವಿದೆ. ಉಳಿದುದು ಬನ ಶೇಷಾಧಿಕಾರವಿದೆ. ಅನು ಮಾಡಿದ ವಿನ್ಯಾಸವು ಅನ ಹಿತ ಸಂಬಂಧಗಳ ಪೈಕಿ ಪರಿಣಾಮಕಾರಿಯಾದುದು.

(ಕ) ದಲ್ಲಿ ಹಣದ ಬಗ್ಗೆ ಹೇಳಲಾಗಿದೆ. ಅನು ಬನ ಆಸ್ತಿಯ ಮೇಲೆ ಇಂತಿಷ್ಟು ಹಣದ ಋಣಭಾರ ಹಾಕಲು ಅಧಿಕಾರವುಳ್ಳವನಾಗಿದ್ದರೆ, ಆ ಹಣದ ಮಟ್ಟಿಗೆ ಅನು ಬನ ಆಸ್ತಿಯ ವಿನ್ಯಾಸಮಾಡಲು ಸಮರ್ಥನಿದ್ದಾನೆಂದು ಗಣಿಸಲ್ಪ ಡಲಾಗುವುದು ಎಂದು ಹೇಳಲಾಗಿದೆ.

(ಅ) (ಬ) (ಕ) ದಲ್ಲಿ ಆಸ್ತಿಯ ವಿನ್ಯಾಸಮಾಡಲು ಇರುವ ಬೇರೆ ಬೇರೆ ಪ್ರಮಾ ಣದ ಸಾಮರ್ಥ್ಯವನ್ನು ಹೇಳಿದೆ. ಯಾವಪ್ರಮಾಣದಲ್ಲಿ ವಿನ್ಯಾಸಮಾಡಲು ಸಾಮರ್ಥ್ಯ ವಿದೆಯೊ ಆ ಪ್ರಮಾಣದಲ್ಲಿ ಆಯಾ ಆಸ್ತಿಗಳ ಬಗ್ಗೆ ವಿನ್ಯಾಸಾಧಿಕಾರ ಸಾಮರ್ಥ್ಯ ವಿದೆಯೆಂದು ಗಣಿಸಲ್ಪಟ್ಟ ಅಂತಹ ಆಸ್ತಿಯು ಮೃತನ ವಾರಸದಾರರಿಗೆ ಇಳಿದು ಬರು ವೆಂದು ಗಣಿಸಲ್ಪಡಲಾಗುವದೆಂದೂ ಅದು ವಾರಸಾಕರ ಪಾತ್ರವಾಗುವದೆಂದೂ ಇದ ರಿಂದ ಸೂಚಿತವಾಗುವುದು.

(ಡ) ದಲ್ಲಿ ವಾಸಪ್ರದೇಶದ ನಿರ್ಣಯಮಾಡಲು ಮಾರ್ಗದರ್ಶನಮಾಡುವ ವಿಷಯವನ್ನು ಹೇಳಲಾಗಿದೆ. ವಾರಸಾಕರ ಆಕರಣೆ ಮಾಡುವಾಗ ಮರಣ ಸಮಯಕ್ಕೆ ಮೃತನ ವಾಸ ಪ್ರದೇಶವು ಯಾವುದಿತ್ತು ಎಂಬುದರ ನಿರ್ಣಯವಾಗುವುದು ಅಗತ್ಯವಿದೆ. ಅದರಿಂದ ಮೃತನ ಯಾವ ಆಸ್ತಿಯು ವಾರಸಾಕರ ಪಾತ್ರವಾಗುವುದು ಎಂಬುದನ್ನು ನಿಶ್ಚಿತಗೊಳಿಸಲು ನಿಯಂತ್ರಕನಿಗೆ ಸಹಾಯವಾಗುವದು. ಇಂಡಿಯನ್ ಸಕ್ಸೆಶನ್ ಆ್ಯಕ್ಟದಲ್ಲಿ ಈ ವಾಸಪ್ರದೇಶದ ಬಗ್ಗೆ ಹೇಳಲಾಗಿದೆ. ಆ ಕಾಯಿದೆಯು ಅನ್ವಯಿಸಿದರೆ ವಾಸಪ್ರದೇಶವು ಯಾವುದೆಂದು ಸಿದ್ಧವಾಗುವುದೋ ಅದನ್ನೇ ; ಮೃತನ ವಾಸಪ್ರದೇಶನೆಂದು ತಿಳಿಯಬೇಕೆಂದು ಹೇಳಲಾಗಿದೆ.

ಯಾವನೊಬ್ಬ ವ್ಯಕ್ತಿಯು ತನ್ನ ಶಾಶ್ವತ-ವಾಸಸ್ಥಳವೆಂದು ಇಲ್ಲವೆ ಕಾಯಿದೆಯ ದೃಷ್ಟಿಯಿಂದ ಶಾಶ್ವತ-ವಾಸಸ್ಥಳವೆಂದು ಗಣಿಸಲ್ಪಡುವುದೋ ಆದೇಶವು ಆ ವ್ಯಕ್ತಿಯ ವಾಸಪ್ರದೇಶವಾಗುವುದು. ಇದರಲ್ಲಿ ಅವನ ವಾಸಪ್ರದೇಶವೂ ಅಲ್ಲಿ ಶಾಶ್ವತವಾಗಿ ವಾಸಮಾಡಿಕೊಂಡಿರಬೇಕೆಂಬ ಅವನ ಇಚ್ಛೆಯೂ ಮುಖ್ಯವಾಗಿರುವುವು. ವಾಸಪ್ರದೇಶವು ಜನ್ಮದಿಂದ ಸಿದ್ಧವಾಗುವದು; ಆಯ್ಕೆಯಿಂದ ಸಿದ್ಧವಾಗುವದು; ಕಾಯಿದೆಯ ಮೂಲಕ ಸಿದ್ಧವಾಗುವುದು. ಯಾವುದೇ ದೃಷ್ಟಿಯಿಂದ ವಿಚಾರ ಮಾಡಿದರೂ ವಾಸ ಪ್ರದೇಶವನ್ನು ನಿರ್ಣಯಿಸುವುದು ಈ ವಾರಸಾಕರ ಕಾಯಿದೆಗೆ ಮಹತ್ವವಾದ ಸಂಗತಿಯಾಗಿದೆ.

ಈ ಕಲಮಿನ ಉಪಕಲಮು (೨) ರಲ್ಲಿ ಸಂಶಯ ನಿವಾರಣೆಗಾಗಿ ಕೆಲಮಾತುಗಳನ್ನು ಸ್ಪಷ್ಟಪಡಿಸಲಾಗಿದೆ. ಭಾಗ ೨ ರಲ್ಲಿ ಆಸ್ತಿಯು ಇಳಿದು ಬಂದಿದೆಯೆಂದು ಗಣಿಸಲ್ಪಡಲಾಗುವ ಆಸ್ತಿಯಮೇಲೆ ಕರಹಾಕಬೇಕೆಂದು ಹೇಳಲಾಗಿದೆ. ಭಾಗ ಮೂರರಲ್ಲಿ ಕರಮುಕ್ತತೆಯ ಬಗ್ಗೆ ಹೇಳಿದೆ. ಇದಕ್ಕಾಗಿ ಯಾವುದು ಕರ ಪಾತ್ರವಾದುದು ಯಾವುದು ಕರ ಮುಕ್ತವಾದುದು ಎಂಬುದನ್ನು ನಿರ್ಣಯ ಮಾಡಲು ಈ ಕಾಯಿದೆಯು ಜಾರಿಯಲ್ಲಿ ಬಂದ ದಿನಾಂಕವು ಮುಖ್ಯವಾಗುವುದು. ಆ ದಿನಾಂಕದ ಮೊದಲು – ನಂತರ ಆದ ವಿನ್ಯಾಸಗಳನ್ನು ಹೇಗೆ ಅರ್ಥಮಾಡಬೇಕೆಂಬ ಬಗ್ಗೆ ಇಲ್ಲಿ ಸೂಚಿಸಿದೆ. ಈ ಸೂಚನೆಯನುಸಾರವಾಗಿ ಯಾವುದು ಕರಪಾತ್ರವೆಂಬುದನ್ನು ಭಾಗ ೨ ರಲ್ಲಿಯೂ ಯಾವುದು ಕರಮುಕ್ತವೆಂಬುದನ್ನು ಭಾಗ ೩ ರಲ್ಲಿಯೂ ಕಂಡುಕೊಳ್ಳಲು ಅನುವಾವುದು. ಯಾಕೆಂದರೆ ಈ ಕಾಯಿದೆಯು ಪ್ರಾರಂಭವಾಗುವ ಕಿಂತ ಮೊದಲು ಆದ ಕೆಲ ವಿನ್ಯಾಸಗಳಿಗೂ ಈ ಕಾಯಿದೆಯು ಅನ್ವಯಿಸುವುದು.

**ಛ ವಾರಸಾಕರದ ಅಧಿಕಾರಿಗಳು**

(೧) ಈ ಕಾಯಿದೆಯ ಉದ್ದೇಶಗಳಿಗಾಗಿ ಈ ಕೆಳಗಿನ ಅಧಿಕಾರಿಗಳು ಇರುವರು. ಅವರು ಯಾರೆಂದರೆ :

(ಅ) ಬೋರ್ಡು ( ಸಮಿತಿ )

(ಬ) ವಾರಸಾಕರ ನಿಯಂತ್ರಕರು

(ಕ) ಮೌಲ್ಯಮಾಪಕರು

(೨) ಕೇಂದ್ರಸರಕಾರವು ತನಗೆ ಯೋಗ್ಯ ಕಂಡ ಸಂಖ್ಯೆಯಲ್ಲಿ ವಾರಸಾಕರ ನಿಯಂತ್ರಕರನ್ನು ನೇಮಿಸಬಹುದು ಮತ್ತು ಅವರು ಬೋರ್ಡಿನ ನಿಯಂತ್ರಣದ ಅಂಕಿತವಾಗಿ ಬೋರ್ಡು ಗೊತ್ತುಮಾಡಿಕೊಡುವಂತಹ ಕ್ಷೇತ್ರಗಳ ಸಂಬಂಧವಾಗಿ ಇಲ್ಲವೆ ಆಸ್ತಿಗಳ ಇಲ್ಲವೆ ಆಸ್ತಿಗಳ ವರ್ಗಗಳ ಸಂಬಂಧವಾಗಿ ತಮಗೆ ವಹಿಸಿಕೊಟ್ಟ ಕಾರ್ಯಾಚರಣೆ ಮಾಡುವರು.

ಆದರೆ, ಈ ಸಂಬಂಧವಾಗಿ ಬೋರ್ಡು ಮಾಡುವಂತಹ ನಿಯಮಗಳಿಗಂಕಿತವಾಗಿ ಪ್ರತಿಯೊಬ್ಬ ನಿಯಂತ್ರಕನು ತನ್ನ ಕ್ಷೇತ್ರಾಧಿಕಾರದ ಸ್ಥಳೀಯ ಪ್ರಾದೇಶಿಕ ಮಿತಿಯಲ್ಲಿ ಮೃತನ ಆಸ್ತಿಯ ಯಾವುದೇ ಭಾಗವು ಇದ್ದರೆ, ಆ ಆಸ್ತಿಯ ಇಲ್ಲವೆ ಅದರ ಯಾವುದೇ ಭಾಗದ ಸಂಬಂಧವಾಗಿ ಈ ಕಾಯಿದೆಯಿಂದ ನಿಯಂತ್ರಕನಿಗೆ ದಯಪಾಲಿಸಲಾದ ಯಾವುದೇ ಅಧಿಕಾರವನ್ನೂ ಕಾರ್ಯಾಚರಣೆಯಲ್ಲಿ ತರಬಹುದು.

ಮತ್ತೂ, ಆದರೆ, ಈ ಕಾಯಿದೆಯಿಂದ ನಿಯಂತ್ರಕನಿಗೆ ದಯಾಪಾಲಿಸಲಾದ ಎಲ್ಲ ಇಲ್ಲವೆ ಯಾವುದೇ ಅಧಿಕಾರವನ್ನು ಬೇರೆ ಯಾವುದೇ ನಿಯಂತ್ರಕನನ್ನು ಬದಿಗೆ ಸರಿಸಿ ಯಾವುದೇ ನಿಯಂತ್ರಕನು ಆ ಬಗ್ಗೆ ಬೋರ್ಡು ಸಾಮಾನ್ಯ ಇಲ್ಲವೆ ವಿಶಿಷ್ಟ ಆಜ್ಞೆಯಿಂದ ಸ್ಪಷ್ಟಪಡಿಸಿ ಅಧಿಕಾರ ನಡಿಸಬಹುದೆಂದು ನಿರ್ದೇಶಿಸಬಹುದು.

(೩) ಈ ಕಾಯಿದೆಯು ಪ್ರಾರಂಭವಾದ ನಂತರ ಹನ್ನೆರಡು ತಿಂಗಳಾದ ಮೇಲೆ ಮತ್ತು ಕಾಲಕಾಲಕ್ಕೆ ಕೇಂದ್ರ ಸರಕಾರವು ಸಾಕಷ್ಟು ಸಂಖ್ಯೆಯಲ್ಲಿ ಯೋಗ್ಯತಾಸಂಪನ್ನ ವ್ಯಕ್ತಿಗಳನ್ನು ಮೌಲ್ಯಮಾಪಕರೆಂದು ಈ ಕಾಯಿದೆಯ ಉದ್ದೇಶಗಳಿಗಾಗಿ ನೇಮಿಸುವುದು. ಮತ್ತು ಇಂತಹ ವ್ಯಕ್ತಿಗಳ ವೇತನವೆಂದು ದರಗಳ ಪಟ್ಟಿಯನ್ನು ಗೊತ್ತುಮಾಡುವುದು.

(೪) ಸರಕಾರಿ ಸೇವೆ ಮತ್ತು ಅಧಿಕಾರ ಪದಗಳಲ್ಲಿರುವ ವ್ಯಕ್ತಿಗಳ ಸೇವಾಕರಾರುಗಳನ್ನು ಕ್ರಮವಾಗಿಸಲು ಮಾಡಿದ ಕೇಂದ್ರಸರಕಾರದ ಆಜ್ಞೆ ಮತ್ತು ನಿಯಮಗಳಿಗಂಕಿತವಾಗಿ ತನ್ನ ಕಾರ್ಯಗಳ ನಿರ್ವಹಣೆಯಲ್ಲಿ ಸಹಾಯಮಾಡುವುದಕ್ಕಾಗಿ ಅವಶ್ಯಕವೆನ್ನಿಸಿದಂತಹ ನಿರ್ವಾಹಕ ಇಲ್ಲವೆ ಕಾರಕೂನಿ ಕೆಲಸಗಾರರನ್ನು ನಿಯಂತ್ರಕನು ನೇಮಿಸಬಹುದು.

(೫) ಮೌಲ್ಯಮಾಪಕರನ್ನು ಹೊರತುಪಡಿಸಿ, ಈ ಕಾಯಿದೆಯ ನಿರ್ವಹಣೆಯಲ್ಲಿ ನೇಮಿಸಲ್ಪಟ್ಟ ಎಲ್ಲ ವ್ಯಕ್ತಿಗಳು ಮತ್ತು ಅಧಿಕಾರಿಗಳು ಬೋರ್ಡಿನ ಆಜ್ಞೆ-ಆದೇಶ, ನಿರ್ದೇಶಗಳನ್ನು ಲಕ್ಷಿಸಬೇಕು ಮತ್ತು ಅನುಸರಿಸಬೇಕು.

**ವಿವೇಚನೆ**

ವಾರಸಾ ಕರವನ್ನು ಆಕರಿಸುವ ಮತ್ತು ವಸೂಲಮಾಡುವ ಅಧಿಕಾರಿವರ್ಗದ ರೂಪರಚನೆ ಅಧಿಕಾರಗಳನ್ನು ಹೇಳಲಾಗಿದೆ. (೧) ಬೋರ್ಡು ಇವರ ವ್ಯಾಖ್ಯೆಯನ್ನು ೨ನೆಯ ಕಲಮಿನ ೨ನೆಯಉಪಕಲಮಿನಲ್ಲಿ ಹೇಳಿದೆ. ೧೯೨೪ ರ ಸೆಂಟ್ರಲ ರೆವಿನ್ಯೂ ಬೋರ್ಡ ಆ್ಯಕ್ಟದನ್ವಯವಾಗಿ ರಚಿತವಾದ ಕೇಂದ್ರ ರೆವಿನ್ಯೂಬೋರ್ಡು. (೨) ನಿಯಂತ್ರಕರ ವಿಷಯವು ೨ನೆಯ ಕಲಮಿನ ೫ನೆಯ ಉಪಕಲಮಿನಲ್ಲಿ ಬಂದಿದೆ. (೩) ಮೌಲ್ಯಮಾಪಕನ ವ್ಯಾಖ್ಯೆಯು ೨ನೆಯ ಕಲಮಿನ ಉಪಕಲಮು ೨೦ ರಲ್ಲಿ ಬಂದಿದೆ.

ಬೋರ್ಡು ೧೯೫೩ ರ ಡಿಸೆಂಬರ ೪ನೆಯ ದಿನಾಂಕಕ್ಕೆ ಒಂದು ಪ್ರಕಟನೆ ಹೊರಡಿಸಿ ಆಯಾ ನಿಯಂತ್ರಕರ ಕ್ಷೇತ್ರಾಧಿಕಾರವನ್ನು ಅಧಿಕಾರಕ್ಷೇತ್ರವನ್ನು ನಿರ್ಣಯಿಸಿದೆ. ಆ ಪ್ರಕಟನೆಯ ವಿವರವು ಹೀಗಿದೆ:

ಈ ಕಾಯಿದೆಯ ಆಡಳಿತವು ಆದಾಯ ಕರ ಖಾತೆಯ ವಿಭಾಗವಾಗಿಯೆ ಕಾರ್ಯಾಚರಣೆ ಮಾಡಲ್ಪಡುವುದು. ಆದುದರಿಂದ ಆದಾಯ ಕರದ ಅಧಿಕಾರಿಗಳಿಗೆ ವಾರಸಾಕರದ ಅಧಿಕಾರಗಳು ಬರುವುವು. ಆದಾಯಕರ ಕಮಿಶನರನೇ ವಾರಸಾಕರ ನಿಯಂತ್ರಕನು. ಹತ್ತುಲಕ್ಷದಕಿಂತಲೂ ಹೆಚ್ಚು ಬೆಲೆಯಾಗುವ ಆಸ್ತಿಯು ಇವನ ಅಧಿಕಾರ ಕ್ಷೇತ್ರದಲ್ಲಿ ಬರುವುದು. ಆದಾಯಕರ ಕಮೀಶನರನೆಂದು ಯಾವ ಪ್ರದೇಶದ ಕ್ಷೇತ್ರಾಧಿಕಾರವು ಇವನ ಕಡೆಗೆ ಬಂದಿರುವದೋ ಆ ಪ್ರದೇಶದಲ್ಲಿಯ ಮೃತರ ಆಸ್ತಿಯ ಬಗ್ಗೆ ಇವನು ನಿಯಂತ್ರಕನು. ಆದಾಯಕರದ ಪರಿಶೀಲನ ಸಹಾಯಕ ಕಮೀಶನರನೇ ವಾರಸಾಕರದ ಉಪಯನಿಯಂತ್ರಕನು. ೫ ಲಕ್ಷದಕಿಂತ ಹೆಚ್ಚು ಮತ್ತು ಹತ್ತುಲಕ್ಷದಕಿಂತ ಹೆಚ್ಚು ಬೆಲೆಆಗದ ಆಸ್ತಿಯು ಇವನ ಅಧಿಕಾರ ಕ್ಷೇತ್ರದಲ್ಲಿ ಬರುವುದು. ಆದಾಯಕರದ ಅಧಿಕಾರಿಯಾಗಿದ್ದಾಗ ಇರುವ ಪ್ರಾದೇಶಿಕ ಕ್ಷೇತ್ರಾಧಿಕಾರವುಳ್ಳ ಪ್ರದೇಶವು ವಾರಸಾಕರದ ಉಪನಿಯಂತ್ರಕನೆಂದು ಕೆಲಸ ಮಾಡುವಾಗ ಬರುವುದು. ಐದುಲಕ್ಷಕಿಂತ ಕಡಿಮೆ ಬೆಲೆಯಾದರೂ ಇವನು ಅಧಿಕಾರ ನಡಸಬಹುದು. ಒಂದನೇವರ್ಗದ ಆದಾಯಕರ ಅಧಿಕಾರಿಯು ವಾರಸಾಕರದ ಸಹಾಯಕ ನಿಯಂತ್ರಕನು. ೫ ಲಕ್ಷಕ್ಕಿಂತ ಹೆಚ್ಚು ಬೆಲೆ ಆಗದ ಆಸ್ತಿಯು ಇವನ ಅಧಿಕಾರ ಕ್ಷೇತ್ರದ್ದು. ಆದಾಯಕರಕ್ಕಾಗಿ ಇದ್ದ ಕ್ಷೇತ್ರಾಧಿಕಾರವುಳ್ಳ ಪ್ರಾದೇಶಿಕ ಮಿತಿಯೆ ಇವನ ಕ್ಷೇತ್ರಾಧಿಕಾರ. ಎರಡನೆಯ ವರ್ಗದ ಆದಾಯಕರ ಅಧಿಕಾರಿಯೂ ಸಹಾಯಕ ನಿಯಂತ್ರಕನು. ಇವನ ಕಡೆಗೆ ಒಂದೂವರೆಲಕ್ಷಕ್ಕಿಂತ ಹೆಚ್ಚು ಬೆಲೆ ಆಗದ ಆಸ್ತಿಗಳು ಮಾತ್ರ ಬರುವುವು. ಆದಾಯಕರದ ಅಧಿಕಾರಿಯಾಗಿರುವಾಗಿನ ಪ್ರಾದೇಶಿಕ ಕ್ಷೇತ್ರಾಧಿಕಾರ ವಾರಸಾಕರದ ಸಹಾಯಕ ನಿಯಂತ್ರಕನಾಗಿದ್ದಾಗ ಬರುವುದು.

---

# ಭಾಗ ಎರಡು

# ವಾರಸಾಕರದ ಆಕರಣೆ

## ಕರಭಾರ ವ್ಯಾಪ್ತಿ

**೫.** ವಾರಸಾಕರ ಹಾಕುವದು.

(೧) ಈ ಕಾಯಿದೆಯು ಪ್ರಾರಂಭವಾದ ನಂತರ ಮರಣ ಹೊಂದಿದ ಪ್ರತಿಯೊಬ್ಬ ವ್ಯಕ್ತಿಯ ಸಂಪರ್ಭದಲ್ಲಿ ಈ ಮುಂದೆ ಸ್ಪಷ್ಟವಾಗಿ ಗೊತ್ತುಮಾಡಿದುದನ್ನು ಹೊರತುಪಡಿಸಿ, ಈ ಕಾಯಿದೆಯ ಒಂದನೆಯ ಕೋಷ್ಟಕದಲ್ಲಿ ನಿರ್ದಿಷ್ಟಪಡಿಸಿದ ರಾಜ್ಯಗಳಲ್ಲಿ ಇರುವ ಕೃಷಿಭೂಮಿಯನ್ನೊಳಗೊಂಡು ನಿವೇಶಿತ ಇಲ್ಲವೆ ಅನಿವೇಶಿತವಾಗಿರುವ ಮತ್ತು ಅಂತಹ ವ್ಯಕ್ತಿಯ ಮರಣ ಸಮಯಕ್ಕೆ ಇಳಿದು ಬರುವ ಎಲ್ಲ ಆಸ್ತಿಯ ಮೇಲೆ ಈ ಮುಂದೆ ಗೊತ್ತುಮಾಡಲಾದಂತೆ, ಮುಖ್ಯ ಬೆಲೆಯ ಮೇಲೆ " ವಾರಸಾಕರ " ವೆಂಬ ಕರವನ್ನು ೩೫ನೇಯ ಕಲಮಿನನ್ವಯವಾಗಿ ನಿಶ್ಚಿತಮಾಡಿದ ದರದಂತೆ ಹಾಕಲಾಗುವುದು.

(೨) ಸಂವಿಧಾನದ ೨೫೨ನೆಯ ನಿಬಂಧನೆಯ ವಾಕ್ಯಾವಳಿ (೧) ರನ್ವಯವಾಗಿ ಆ ರಾಜ್ಯಗಳಲ್ಲಿರುವ ಕೃಷಿಭೂಮಿಗಳ ಮೇಲೆ ವಾರಸಾಕರ ಸಂಬಂಧವಾಗಿ ಈ ಕಾಯಿದೆಯನ್ನು ಅಂಗೀಕರಿಸುವ ಗೊತ್ತುವಳಿಗಳು ಆ ರಾಜ್ಯಗಳ ಶಾಸನಸಭೆಗಳಿಂದ ಸ್ವೀಕರಿಸಲ್ಪಟ್ಟರೆ, ಕೇಂದ್ರಸರಕಾರವು ಸರಕಾರೀ ಗ್ಯಾಜಿಟನಲ್ಲಿಯ ಪ್ರಕಟನೆಯಿಂದ ಮೊದಲನೆಯ ಕೋಷ್ಟಕಕ್ಕೆ ಬೇರೆ ಯಾವುದೇ ರಾಜ್ಯದ ಹೆಸರನ್ನೂ ಸೇರಿಸಬಹುದು ಮತ್ತು ಆ ಪ್ರಕಟನೆಯು ಹೊರಡಿಸಲ್ಪಟ್ಟನಂತರ ಹಾಗೆ ಸೇರಿಸಲ್ಪಟ್ಟ ರಾಜ್ಯಗಳು ಉಪಕಲಮು (೧) ರ ಅರ್ಥದಲ್ಲಿ ಒಂದನೆಯ ಕೋಷ್ಟಕದಲ್ಲಿ ನಿರ್ದಿಷ್ಟಪಡಿಸಲಾದ ರಾಜ್ಯಗಳೆಂದು ಗಣಿಸಲ್ಪಡಲಾಗುವುದು.

### ವಿವೇಚನೆ

ಮರಣದ ಮೂಲಕ ಇಳಿದುಬರುವ **ಎಲ್ಲ** ಆಸ್ತಿಯು ಈ ಕಲಮಿನ ಪ್ರಕಾರ ಕರಪಾತ್ರವಾದುದು. ಆಸ್ತಿಯು ತಾತ್ಕಾಲಿಕವಾಗಿ ಇಳಿದು ಬರಬಹುದು; ನಿಶ್ಚಿತವಾಗಿ ಇಳಿದುಬರಬಹುದು; ಅವಲಂಬಕವಾಗಿ ಇಳಿದು ಬರಬಹುದು; ಮೌಲಿಕವಾಗಿ ಇಳಿದು ಬರಬಹುದು; ಬದಲಾದ ಕಾಲಮಿತಿಯ ಮೂಲಕ ಇಳಿದು ಬರಬಹುದು. ಒಟ್ಟಿನಲ್ಲಿ ಇಳಿದು ಬಂದ ಎಲ್ಲ ಆಸ್ತಿಯ ಮೇಲೆ ಕರ ಹಾಕಲಾಗುವದು ಎಂದು

ಇದರಲ್ಲಿ ಹೇಳಿದೆ. ಇನ್ನೂ ಕೆಲವು ಮಾತುಗಳನ್ನು ಈ ಕಲಮು ಹೇಳಿದೆ. ವಾರಸಾಕರ ಪಾತ್ರವಾದ ಆಸ್ತಿಯು ಯಜಮಾನನ ಮರಣವು ೧೫ ನೆಯ ಅಕ್ಟೋಬರ ೧೯೫೩ ರ ನಂತರ ಘಟಿಸಿರಬೇಕು. ಮರಣ ಸಮಯಕ್ಕೆ ಇಳಿದು ಬಂದ ಆಸ್ತಿಯಮೇಲೆ ಕರ ಹಾಕುವದನ್ನು ಮಾತ್ರ ಈ ಕಲಮು ಹೇಳುತ್ತದೆ. ಈ ಕಲಮಿನ ಪ್ರಕಾರ ಆಸ್ತಿಯ ಬೆಲೆಯ ಮೇಲೆ ಕರ ಆಕರಣೆ ಮಾಡಲಾಗುವುದು. ಆಸ್ತಿಯಲ್ಲಿ ಕೃಷಿಭೂಮಿಯು ಸಮಾವೇಶಮಾಡಲ್ಪಟ್ಟಿದೆ. ಇದು ಮಾತ್ರ ಮೊದಲನೆಯ ಕೋಷ್ಟಕದಲ್ಲಿ ಹೇಳಲಾದ ಮತ್ತು ಮುಂದೆ ಆ ಕೋಷ್ಟಕದಲ್ಲಿ ಸಮಾವೇಶವಾಗುವ ರಾಜ್ಯಗಳ ಸಂಬಂಧದಲ್ಲಿ ಇದೆ.

ಈ ಕಾಯಿದೆಯಲ್ಲಿಯೆ ಈ ಕಲಮು ಮಹತ್ವವಾದುದು. ಆದುದರಿಂದ ಇದರಲ್ಲಿ ಸಮಾವೇಶವಾದ ಎಲ್ಲ ವಿಷಯಗಳ ವಿವರವಾದ ಜ್ಞಾನಮಾಡಿಕೊಳ್ಳುವದು ಅಗತ್ಯವಾಗಿದೆ. ಪ್ರತಿಯೊಬ್ಬ ವ್ಯಕ್ತಿ, ಎಂದರೆ ಆ ವ್ಯಕ್ತಿಯ ವಾಸಪ್ರದೇಶವು ಭಾರತವು ಆಗಿರಲ್ಲಿ ಇಲ್ಲವೆ ಆಗಿರದೆ ಇರಲಿ ಅಂತಹ ಪ್ರತಿಯೊಬ್ಬವ್ಯಕ್ತಿ. ಈ ಕಲಮಿನಲ್ಲಿ ಹೇಳಲಾದ ಮರಣದ ಘಟನೆಯು ೧೯೫೩ ರ ಅಕ್ಟೋಬರ ೧೫ನಂತರ ಆಗಿರಲೇಬೇಕು. ಈ ಕಲಮಿನಲ್ಲಿ ಹೇಳವಾದ ಎಲ್ಲ ಆಸ್ತಿ ಅಂದರೆ ಈ ಕಾಯಿದೆಯ ೩ ನೆಯ ಭಾಗದಲ್ಲಿ ಹೇಳಲಾದ ಕರಮುಕ್ತತೆಯ ಕಿಂತವಾಗಿ ಎಂದು ತಿಳಿಯತಕ್ಕದ್ದು. ಆಸ್ತಿಯ ಮುಖ್ಯ ಬೆಲೆಯ ಮೇಲೆ ಕರಹಾಕಲಾಗುವದು, ಎಂದು ಹೇಳಿಯದೆ. ಮರಣ ಹೊಂದಿದ ತಾರೀಖಿಗೆ ಮುಕ್ತಪೇಟೆಯಲ್ಲಿ ಆಸ್ತಿಯನ್ನು ಮಾರಿದರೆ ಬರಬಹುದಾದ ಸಾಮಾನ್ಯ ಬೆಲೆ ಎಂದು ಅರ್ಥವಾಗುವದು. ಆಸ್ತಿಯ ವ್ಯಾಖ್ಯೆಯನ್ನು ಕಲಮು ೨ (೧೫)ರಲ್ಲಿ ಮಾಡಲಾಗಿದೆ. ಮೊದಲನೆಯ ಕೋಷ್ಟಕದಲ್ಲಿ ಹೇಳಲಾದ ರಾಜ್ಯಗಳ ಸಂಬಂಧದಲ್ಲಿ 'ಆಸ್ತಿ' ಯಲ್ಲಿ ಕೃಷಿಭೂಮಿಯೂ ಒಳಗೊಳ್ಳುವುದು. ಸದ್ಯಕ್ಕೆ ಆ ರಾಜ್ಯಗಳು ಯಾವುವೆಂದರೆ ಮುಂಬಯಿ. ಮಧ್ಯಪ್ರದೇಶ, ಓರಿಸಾ, ಪಂಜಾಬ, ಉತ್ತರಪ್ರದೇಶ, ಹೈದರಾಬಾದ, ಮಧ್ಯಭಾರತ, ರಾಜಸ್ಥಾನ, ಸೌರಾಷ್ಟ್ರ: ಸಂವಿಧಾನದಲ್ಲಿ ಹೇಳಿದ (ಕ) ವಿಭಾಗದ ರಾಜ್ಯಗಳು. ಆಸ್ತಿಯು ಮರಣ ಸಮಯಕ್ಕೆ ಇಳಿದು ಬಂದುದು ಆಗಿರಬೇಕು. ಅಂದರೆ ಮರಣದ ಮೂಲಕ ಹಸ್ತಾಂತರ ಹೊಂದಿರಬೇಕು. ಹಸ್ತಾಂತರವು ವ್ಯಕ್ತಿಯಿಂದ ವ್ಯಕ್ತಿಗೆ ಆಗಿರಬಹುದು. ವ್ಯಕ್ತಿಯಿಂದ ಒಂದು ವ್ಯಕ್ತಿಗಳ ಗುಂಪಿಗೆ ಆಗಿರಬಹುದು. ವ್ಯಕ್ತಿಗಳ ಗುಂಪಿನಿಂದ ವ್ಯಕ್ತಿಗೆ ಆಗಿರಬಹುದು. ಇಲ್ಲವೆ ವ್ಯಕ್ತಿಗಳ ಗುಂಪಿನಿಂದ ಇನ್ನೊಂದು ಗುಂಪಿಗೆ ಆಗಿರಬಹುದು.

ವಾರಸಾಕರದ ಆಕರಣೆಯು ೩೫ ನೆಯ ಕಲಮಿನಲ್ಲಿ ಹೇಳಲಾದ ದರದಂತೆ ಆಗುವುದು ಎಂದು ಹೇಳಿದೆ.

**೬ ವಿನ್ಯಾಸ ಸಾಮರ್ಥ್ಯದ ಒಳಗಿನ ಆಸ್ತಿ**

ಯಾವ ಆಸ್ತಿಯನ್ನು ಮೃತನು ತನ್ನ ಮರಣ ಸಮಯಕ್ಕೆ ವಿನ್ಯಾಸ ಮಾಡಲು ಸಮರ್ಥನಾಗಿರುವನೋ ಆ ಆಸ್ತಿಯು ಅವನ ಮರಣದ ಮೂಲಕ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು.

**ವಿವೇಚನೆ**

ಮರಣದ ಮೂಲಕ ವಾರಸದಾರರಿಗೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವ ಆಸ್ತಿಯ ಬಗ್ಗೆ ೬ ರಿಂದ ೧೭ ನೆಯ ಕಲಮುಗಳಲ್ಲಿ ಹೇಳಲಾಗಿದೆ.

ಮೃತನಿಗೆ ಆಸ್ತಿಯ ಮೇಲೆ ಪೂರ್ಣಾಧಿಕಾರವಿದ್ದರೂ ಕೆಲವೊಂದು ಕಾರಣಕ್ಕಾಗಿ ಅದು ಮರಣಸಮಯಕ್ಕೆ ಇಳಿದು ಬಂದಿರುವುದಿಲ್ಲ. ಇಂತಹ ಆಸ್ತಿಯು ಇಳಿದು ಬಂದಿರುವುದೆಂದು ಗಣಿಸಲ್ಪಡಲಾಗುವದು. ಅದರ ಬಗ್ಗೆ ಈ ಕಲಮಿನಲ್ಲಿ ಹೇಳಲಾಗಿದೆ. ಆಸ್ತಿಗೆ ನೇಮಕಮಾಡುವ ಸಾಮಾನ್ಯಅಧಿಕಾರದ ಕಕ್ಷೆಯಲ್ಲಿ ಬರುವಂತಹ ಮತ್ತು ಆ ಅಧಿಕಾರವನ್ನು ಇನ್ನೂ ನಡಸದಂತಹ ಆಸ್ತಿಯು ಈ ಕಲಮಿನ ವ್ಯಾಪ್ತಿಯಲ್ಲಿ ಬರುವುದು. ಮರಣ ಸಂಭವಿಸುವ ತನಕ ಹಕ್ಕುಂಟಾಗದೆ ಇರುವಂತಹ ಆಸ್ತಿಗಳು: ಉದಾಹರಣೆ: ಮೃತನ ಪ್ರತಿನಿಧಿಗಳಿಗೆ ಕೊಡಮಾಡಲಾಗುವ ಪರಿಹಾರಹಣ· ಇಲ್ಲವೆ ಗ್ರ್ಯಾಚುಟಿ (ಉಪಾಯನ) ಇಲ್ಲವೆ ನಿವರ್ತನವಾಗುವ ದಾನಗಳು ಇಲ್ಲವೆ ನಿವೇಶನಗಳು.

ಈ ಕಲಮಿನಲ್ಲಿ ಮುಖ್ಯವಾಗಿ ನೋಡಬೇಕಾದುದು ಮೃತನಲ್ಲಿ ಅಂತರ್ಗತವಾಗಿರುವ ಅವನ ಆಸ್ತಿಯ ವಿನ್ಯಾಸದ ಸಾಮರ್ಥ್ಯವನ್ನು. ಅವನಿಗೆ ವಿನ್ಯಾಸ ಸಾಮರ್ಥ್ಯವಿದ್ದಿತೆಂದು ಕಂಡು ಬಂದರೆ ಮರಣದ ಮೂಲಕ ಆ ಆಸ್ತಿಯು ಇಳಿದು ಬರುವುದೆಂದು ಗಣಿಸಲ್ಪಡಲಾಗುವುದೆಂದು ಈ ಕಲಮು ಹೇಳುತ್ತದೆ. ಪ್ರತ್ಯಕ್ಷ ವಿನ್ಯಾಸವು ಮಾಡಲ್ಪಟ್ಟಿರಲಿ ಇಲ್ಲವೆ ಮಾಡಲ್ಪಡದೆ ಇರಲಿ. ಅವನಿಗೆ ಮರಣ ಕಾಲದಲ್ಲಿ ಸಾಮರ್ಥ್ಯವಿದೆಯೆಂದು ಕಂಡುಬಂದರೆ ಸಾಕಾಗುವದು. ಮೃತನಿಗೆ ಈ ಬಗೆಯ ಸಾಮರ್ಥ್ಯವಿದೆಯೊ ಇಲ್ಲವೊ ಎಂಬುದಕ್ಕೆ ಈ ಕಾಯಿದೆಯ ೩ನೆಯ ಕಲಮಿನ ಉಪ ಕಲಮು (೧) ಸಹಾಯಕವಾಗುವುದು. ಅಲ್ಲಿ ಹೇಳಿದ ಅಧಿಕಾರವಿದ್ದರೆ ಮೃತನಿಗೆ ಆಸ್ತಿಯು ವಿನ್ಯಾಸ ಸಾಮರ್ಥ್ಯವಿದೆಯೆಂದು ಕಂಡು ಬಂದಂತಾಗುವುದು.

ಈ ಕಲಮು ಹಚ್ಚಲ್ಪಡುವಾಗ ಮೊದಲು ೫ ನೆಯ ಕಲಮು ಹಚ್ಚಲ್ಪಟ್ಟಿರಬೇಕು. ೫ ನೆಯ ಕಲಮಿನ ಕಕ್ಷೆಯಲ್ಲಿ ಬರದೆ ಉಳಿದ ಆಸ್ತಿಯಿದ್ದರೆ ಆಗ ೬ ನೆಯ ಕಲಮು ಹತ್ತುವುದೇ ಎಂಬುದನ್ನು ನೋಡಬೇಕು. ೫ ನೆಯ ಕಲಮು ಹತ್ತಿ ಉಳಿದ ಆಸ್ತಿಗಳ ವಿವರಗಳನ್ನು ಇಲ್ಲಿ ಕೊಡಲಾಗಿದೆ:

(೧) ನಿವರ್ತನವಾಗುವ ಮತ್ತು ಅಪೂರ್ಣವಾಗಿರುವ ದಾನಗಳು. ಯಾವುದೊಂದು ಕಾರಣಕ್ಕಾಗಿ ದಾನವು ಪೂರ್ಣವಾಗಿರದೆ ಇದ್ದರೆ, ಇಲ್ಲವೆ ನಿವರ್ತನಮಾಡುವ ಅಧಿಕಾರವನ್ನು ದಾನಿಯು ತನ್ನವಶದಲ್ಲಿಟ್ಟುಕೊಂಡಿದ್ದರೆ, ಆ ಆಸ್ತಿಯ ಇಲ್ಲವೆ ಅದರಲ್ಲಿಯ ಹಿತಸಂಬಂಧವನ್ನು ವಿನ್ಯಾಸಮಾಡುವ ಸಾಮರ್ಥ್ಯವನ್ನು ದಾನಿಯು ಕಾಯ್ದುಕೊಂಡಿರುವನೆಂದು ಆಗುವುದು. ಆಗ ಈ ಕಲಮು ಹತ್ತುವುದು.

(೨) ಮರಣದ ಮೂಲಕ ಮೃತನ ಪ್ರತಿನಿಧಿಗಳಿಗೆ ದೊರೆಯುವ ಉಪಾಯನ (ಗ್ರ್ಯಾಚುಟಿ) ಗಳು. ಇವು ಆಸ್ತಿಯಾದರೂ ಮರಣ ಸಂಭವದ ಮೂಲಕವೇ ಅವು ಅಸ್ತಿತ್ವದಲ್ಲಿ ಬರುವುವು. ಮರಣ ಪೂರ್ವದಲ್ಲಿ ಆಸ್ತಿಯು ಅಸ್ತಿತ್ವದಲ್ಲಿರದೆ ಇರುವದರಿಂದ ೫ ನೆಯ ಕಲಮು ಹೆತ್ತುವದಿಲ್ಲ. ಅದಕ್ಕೆ ೬ ನೆಯ ಕಲಮು ಹೆತ್ತುವುದು.

(೩) ವಸೂಲಾಗುವ ಪರಿಹಾರ ದ್ರವ್ಯ. ಕಾರ್ಮಿಕರ ಪರಿಹಾರ ಕಾಯಿದೆಯನ್ವಯವಾಗಿ ಮರಣದ ಮೂಲಕ ದೊರೆಯಬಹುದಾದ ಪರಿಹಾರ ದ್ರವ್ಯವು, ಈ ಕಲಮಿನ ಕಕ್ಷೆಯಲ್ಲಿ ಬರುವುದು.

ಮರಣದ ಮೂಲಕ ಯಾವ ಆಸ್ತಿಯು ಇಳಿದು ಬರುವುದೆಂದು ಗಣಿಸಲ್ಪಡುವುದು, ಎಂಬುದನ್ನು ತಿಳಿಯುವುದಕ್ಕೆ ವಿನ್ಯಾಸ ಸಾಮರ್ಥದ ವಿವರ ತಿಳಿಯುವದು ಆವಶ್ಯಕವಾಗಿದ್ದಂತೆ, ಯಾವ ಆಸ್ತಿಯು ಕರಮುಕ್ತತೆಗೆ ಪಾತ್ರವಾಗಿದೆ ಎಂಬುದನ್ನು ತಿಳಿಯುವುದಕ್ಕಾಗಿಯೂ ಆವಶ್ಯಕವಾಗಿರುವುದು, ಎಂಬುದನ್ನು ಮರೆಯಲಾಗದು.

**೭ ಮರಣದ ಮೂಲಕ ಮುಕ್ತಾಯವಾಗುವ ಹಿತಸಂಬಂಧಗಳು.**

(೧) ಈ ಕಲಮಿನ ಕಕ್ಷೆಗಳಿಗಂಕಿತವಾಗಿ, ಮೃತನ ಮರಣದ ಮೂಲಕ ಮುಕ್ತಾಯವಾಗುವ ಹಿತಸಂಬಂಧಗಳುಳ್ಳ ಮೃತನ ಇಲ್ಲವೆ ಬೇರೆ ಯಾವುದೇ ವ್ಯಕ್ತಿಯ ಆಸ್ತಿಯು ಮೃತನ ಮರಣದ ಮೂಲಕ ಉಂಟಾಗುವ ಲಾಭ ಪ್ರಮಾಣದ ಮಟ್ಟಿಗೆ ಇಲ್ಲವೆ ಇಂತಹ ಹಿತಸಂಬಂಧಗಳು ಮುಕ್ತಾಯವಾಗುವುದರಿಂದ ಉಂಟಾಗುವ ಲಾಭದ ಪ್ರಮಾಣದ ಮಟ್ಟಿಗೆ, ವಿಶೇಷವಾಗಿ, ಮಿತಾಕ್ಷರ, ಮರುಮಕ್ಕತ್ತಾಯಂ, ಇಲ್ಲವೆ ಅಳಿಯಸಂತಾನ ಕಾಯಿದೆಯ ಶಾಸನಗಳಿಗೆ ಅಂಕಿತವಾದ ಹಿಂದು ಕುಟುಂಬದ ಏಕತ್ರಕುಟುಂಬದ ಆಸ್ತಿಯಲ್ಲಿಯ ದಾಯಾದಿ ಹಿತಸಂಬಂಧವನ್ನೊಳಗೊಂಡು ಇಳಿದು ಬರುವುದೆಂದು ಗಣಿಸಲಡ್ಪಲಾಗುವುದು.

(೨) ಮಿತಾಕ್ಷರ ಶಾಸನ ಪ್ರಣಾಲಿಯಂಕಿತವಾಗಿರುವ ಹಿಂದು ದಾಯಾದಿ ಸಂಸ್ಥೆಯ ಸದಸ್ಯನು ಮರಣಹೊಂದಿದರೆ,

(ಅ) ಮೃತನಿಗೆ ಮರಣದ ಕಾಲಕ್ಕೆ ಹದಿನೆಂಟು ವರುಷದ ವಯಸ್ಸು ಪೂರ್ಣವಾಗಿದ್ದರೆ, ಇಲ್ಲವೆ

(ಬ) ಮೃತನಿಗೆ ಮರಣದ ಕಾಲಕ್ಕೆ ಹದಿನೆಂಟು ವರುಷದ ವಯಸ್ಸು ಪೂರ್ಣವಾಗಿರದಿದ್ದರೆ, ಮರಣದಕಾಲಕ್ಕೆ ಮೃತನ ತಂದೆ ಇಲ್ಲವೆ ಗಂಡುಸಂತಾನದಲ್ಲಿ ಬೇರೆ ಯಾರಾದರೂ ಪಿತೃಗಳು ಆ ಕುಟುಂಬದ ದಾಯಾದಿಯಾಗಿರದಿದ್ದರೆ,

ಮಾತ್ರ, ಉಪಕಲಮು (೧) ರ ಕಕ್ಷೆಗಳು ದಾಯಾದಿ ಆಸ್ತಿಯಲ್ಲಿಯ ಮೃತನ ಹಿತಸಂಬಂಧಗಳ ವಿಷಯದಲ್ಲಿ ಅನ್ವಯಿಸುವುವು.

**ವಿವರಣೆ:** ಮೃತನು (ದಾಯ ಸಂಸ್ಥೆಯಲ್ಲಿಯ) ಉಪದಾಯ ಸಂಸ್ಥೆಯಲ್ಲಿ ಅದರ ಸ್ವಂತ ಪ್ರತ್ಯೇಕವಾದ ಆಸ್ತಿಯ ದಾಯಾದನೂ ಆಗಿದ್ದರೆ, ಈ ಉಪಕಲಮಿನ ಕಕ್ಷೆಗಳು ದಾಯಸಂಸ್ಥೆಯ ಮತ್ತು ಉಪದಾಯ ಸಂಸ್ಥೆಯ ಸಂಬಂಧವಾಗಿ ಪ್ರತ್ಯೇಕವಾಗಿ ಪರಿಣಾಮಕಾರಿಯಾಗುವುವು.

(೩) ಮರುಮಕ್ಕತ್ತಾಯಂ ಉತ್ತರಾಧಿಕಾರಿತ್ವದ ನಿಯಮದಂಕಿತವಾಗಿರುವ ಯಾವುದೇ ತಾರವಾಡದ ಇಲ್ಲವೆ ತವಾಜಿಯ ಸದಸ್ಯನು ಇಲ್ಲವೆ ಅಳಿಯ ಸಂತಾನ ಉತ್ತರಾಧಿಕಾರಿತ್ವದ ನಿಯಮದಂಕಿತವಾಗಿರುವ ಕುಟುಂಬ ಇಲ್ಲವೆ ಕವರು ಇದರ ಸದಸ್ಯನು ಮರಣಹೊಂದಿದರೆ, ಮೃತನಿಗೆ ಹದಿನೆಂಟು ವರುಷದ ವಯಸ್ಸು ಪೂರ್ಣವಾಗಿರದಿದ್ದರೆ, ಸಂದರ್ಭಾನುಸಾರವಾಗಿ ತಾರವಾಡ, ತವಾಜಿ, ಕುಟುಂಬ ಇಲ್ಲವೆ ಕವರು ಇದರ ಆಸ್ತಿಯಲ್ಲಿಯ ಮೃತನ ಹಿತಸಂಬಂಧದ ವಿಷಯವಾಗಿ ಉಪಕಲಮು (೧) ರಲ್ಲಿಯ ಕಕ್ಷೆಗಳು ಅನ್ವಯಿಸುವುದಿಲ್ಲ.

(೪) ಯಾವ ಆಸ್ತಿಯಲ್ಲಿ ಮೃತನಿಗೆ ಇಲ್ಲವೆ ಬೇರೆ ಯಾವುದೇ ವ್ಯಕ್ತಿಗೆ ಕೇವಲ ಅಧಿಕಾರಪದ ಧಾರಕನೆಂಬುದಕ್ಕಾಗಿ ಹಿತಸಂಬಂಧವಿರುವುದೋ ಇಲ್ಲವೆ ಧರ್ಮಾರ್ಥಸಂಸ್ಥೆಯ ಇಲ್ಲವೆ ಏಕಸದಸ್ಯ ಸಂಸ್ಥೆಯ ಲಾಭಗಳನ್ನು ಸ್ವೀಕರಿಸುವದಕ್ಕಾಗಿ ಹಿತಸಂಬಂಧವಿರುವುದೋ ಆ ಆಸ್ತಿಗೆ ಉಪಕಲಮು (೧) ರಲ್ಲಿಯ ಕಕ್ಷೆಗಳು ಅನ್ವಯಿಸುವುದಿಲ್ಲ.

**ವಿವರಣೆ:**

**ಒಂದು ಸ್ಥಾನದ** ಧಾರಕನು ಈ ಉಪಕಲಮಿನ ಅರ್ಥದಲ್ಲಿ ಬರುವಂತೆ ಅಧಿಕಾರಪದದ ಧಾರಕನೂ ಇಲ್ಲವೆ ಏಕಸದಸ್ಯ ಸಂಸ್ಥೆಯ ಅಧಿಕಾರಪದ ಧಾರಕನೂ ಆಗಿರುವುದಿಲ್ಲವೆಂಬುದನ್ನು, ಸಂಶಯ ನಿವಾರಣೆಗಾಗಿ, ಈ ಮೂಲಕ ಸ್ಪಷ್ಟವಾಗಿ ಸಾರಲಾಗಿದೆ.

**ವಿವೇಚನೆ:**

ಮರಣದ ಮೂಲಕ ಪ್ರತ್ಯಕ್ಷವಾಗಿ ಇಳಿದು ಬರುವ ಆಸ್ತಿಯ ಬಗ್ಗೆ ೫ ನೆಯ ಕಲಮಿನಲ್ಲಿ ಹೇಳಿದೆ. ಮೃತನ ವಿನ್ಯಾಸ ಸಾಮರ್ಥ್ಯವನ್ನು ಅವಲಂಬಿಸಿದ ಆಸ್ತಿಯ ಬಗ್ಗೆ ೬ ನೆಯ ಕಲಮು ವಿಶದಮಾಡಿದೆ. ಈ ಕಲಮಿನಲ್ಲಿ ಮರಣದ ಮೂಲಕ ಹಿತಸಂಬಂಧ ಮುಕ್ತಾಯವಾಗುತ್ತಿದ್ದ ಆಸ್ತಿಯಿಂದ ಪಾರಿಣಾಮಿಕವಾಗಿ ಬರುವ ಲಾಭಗಳ ಬಗ್ಗೆ ಹೇಳಲಾಗಿದೆ. ಯಾವ ಮಟ್ಟಿಗೆ ಲಾಭಗಳು ಆಸ್ತಿಯಲ್ಲಿ ಉಂಟಾಗುವುವು ಅಷ್ಟು ಮಟ್ಟಿಗೆ ಆಸ್ತಿಯು ಮರಣದ ಮೂಲಕ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು. ಕಲಮು ೫ ಮತ್ತು ೭ ಒಂದನ್ನೊಂದು ವ್ಯಾಪಿಸುವುವೆಂದು ಕಂಡು

ಬರುವಂತಿದೆ. ಆ ಸಂದರ್ಭ ಬಂದಾಗ ೫ ನೆಯ ಕಲಮಿಗೆ ಪ್ರಾಮುಖ್ಯತೆ ಉಂಟಾಗುವುದು. ೫ ನೆಯ ಕಲಮಿನ ಪ್ರಕಾರ ಆಸ್ತಿಯ ಉಪಭೋಗದ ಇಡಿ ಅಧಿಕಾರವು ಮರಣದ ಮೂಲಕ ಇಳಿದು ಬರುವುದು. ೭ ನೆಯ ಕಲಮಿನ ಪ್ರಕಾರ ಆಸ್ತಿಯಲ್ಲಿಯ ಮಿತ ಭೋಗಾಧಿಕಾರವು ಇಳಿದು ಬರುವದು. ವಾರ್ಷಿಕ ವೇತನ, ಪೋಟಿಗಿ, ಜೀವಮಾನದ ವರೆಗೆ ಗೇಣಿ ಮುಂತಾದುವು ಈ ಕಲಮಿನಲ್ಲಿ ಬರುವುವು. ಈ ಕಲಮು ಎರಡು ವಿಷಯಗಳನ್ನುತೋರುವುದು: ಒಂದು, ಮರಣದ ಮೂಲಕ ಹಿತಸಂಬಂಧ ಮುಕ್ತಾಯವಾಗುವುದು; ಮತ್ತು ಇನ್ನೊಂದು, ಅದರ ಮೂಲಕ ಪಾರಿಣಾಮಿಕ ಲಾಭವಾಗುವದು. ಹಿತಸಂಬಂಧ ಮುಕ್ತಾಯವಾಗುವುದರ ಮೂಲಕ ಕಂಡುಬರುವ ಆಸ್ತಿಯ ಭಾಗದ ಮೇಲೆ ವಾರಸಾಕರ ಹಾಕಲ್ಪಡುವುದು. ಆಸ್ತಿಯ ಹಕ್ಕುದಾರರಿಗೆ ಪ್ರತ್ಯಕ್ಷ ಲಾಭವಾಗಿರಲೇ ಬೇಕೆಂದು ಅಲ್ಲ. ಈ ಕಲಮು ಹತ್ತಬೇಕಾದರೆ ಈ ನಾಲ್ಕು ಸಂದರ್ಭಗಳು ಒದಗಿಬರಬೇಕಾಗುವದು: (೧) ಮುಕ್ತಾಯವಾಗುವ ಹಿತಸಂಬಂಧವು ಆಸ್ತಿಯಲ್ಲಿಯ ಹಿತಸಂಬಂಧವಾಗಿರಬೇಕು. (೨) ಮೃತನ ಮರಣದ ಮೂಲಕ ಹಿತಸಂಬಂಧವು ಮುಕ್ತಾಯವಾಗಿರಬೇಕು. (೩) ಹಿತಸಂಬಂಧದ ಮುಕ್ತಾಯದ ಮೂಲಕ ಲಾಭವುಂಟಾಗಿರಬೇಕು. (೪) ಆ ಲಾಭವು ೪ ನೆಯ ಕಲಮಿನ ಪ್ರಕಾರ ಅಳಿಯಲು ಬರವಂತಹದು ಆಗಿರಬೇಕು.

ಆಸ್ತಿಯಲ್ಲಿಯ ಹಿತಸಂಬಂಧ, ಅಂದರೆ ಆ ಆಸ್ತಿಯಮೇಲೆ ಅಧಿಕಾರಭಾರವಿರಬೇಕು. ವಾರ್ಷಿಕವೇತನ, ಪೋಟಿಗಿ ಮುಂತಾದವುಗಳ ಬಗ್ಗೆ ಇದ್ದ ಹಕ್ಕು ಯಾವುದೊಂದು ಆಸ್ತಿಯ ವಿಷಯವಾಗಿ ಜಾರಿಮಾಡಲ್ಪಡುವಂತಹದಾಗಿರಬೇಕು. ನೈತಿಕ ಹೊಣೆಗಾರಿಕೆಯು ಈ ಕಲಮಿನ ವಿಷಯಬಾಹಿರವಾಗುವುದು. ಉದಾಹರಣೆ: ತಂದೆ ಸಾಯುವಾಗ ಮಗನಿಗೆ ಹೇಳುತ್ತಾನೆ, ತನ್ನ ಹೆಂಡತಿಗೆ ಪೋಟಿಗಿ ಕೊಡಬೇಕು, ಎಂದು. ಆ ಪೋಟಿಗಿಯನ್ನು ಇಂತಹ ಆಸ್ತಿಯಲ್ಲಿಂದ ಕೊಡಬೇಕು ಎಂದು ಹೇಳಿರದಿದ್ದರೆ. ಅದು ಕೇವಲ ನೈತಿಕ ಹೊಣೆಯಾಗುವುದು. ಆಸ್ತಿಗೆ ಭಾರಮಾಡಿರದಂತಹ ನೈತಿಕ ಹೊಣೆಗಾರಿಕೆಯು ಈ ಕಲಮಿನ ಕ್ಷೇತ್ರದಲ್ಲಿ ಬರುವುದಿಲ್ಲ.

ಅದರಂತೆ ಆಸ್ತಿಯಲ್ಲಿಯ ಹಿತಸಂಬಂಧವು ಮರಣದ ಮೂಲಕ ಮುಕ್ತಾಯವಾಗಲೇಬೇಕು. ಉದಾಹರಣೆ: **ಅ** ನು **ಬ** ನಿಗೆ ಆಸ್ತಿಯನ್ನು ಒಂದು ವ್ಯವಸ್ಥೆಮಾಡಿ ಕೊಡುತ್ತಾನೆ. ಆ ವ್ಯವಸ್ಥೆಯ ಪ್ರಕಾರ ಆ ಆಸ್ತಿಯೊಳಗಿಂದ **ಕ** ನಿಗೆ **ಕ** ನ ಜೀವಮಾನವಿರುವ ವರೆಗೆ ವಾರ್ಷಿಕ ವೇತನ ಕೊಡಬೇಕೆಂದು ಕರಾರು ಹಾಕುತ್ತಾನೆ. ಈ ವಾರ್ಷಿಕ ವೇತನವನ್ನು **ಕ** ನು **ಡ** ನಿಗೆ ಹಣ ಪಡೆದು ಹಸ್ತಾಂತರಿಸುತ್ತಾನೆ. **ಕ** ನ ಮರಣದಿಂದ ಆ ಆಸ್ತಿಯಲ್ಲಿಯ **ಡ** ನ ಹಿತಸಂಬಂಧವು ಮುಕ್ತಾಯವಾಗುವುದು. ಮತ್ತು ಆ ಹಿತಸಂಬಂಧವು ಈ ಕಲಮಿನ ಪ್ರಕಾರ ಕರಪಾತ್ರವಾಗುವುದು.

ಹಿತಸಂಬಂಧದ ಮುಕ್ತತೆಯಿಂದ ಲಾಭವಾಗಬೇಕೆಂಬ ಮಾತು ಮೂರನೆಯದು. ಹಿತಸಂಬಂಧವು ಆಸ್ತಿಯಲ್ಲಿ ಇರುವುದರಿಂದ ಮತ್ತು ಮರಣದ ಮೂಲಕ ಹಿತಸಂಬಂಧವು ಮುಕ್ತಾಯವಾಗುವುದರಿಂದ ಲಾಭವು ಪರಿಣಮಿಸುವುದು. ಈ ಲಾಭಾಂಶವೇ ಕರಪಾತ್ರವಾಗುವ ಆಸ್ತಿಯ ಗಾತ್ರವನ್ನು ನಿರ್ಣಯಿಸುವ ತಳಹದಿಯಾಗುವುದು. ಇದರ ದಾಟಿ ಆಸ್ತಿಯ ಒಡೆಯನಿಗೆ ಪಾರಿಣಾಮಿಕವಾಗಿ ಎಷ್ಟು ಲಾಭವಾಯಿತು ಎಂಬುದು ಅಷ್ಟು ಮಹತ್ವದ್ದಲ್ಲ.

ಲಾಭಾಂಶವನ್ನು ಅಳೆಯಲು ೪ನೆಯ ಕಲಮು ಮಾರ್ಗದರ್ಶಕವಾಗುವದು. ಅಲ್ಲಿ ಈ ಮಾತುಗಳನ್ನು ಹೇಳಲಾಗಿದೆ: ಹಿತಸಂಬಂಧವು ಆಸ್ತಿಯ ಇಡೀ ಉತ್ಪನ್ನಕ್ಕೆ ವ್ಯಾಪಿಸಿದ್ದರೆ, ಆ ಆಸ್ತಿಯ ಮುಖ್ಯಬೆಲೆಯು ಕರಪಾತ್ರವಾಗುವುದು. ಆಸ್ತಿಯ ಇಡೀ ಉತ್ಪನ್ನದಕಿಂತಲೂ ಕಡಿಮೆ ಭಾಗಕ್ಕೆ ಹಿತಸಂಬಂಧವು ವ್ಯಾಪಿಸಿದ್ದರೆ, ಎಷ್ಟು ಮಟ್ಟಿಗೆ ಹಿತಸಂಬಂಧವು ವ್ಯಾಪಿಸಿರುವುದೋ ಅಷ್ಟುಮಟ್ಟಿಗೆ ಆ ಆಸ್ತಿಗೆ ಸೇರುಪಡೆಯಾದ ಮುಖ್ಯಬೆಲೆಯು ಕರಪಾತ್ರವಾಗುವುದು. ಕರಪಾತ್ರವಾಗುವ ಹಿತಸಂಬಂಧವನ್ನು ಅಳೆಯಲು ಈ ಕೆಳಗಿನ ಸೂತ್ರಕ್ರಮವು ಅನ್ವಯಿಸುವುದು.

$$\frac{\text{ಮುಕ್ತಾಯವಾಗುವ ಹಿತಸಂಬಂಧ}}{\text{ಆಸ್ತಿಯ ಉತ್ಪನ್ನ}} \times \text{ಆಸ್ತಿಯ ಮುಖ್ಯಬೆಲೆ.}$$

ಈ ಸೂತ್ರಕ್ರಮವು ಅನ್ವಯಿಸಬೇಕಾದರೆ ಹಿತಸಂಬಂಧದ ಮುಕ್ತಾಯದ ಮೂಲಕ ಉಂಟಾಗುವ ಲಾಭಾಂಶವು ಅಳೆಯಲು ಬರುವಂತೆ ಇರಲಿಕ್ಕೇಬೇಕು. ಉದಾಹರಣೆ: ಅನು ಬನಿಗೆ ವಾರ್ಷಿಕವೇತನವೆಂದು ೫೦೦/- ರೂಪಾಯಿಗಳನ್ನು ತನ್ನ ಮೃತ್ಯುಪತ್ರದ ಮೂಲಕ ಕೊಡುತ್ತಾನೆ. ಈ ವಾರ್ಷಿಕವೇತನದ ಭಾರವನ್ನು ವಾರ್ಷಿಕವಾಗಿ ೧೨೦೦/- ರೂ.ಗಳ ಉತ್ಪನ್ನಬರುವ ಒಂದು ಬಂಗಲೆಯ ಮೇಲೆ ಹಾಕಿರುವನು. ಬನ ಮರಣದ ಮೂಲಕ ಆಸ್ತಿಯಲ್ಲಿಯ ಹಿತಸಂಬಂಧವು ಮುಕ್ತಾಯವಾಗುವುದು. ಹೀಗೆ ಮುಕ್ತಾಯವಾಗುವ ಹಿತಸಂಬಂಧದಿಂದ ಉಂಟಾಗುವ ಲಾಭಾಂಶದ ಮೇಲೆ ಪಾರಸಾಕರವು ಹಾಕಲ್ಪಡುವುದು. ಬಂಗಲೆಯ ಕಿಮ್ಮತ್ತು ೨೪೦೦೦/- ರೂ. ಆಗುತ್ತಿದ್ದರೆ ಬನ ಮರಣದ ಕಾಲಕ್ಕೆ ಲಾಭಾಂಶದ ಬೆಲೆಯು ಸೂತ್ರಕ್ರಮವನ್ನು ಹಚ್ಚಿದರೆ ೧೦೦೦೦/- ರೂಪಾಯಿ ಆಗುವದು. ಅದು ಹೀಗೆ: $\frac{೫೦೦}{೧೨೦೦} \times ೨೪೦೦೦ = ೧೦೦೦೦/-$

ಹೀಗೂ ಒಂದು ಪ್ರಸಂಗ ಉಂಟಾಗಬಹುದು. ವಾರ್ಷಿಕವೇತನಗಳು ಅನೇಕ ಇರಬಹುದು. ಅಷ್ಟು ವಾರ್ಷಿಕವೇತನಗಳನ್ನು ಸಂಪೂರ್ಣವಾಗಿ ಕೊಡಲಿಕ್ಕೆ ಉತ್ಪನ್ನವು ಕಡಿಮೆಯಾಗಬಹುದು. ಬಾಕಿ ಉಳಿದುದನ್ನು ಮೂಲ ಭಂಡವಾಳದಿಂದ ಕೊಡಬೇಕಾಗಿರಬಹುದು. ಆಗ ಹಿತಸಂಬಂಧದ ಮುಕ್ತಾಯದಿಂದ ತಾತ್ಕಾಲಿಕವಾಗಿ ಯಾವುದೇ ಲಾಭ ಉಂಟಾಗಿರಲಿಕ್ಕಿಲ್ಲ. ಮೂಲಧನದ ಮೇಲಿನ ಭಾರ ಕಡಿಮೆಯಾಗಿ ಶೇಷಭೋಗಾಧಿಕಾರಿಗೆ ಸಮಯಾನಂತರ ಲಾಭವು ಆಗುವುದು. ಇಂತಹ ಪರಿಸ್ಥಿತಿ

ಇರುವಾಗ ಮುಕ್ತಾಯವಾಗುವ ವಾರ್ಷಿಕ ವೇತನದ ಹಣವು ಒಟ್ಟು ವಾರ್ಷಿಕ ವೇತನಗಳ ಮೊತ್ತದ ಪ್ರಮಾಣದಲ್ಲಿ ಎಷ್ಟು ಆಗಿರುವುದೋ ಅಷ್ಟರ ಮೇಲೆ ವಾರಸಾ ಕರವು ಬೀಳುವುದು.

ಅ, ಬ, ಕ, ಡ ಎಂಬ ನಾಲ್ವರಿಗೆ ಕೂಡಿ ಅವರ ಜೀವಮಾನದ ವರೆಗೆ ವಾರ್ಷಿಕ ವೇತನವೊಂದು ನಿರ್ಧರಿಸಲ್ಪಟ್ಟರೆ ಇದೆಲ್ಲವೂ ಕೂಡಿ ಒಂದೇ ವೇತನವೆಂದೂ ಇವರಲ್ಲಿ ಒಬ್ಬೊಬ್ಬರು ಮರಣಹೊಂದಿ ಕೊನೆಗೆ ಉಳಿದವನು ಮರಣಹೊಂದಿದಾಗ ಮಾತ್ರ ಹಿತಸಂಬಂಧದ ಮುಕ್ತಾಯವಾಗುವುದು, ಎಂದು ತಿಳಿಯಬೇಕು.

ಈ ಕಲಮಿನಲ್ಲಿ ಇನ್ನೊಂದು ವಿಷಯ ಪ್ರತಿಪಾದಿಸಲ್ಪಟ್ಟಿದೆ. ಅದು ದಾಯ ಸಂಸ್ಥೆಯಲ್ಲಿ ದಾಯಾದನ ಹಿತಸಂಬಂಧದ ಮುಕ್ತಾಯವಾಗುವಿಕೆ. ಆ ದಾಯಾದನು ಮಿತಾಕ್ಷರ, ಮರುಮಕ್ಕತ್ತಾಯಂ ಮತ್ತು ಅಳಿಯ ಸಂತಾನದ ಪದ್ಧತಿಗಳಿಂದ ಶಾಸಿತ ವಾದ ಹಿಂದು ಕುಟುಂಬಕ್ಕೆ ಹೊಂದಿಕೊಂಡವನು ಇರಬೇಕು. ಇಂತಹನ ಆಸ್ತಿಯ ಬಗ್ಗೆ ವಿಶಿಷ್ಟವಾಗಿ ಈ ಕಲಮು ಅನ್ವಯಿಸುವುದು.

ಉಪಕಲಮು (೨) ರಲ್ಲಿ ಮಿತಾಕ್ಷರ ಪ್ರಣಾಲಿಯ ಹಿಂದು ಕುಟುಂಬದಲ್ಲಿಯ ದಾಯಾದನು ಮೃತನಾದರೆ ಉಂಟಾಗುವ ಪರಿಣಾಮವನ್ನು ಹೇಳಿದೆ. ಈ ದಾಯಾ ದನು ಹದಿನೆಂಟು ವರುಷ ತುಂಬಿದ ವಯಸ್ಸಿನವನಾಗಿ ಮರಣಹೊಂದಿದರೆ, ಇಲ್ಲವೆ ಹದಿನೆಂಟು ವರುಷದ ವಯಸ್ಸು ಪೂರ್ಣವಾಗದೆ ಇದ್ದಾಗ ಮರಣ ಹೊಂದಿದರೆ ಗಂಡು ಸಂತಾನದಲ್ಲಿ ಪಿತೃಗಣದಲ್ಲಿ ದಾಯಾದನಾಗಿ ಅಪ್ಪ, ಅಜ್ಜ, ಮುತ್ತಜ್ಜ ಇವರು ಆ ಅಲ್ಪವಯಿ ದಾಯಾದನ ಮರಣಕಾಲಕ್ಕೆ ಜೀವಂತವಾಗಿರದಿದ್ದರೆ ದಾಯ ಸಂಸ್ಥೆಯಲ್ಲಿಯ ಆಸ್ತಿಯ ಮೃತನ ಹಿತಸಂಬಂಧವು ಅವನ ಮರಣದ ಮೂಲಕ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು. ಮೃತನು ದಾಯ ಸಂಸ್ಥೆಯಲ್ಲಿಯ ಉಪದಾಯಸಂಸ್ಥೆಯ ಸದಸ್ಯನಾಗಿದ್ದು ಅದಕ್ಕೆ ಪ್ರತ್ಯೇಕವಾಗಿ ಸ್ವಂತ ಆಸ್ತಿಯಿದ್ದರೆ ಈ ಕಲಮು ಆ ಉಪದಾಯಸಂಸ್ಥೆಗೂ ಅನ್ವಯಿಸುವುದೆಂದು ವಿವರಣೆಯಲ್ಲಿ ಹೇಳಲಾಗಿದೆ.

ಮರುಮುಕ್ಕತ್ತಾಯಂ ಮತ್ತುಅಳಿಯ ಸಂತಾನ ಪದ್ಧತಿಗಳಿರುವ ಕುಟುಂಬ ದಲ್ಲಿಯ ಮೃತನ ಆಸ್ತಿಯು ಕರಪಾತ್ರವಾಗಬೇಕಾದರೆ ಮೃತನು ಹದಿನೆಂಟು ವರುಷದ ವಯಸ್ಸು ಪೂರ್ಣ ಆದವನು ಇರಬೇಕೆಂದು ಹೇಳಿದೆ. ಮೃತನಿಗೆ ಹದಿನೆಂಟು ವರುಷದ ವಯಸ್ಸು ಪೂರ್ಣ ಆಗಿರದಿದ್ದರೆ, ಈ ಕಲಮು ಅನ್ವಯಿಸುವುದಿಲ್ಲ. ಒಟ್ಟು ಕುಟುಂಬದ ಆಸ್ತಿಯಿದ್ದರೆ ಮೃತನು ಮರಣ ಹೊಂದುವುದಕ್ಕಿಂತ ಮೊದಲು ಪಾಲು ಆಗಿದ್ದರೆ ಅವನ ಪಾಲಿಗೆ ಎಷ್ಟು ಬರುತ್ತಿತ್ತೋ ಅಷ್ಟು ಆಸ್ತಿಯ ಬೆಲೆಯು ಅವನ ಮರಣದ ಮೂಲಕ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು.

ಉಪಕಲಮು (೪) ವಿಶೇಷವಾಗಿ ಲಕ್ಷಿಸುವಂತಹದು ಇದೆ. ಮೃತನು ಇಲ್ಲವೆ ಬೇರೆ ವ ಕ್ತಿಯು ಯಾವುದೊಂದು ಅಧಿಕಾರ ಪದ ಧಾರಕನಾಗಿ, ಯಾವುದೊಂದು ಆಸ್ತಿಯಲ್ಲಿ ಹಿತಸಂಬಂಧ ಪಡೆದಿದ್ದರೆ ಇಲ್ಲವೆ ಅವನು ಧರ್ಮಾರ್ಥವಾಗಿರುವ ಲಾಭದ ಅನುಗ್ರಹಿಯಾಗಿದ್ದರೆ, ಇಲ್ಲವೆ ಏಕ ಸದಸ್ಯ ಸಂಸ್ಥೆಯಾಗಿದ್ದರೆ, ಇಂತಹ ಹಿತಸಂಬಂಧದ ಮುಕ್ತಾಯದ ಮೂಲಕ ಬಿಡುಗಡೆಯಾಗುವ ಆಸ್ತಿಯು ಆ ಧಾರಕನ ಮರಣದ ಮೂಲಕ ಇಳಿದು ಬರುವುದೆಂದು ಗಣಿಸಲ್ಪಡಲಾಗದು. ಮತ್ತು ಉಪಕಲಮು (೧) ಅದಕ್ಕೆ ಅನ್ವಯಿಸುವುದಿಲ್ಲ.

ಯಾವುದೊಂದು **ಸ್ಥಾನ** ಧಾರಕನು ಅಧಿಕಾರ ಧಾರಿಯೂ ಅಲ್ಲ; ಏಕ ಸದಸ್ಯ ಸಂಸ್ಥೆಯೂ ಅಲ್ಲ, ಎಂದು ಸ್ಪಷ್ಟಪಡಿಸಿ ವಿವರಣೆಯು ಉಪಕಲಮು (೪) ರಲ್ಲಿ ಹೇಳಿದ ಮಾತುಗಳ ಬಗ್ಗೆ ಉಂಟಾಗಬಹುದಾದ ಸಂಶಯವನ್ನು ನಿವಾರಿಸಿದೆ.

**೮. ಮರಣೋನ್ಮುಖ ದಾನದತ್ತಿಗಳು.**

ಮರಣ ಸಂಭವಿಸುವುದೆಂಬ ನಿರೀಕ್ಷೆಯಿಂದ ಮಾಡಿದ ದಾನದ ಮೂಲಕವಾಗಿ ತೆಗೆದುಕೊಳ್ಳಲಾದ ಆಸ್ತಿಯು ದಾನಿಯ ಮರಣ ಸಂಭವಿಸಿದ ಕೂಡಲೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು.

**ವಿವರಣೆ:** " ಮರಣ ಸಂಭವಿಸುವುದೆಂಬ ನಿರೀಕ್ಷೆಯಿಂದ " ಎಂದು ಇರುವ ಈ ಕಲಮಿನಲ್ಲಿಯ ಪದಪ್ರಯೋಗಕ್ಕೆ ೧೯೨೫ ನೆಯ ಇಂಡಿಯನ್ ಸಕ್ಸೆಶನ್ ಆ್ಯಕ್ಟ (೧೯೨೫ ರ XXXIX) ದ ೧೯೧ ಕಲಮಿನಲ್ಲಿಯಂತೆ ಅರ್ಥವಾಗುವುದು.

**ವಿವೇಚನೆ:**

ಈ ಕಲಮಿನಲ್ಲಿಯ " ಮರಣ ಸಂಭವಿಸುವ ನಿರೀಕ್ಷೆಯಿಂದ " ಎಂಬ ಪದ ಪ್ರಯೋಗದ ಅರ್ಥಕ್ಕಾಗಿ ಇಂಡಿಯನ್ ಸಕ್ಸೆಶನ್ ಕಾಯಿದೆಯ ೧೯೧ ನೆಯ ಕಲಮನ್ನು ನೋಡಬೇಕಾಗುವುದು. ಆ ಕಲಮು ಹೀಗಿದೆ: (೧) ಯಾವ ಆಸ್ತಿಯನ್ನು ಮೃತ್ಯುಲೇಖದ ಮೂಲಕ ವಿನ್ಯಾಸಮಾಡಲು ಶಕ್ತವಾಗಿರುವನೋ ಅಂತಹ ಜಂಗಮ ಆಸ್ತಿಯನ್ನು ಮರಣ ಸಂಭವಿಸುವುದೆಂಬ ನಿರೀಕ್ಷೆಯಿಂದ ಯಾವನೊಬ್ಬ ವ್ಯಕ್ತಿಯು ವಿನ್ಯಾಸಮಾಡಬಹುದು. (೨) ಎಲ್ಲಿ ಒಬ್ಬ ವ್ಯಕ್ತಿಯು ಬೇನೆ ಬಿದ್ದಿದ್ದು ಮತ್ತು ಆ ಬೇನೆಯಿಂದ ಸ್ವಲ್ಪ ಸಮಯದಲ್ಲಿ ಮರಣ ಸಂಭವಿಸಬಹುದೆಂಬ ನಿರೀಕ್ಷೆಯಲ್ಲಿರುವನೋ ಅಲ್ಲಿ ಇನ್ನೊಬ್ಬನಿಗೆ ಯಾವುದೇ ಜಂಗಮ ಆಸ್ತಿಯನ್ನು ತನಗೆ ಆ ಬೇನೆಯಿಂದ ಮರಣ ಸಂಭವಿಸಿದರೆ ದಾನವಾಗಿ ಇಟ್ಟುಕೊಳ್ಳಲು ಅವನು ಕೊಡಮಾಡಿದರೆ ಆ ದಾನವು ಮರಣ ಸಂಭವಿಸುವುದೆಂಬ ನಿರೀಕ್ಷೆಯಿಂದ ಮಾಡಿದ ದಾನವೆಂದು

ಹೇಳಲ್ಪಡಲಾಗುವುದು. (೩) ಇಂತಹ ದಾನವನ್ನು ದಾನಿಯು ಮರಳಿ ಸ್ವಾಧೀನಮಾಡಿ ಕೊಳ್ಳಬಹುದು; ಬೇನೆಯಿಂದ ಬಳಲುತ್ತಿದ್ದಾಗ ಮಾಡಿದ ದಾನವು ದಾನಿಯು ಆ ಬೇನೆ ಯಿಂದ ಗುಣಹೊಂದಿದರೆ ದಾನವು ಫಲಕಾರಿಯಾಗುವುದಿಲ್ಲ; ಅಲ್ಲದೆ ದಾನಗ್ರಾಹಿಯು ದಾನಿಯಕಿಂತ ಮೊದಲೇ ಮರಣಹೊಂದಿದರೆಯೂ ದಾನವು ಫಲಕಾರಿಯಾಗದು.

ಈ ಕಲಮಿನಲ್ಲಿ ವಿಶದಮಾಡಿದುದು "ಮರಣ ಸಂಭವಿಸುವುದೆಂಬ ನಿರೀಕ್ಷೆ ಯಿಂದ" ಎಂಬ ಪದಪ್ರಯೋಗದ ಅರ್ಥ. ಇದರ ಅರ್ಥಮಾಡಬೇಕಾದಾಗ ಇಂಡಿಯನ್ ಸಕ್ಸೆಶನ್ ಕಾಯಿದೆಯ ೧೯೧ನೆಯ ಕಲಮನ್ನು ಮಾರ್ಗದರ್ಶನಕ್ಕಾಗಿ ತೆಗೆದುಕೊಳ್ಳ ಬೇಕು, ಎಂದು ಹೇಳಿದೆ. ಆ ಕಾಯಿದೆಯ ೧೯೧ನೆಯ ಕಲಮಿನಲ್ಲಿ ಈ ಪದಪ್ರಯೋ ಗದ ಅರ್ಥ ಹೇಳಿದ್ದಲ್ಲದೆ ಅಲ್ಲಿ ವಿವರಿಸಲಾದ "ಆಸ್ತಿ"ಯು ಜಂಗಮ ಆಸ್ತಿ ಮಾತ್ರವಿದೆ. ಆದರೆ ವಾರಸಾಕರದ ೮ನೆಯ ಕಲಮಿನಲ್ಲಿ ಬಂದ ಆಸ್ತಿ ಶಬ್ದದ ಅರ್ಥವನ್ನು ವಾರಸಾಕರ ಕಾಯಿದೆಯ ೨ನೆಯ ಕಲಮಿನ ಉಪಕಲಮು (೧೫)ರಲ್ಲಿ ಹೇಳಿದ ವ್ಯಾಖ್ಯೆಯನುಸಾರವಾಗಿ ಮಾಡಬೇಕು. ಅಂದರೆ ಸ್ಥಾವರ ಜಂಗಮ ಎಲ್ಲ ಆಸ್ತಿಯು ಬರುವುದಲ್ಲದೆ ಹಿತಸಂಬಂಧ-ಹಕ್ಕು-ಅಧಿಕಾರಗಳು ಕೂಡ ಬರುವುವು. ಆದುದರಿಂದ "ಆಸ್ತಿ" ಶಬ್ದದ ಅರ್ಥಕ್ಕಾಗಿ ಇಂಡಿಯನ್ ಸಕ್ಸೆಶನ್ ಕಾಯಿದೆಯ ೧೯೧ನೆಯ ಕಲಮನ್ನು ನೋಡದೆ ಕೇವಲ "ಮರಣ ಸಂಭವಿಸುವುದೆಂಬ ನಿರೀಕ್ಷೆ ಯಿಂದ" ಎಂಬ ಪದ ಪ್ರಯೋಗದ ಅರ್ಥಕ್ಕಾಗಿ ನೋಡಬೇಕು ಎಂದು ತಿಳಿಯಬೇಕು. ಆ ಪದಪ್ರಯೋಗದ ಅರ್ಥಮಾಡಬೇಕಾದಾಗ ಇವಿಷ್ಟು ಲಕ್ಷಣಗಳನ್ನು ಗಮನಿಸಬೇಕು: (೧) ದಾನ ಮಾಡಿದ ಆಸ್ತಿಯಿರಬೇಕು. (೨) ದಾನ ಮಾಡಿದ ಆಸ್ತಿಯು ದಾನಿಯು ಮೃತ್ಯುಲೇಖದಿಂದ ವಿನ್ಯಾಸಮಾಡಲು ಯೋಗ್ಯವಾದಂತಹದು ಇರಬೇಕು. (೩) ದಾನವು ಬೇನೆ ಬಿದ್ದ ವ್ಯಕ್ತಿಯಿಂದ ಮಾಡಲ್ಪಟ್ಟಿರಬೇಕು. ಮತ್ತು ಆ ಬೇನೆಯಿಂದ ತಾನು ಸ್ವಲ್ಪ ಸಮಯದಲ್ಲಿ ಮರಣಹೊಂದುತ್ತೇನೆಂಬ ಹಾಗೆ ದಾನಿಯ ನಿರೀಕ್ಷೆಯಿರ ಬೇಕು. (೪) ಆ ದಾನವು ದಾನಿಯ ಮರಣ ಸಂಭವದ ನಂತರ ಫಲಕಾರಿಯಾಗ ಬೇಕೆಂಬ ಕರಾರುಳ್ಳದ್ದಾಗಿರಬೇಕು. ಅಂದರೆ ದಾನಿಯು ಬೇನೆಯಿಂದ ಗುಣಹೊಂದಿ ದರೆ ಇಲ್ಲವೆ ದಾನಗ್ರಾಹಿಯು ಮರಣದನಂತರ ದಾನಿಯು ಬದುಕಿದ್ದರೆ ದಾನವು ಫಲಕಾರಿಯಾಗಿರಬಾರದು.

ಇವಿಷ್ಟು ಲಕ್ಷಣಗಳು ಇದ್ದರೆ ಆ ದಾನವು ಮರಣಸಂಭವಿಸುವ ನಿರೀಕ್ಷೆಯಿಂದ ಮಾಡಿದುದೆಂದು ತಿಳಿಯಬೇಕು. ಇಂತಹ ದಾನದ ಆಸ್ತಿಯು ದಾನಿಯ ಮರಣದ ಸಮಯಕ್ಕೆ ಇಳಿದುಬರುವುದೆಂದು ಗಣಿಸಲ್ಪಡಬೇಕು, ಎಂದು ಈ ೮ನೆಯ ಕಲಮು ಹೇಳುತ್ತದೆ.

**೯ ಮರಣ ಪೂರ್ವದ ನಿಶ್ಚಿತಕಾಲಾವಧಿಯೊಳಗಿನ ದಾನಗಳು**

ಯಾವುದು ಸದ್ಭಾವನೆಯಿಂದ ಮಾಡಲ್ಪಟ್ಟದ್ದಾಗಿಲ್ಲವೊ ಅಂತಹ ಹಸ್ತಾಂತರ, ವಹಿಸಿಕೊಡುವಿಕೆ, ವಿಶ್ವಸ್ತನಿಧಿಯೆಂದು ಮಾಡುವುದು,

ಕ್ರಮಾಗತವಾಗಿ ವ್ಯಕ್ತಿಗಳಿಗೆ ನಿವೇಶನಮಾಡುವುದು, ಇಲ್ಲವೆ ಬೇರೆ ಯಾವುದೇ ಪದ್ಧತಿಯಿಂದಾಗಲಿ, ಜೀವಮಾನದಲ್ಲಿ ತಾತ್ಕಾಲಿಕವಾಗಿ ಕಾರ್ಯಕಾರಿಯಾಗ ಬೇಕೆಂಬ ಉದ್ದೇಶದಿಂದ ಮೃತನಿಂದ ಮರಣಪೂರ್ವದಲ್ಲಿ ಎರಡು ಇಲ್ಲವೆ ಹೆಚ್ಚು ವರುಷಗಳ ಮೊದಲು ಮಾಡಲ್ಪಟ್ಟ ವಿನ್ಯಾಸದ ಮೂಲಕ ತೆಗೆದು ಕೊಳ್ಳಲ್ಪಟ್ಟ ಆಸ್ತಿಯು ಮರಣ ಸಂಭವಿಸಿದ ಕೂಡಲೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು.

ಆದರೆ, ಸಾರ್ವಜನಿಕ ಧರ್ಮಾರ್ಥ ಉದ್ದೇಶಗಳಿಗಾಗಿ ಮಾಡಲಾದ ದಾನಗಳಿಗೆ ಆ ಕಾಲಾವಧಿಯು ಆರು ತಿಂಗಳು ಆಗಿರುವದು.

(೨) ಮದುವೆಯ ನಿಮಿತ್ತವಾಗಿ ಮಾಡಿದ ಇಲ್ಲವೆ, ಮೃತನ ಸಾಮಾನ್ಯ ವೆಚ್ಚದ ಭಾಗವಾಗಿ ಮಾಡಲಾದುದೆಂದು ನಿಯಂತ್ರಕನಿಗೆ ಸಮಾಧಾನವಾಗುವ ಹಾಗೆ ಸಿದ್ಧಮಾಡಲ್ಪಟ್ಟ, ಆದರೂ ಒಟ್ಟಿನಲ್ಲಿ ಐದುಸಾವಿರ ರೂಪಾಯಿಗಳಿಗೆ ಮೀರದಂತಹ ದಾನಗಳಿಗೆ ಉಪಕಲಮು (೧)ರ ಕಕ್ಷೆಗಳು ಅನ್ವಯಿಸುವುದಿಲ್ಲ.

**ವಿವೇಚನೆ:**

ಮೃತನು ತನ್ನ ಜೀವಮಾನದಲ್ಲಿ ಮಾಡಿದ ದಾನಗಳ ವಿಷಯವಾಗಿ ಈ ಕಲಮು ಹೇಳುತ್ತದೆ. ಮೃತನು ಮರಣಹೊಂದುವ ಮೊದಲು ಎರಡು ವರುಷಗಳಲ್ಲಿ ಮಾಡಿದ ದಾನವು ಅದು ಸದ್ಭಾವನೆಯಿಂದಲೇ ಮಾಡಿರಲಿ, ಅವನ ಮರಣ ಸಮಯಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು ಎಂದು ಹೇಳಿದೆ. ಸಾರ್ವಜನಿಕ ಧರ್ಮಾರ್ಥ ಉದ್ದೇಶಗಳಿಗಾಗಿ ದಾನಮಾಡಿದ್ದರೆ ಆ ದಾನವು ಮರಣಪೂರ್ವದ ಆರು ತಿಂಗಳ ಒಳಗೆ ಆಗಿದ್ದರೆ ಆ ಆಸ್ತಿಯೂ ಮರಣಸಮಯಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು. ಮರಣಪೂರ್ವದ ಎರಡು ವರುಷಗಳಕಿಂತಲೂ ಹಿಂದೆ ದಾನಮಾಡಿದ್ದರೆ ಅದು ಸದ್ಭಾವನೆಯಿಂದ ಮಾಡಿದ್ದಾಗಿರದಿದ್ದರೆ ಅದೂ ಮರಣ ಸಮಯಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು. ಈ ಕಲಮು ದಾನ ದತ್ತಿಗಳ ಬಗ್ಗೆ ವಿಶೇಷವಾಗಿ ಹೇಳುತ್ತಿದ್ದರೂ ಅದರ ಶಬ್ದಸಂಯೋಜನೆಯು ಮರಣ ಪೂರ್ವದ ಎರಡು ವರುಷದ ಕಾಲಾವಧಿಯ ಒಳಗಿನ ಎಲ್ಲ ಬಗೆಯ ವಿನ್ಯಾಸಗಳನ್ನೂ ಒಳಗೊಳ್ಳುವಂತೆ ಇದೆ. ಈ ವಿನ್ಯಾಸಗಳು ತಾತ್ಕಾಲಿಕವಾಗಿ ದಾನವೆಂದು ಕಾರ್ಯಾ ಚರಿಸಲ್ಪಡಬೇಕೆಂಬ ಉದ್ದೇಶ ತೋರಿಸುತ್ತಿರಬೇಕು, ಎಂದು ಹೇಳಲಾಗಿದೆ. ಆಸ್ತಿ ಯೆಂದು ಹೇಳಿದ ಶಬ್ದದಲ್ಲಿ ವ್ಯಾಖ್ಯೆಯಲ್ಲಿ ಹೇಳಲಾದ "ಆಸ್ತಿ" ಶಬ್ದದಲ್ಲಿ ಅಡಕವಾದು ದೆಲ್ಲವೂ ಬರುವುದೆಂಬುದನ್ನು ಗಮನಿಸಬೇಕು.

ಈ ಕಲಮಿನ ಉಪಕಲಮು (೨)ರಲ್ಲಿ ಅಪವಾದ ಹೇಳಿದೆ. ಯಾರೊಬ್ಬರ ಮದುವೆಯ ಸಲುವಾಗಿ ಇಲ್ಲವೆ ಮೃತನ ಸಾಮಾನ್ಯ ವೆಚ್ಚದ ಭಾಗವಾಗಿದೆಯೆಂದು

ನಿಯಂತ್ರಕನಿಗೆ ಸಮಾಧಾನವಾಗುವಂತೆ ವಾರಸದಾರರು ತೋರಿಸಿದರೆ, ಮತ್ತು ಅಂತಹ ದಾನಗಳು ಮೊತ್ತದಲ್ಲಿ ೫೦೦೦/– ರೂಪಾಯಿಗಳಿಗಿಂತ ಹೆಚ್ಚು ಆಗದಿದ್ದರೆ ಅವುಗಳಿಗೆ ಈ ಕಲಮು ಹತ್ತುವುದಿಲ್ಲ, ಎಂದು ಹೇಳಲಾಗಿದೆ. ಹುಟ್ಟುಹಬ್ಬದ ಕಾಣಿಕೆ ದೀಪಾವಳಿ, ಕ್ರಿಸ್‌ಮಸ್ ಮುಂತಾದ ಹಬ್ಬದ ಕಾಣಿಕೆಗಳು ಈ ಸದರಿನಲ್ಲಿ ಬರುವುವು.

ದಾನ ಮತ್ತು ಇತರ ವಿನ್ಯಾಸಗಳು ಎಂದು ಈ ಕಲಮಿನಲ್ಲಿ ಬರುವುದು. ದಾನಕೊಟ್ಟಾಗ ಪ್ರತಿಯಾಗಿ ಆ ಆಸ್ತಿಯ ಕಿಮ್ಮತ್ತನ್ನು ಅಪೇಕ್ಷಿಸುವುದಿಲ್ಲ. ಉಳಿದ ರೀತಿಯ ವಿನ್ಯಾಸವಿದ್ದಾಗ ಪ್ರತಿಬೆಲೆಯು ಇದ್ದೇ ಇರುವುದು. ದಾನದಲ್ಲಿ ಅನುಗ್ರಹ ಮಾಡಬೇಕೆಂಬ ಉದ್ದೇಶವಿರುವದು. ಅನುಗ್ರಹವಿಲ್ಲದ್ದು ದಾನವಲ್ಲವಾದ್ದರಿಂದ ಈ ಕಲಮು ಹತ್ತುವುದಿಲ್ಲ. ಆದರೆ ಮಾರಾಟವಾಗಿ ಮಾರುಬೆಲೆಯು ಯೋಗ್ಯಕಿಮ್ಮತ್ತಿಗಿಂತ ಕಡಿಮೆಯಿದೆಯೆಂಬುದು ಅನುಗ್ರಹವೆಂದು ಗಣಿಸಲ್ಪಡಲಾಗದು. ಅಂತಹ ಮಾರಾಟವು ಈ ಕಲಮಿನ ಕಕ್ಷೆಯಲ್ಲಿ ಬರುವುದು. ಯೋಗ್ಯಕಿಮ್ಮತ್ತು ಇಲ್ಲದ ಮಾರಾಟದ ಸಂದರ್ಭವು ಸಂಶಯಕ್ಕೆ ಆಸ್ಪದಮಾಡಿಕೊಡುವುದು. ಅದು ಮಾರಾಟವೂ ನಿಜವಾಗಿ ಅಲ್ಲ; ದಾನವೂ ನಿಜವಾಗಿ ಅಲ್ಲ. ಮತ್ತೇನೋ ಇರಬೇಕೆಂದು ಸಂಶಯ ಬರುವುದು ಹಾಗೆ ಸಂಶಯ ಬರುವಂತಹ ವ್ಯವಹಾರಗಳು ಈ ಕಲಮಿನಂಕಿತವಾಗಿರುವುವು.

ಕರಪಾತ್ರವಾಗುವ ದಾನಗಳಿಗೆ ಕಾಲಾವಧಿ ಮಿತಿ ಇರುವದರಿಂದ ದಾನಗಳು ಎಂದು ಪೂರ್ಣಮಾಡಲ್ಪಟ್ಟುವೆಂದು ತೋರುವ ದಿನಾಂಕವು ಬಹುಮುಖ್ಯವಾಗುವುದು. ಈ ಕಲಮಿನಲ್ಲಿ ಲಕ್ಷಿಸಲಾದ ಆಸ್ತಿಯ ವಿನ್ಯಾಸವು ತಾತ್ಕಾಲಿಕವಾಗಿರುವ ದಾನವಾಗಿರಬೇಕು. ಅವಲಂಬಕ ಇಲ್ಲವೆ ಅವಧಿಕವಾಗಿದ್ದುದು ಈ ಕಲಮಿನ ದೃಷ್ಟಿಯಿಂದ ದಾನಗಳು ಅಲ್ಲ. ಅವು ಅಪೂರ್ಣವಾಗಿರುವ ವಿನ್ಯಾಸಗಳು ಆಗುವುವು. ಗೊತ್ತುಮಾಡಿದ ಕಾಲಾವಧಿಯ ಮಿತಿಯೊಳಗೆ ದಾನಗಳು ಪೂರ್ತಿಯಾಗಿದ್ದರೂ ಆ ಆಸ್ತಿಯು ಮೃತನ ಮರಣ ಸಮಯಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದರಿಂದ ಆ ಆಸ್ತಿಯ ಬೆಲೆಯನ್ನು ಮರಣ ಸಮಯಕ್ಕೆ ಆಗುವ ಬೆಲೆಯೆಂದು ತಿಳಿಯಬೇಕು. ದಾನಕೊಟ್ಟ ಕಾಲದಲ್ಲಿಯ ಆಸ್ತಿಯ ಬೆಲೆಯೆಂದು ತಿಳಿಯಲಾಗದು.

ಆರು ತಿಂಗಳ ಕಾಲಾವಧಿಯು ಸಾರ್ವಜನಿಕ ಧರ್ಮಾರ್ಥ ಉದ್ದೇಶಗಳಿಗಾಗಿದ್ದ ದಾನಗಳಿಗೆ ಕಾಲಮಿತಿ. ಇಲ್ಲಿ ಸಾರ್ವಜನಿಕ ಎಂಬ ಪದವು ಬಹು ಮುಖ್ಯವಾದುದು. ಕೇವಲ ಧರ್ಮಾರ್ಥವಾಗಿದ್ದರೆ ಸಾಲದು. ಅದು ಸಾರ್ವಜನಿಕ ಹಿತವುಳ್ಳದ್ದೂ ಆಗಿರಬೇಕು. ಈ ಸಾರ್ವಜನಿಕ ಧರ್ಮಾರ್ಥ ಉದ್ದೇಶಗಳಿಗಾಗಿ ಕೊಟ್ಟ ದಾನಗಳಿಗೆ ಭಾರತದ ಪ್ರಾದೇಶಿಕ ಮಿತಿಯಿದೆ. ಪರದೇಶದಲ್ಲಿಯ ಸಾರ್ವಜನಿಕ ಧರ್ಮಾರ್ಥ ಉದ್ದೇಶಗಳಿಗಾಗಿ ಅಲ್ಲ, ಎಂಬುದು ಸ್ಪಷ್ಟವಾಗುವುದು.

ಎರಡು ವರುಷದ ಕಾಲಾವಧಿಯು ಸದ್ಭಾವನೆಯಿಂದ ಮಾಡಿದ ದಾನದತ್ತಿಗಳಿಗೆ ಅನ್ವಯಿಸುವುದು. ಸದ್ಭಾವನೆಯಿಂದ ದಾನ ಮಾಡಿಲ್ಲವೆಂದು ಕಂಡು ಬಂದರೆ ಆಗ ಎರಡು ವರುಷದ ಕಾಲ ಮಿತಿಯು ಹಿಗ್ಗುವುದು. ಅಂತಹ ದಾನವು ಯಾವುದೇ ಕಾಲಕ್ಕೆ ಮರಣಪೂರ್ವದಲ್ಲಿ ಮಾಡಿರಲಿ ಅದೂ ಮರಣಸಮಯಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು. ಆದ್ದರಿಂದ ದಾನದತ್ತಿಗಳು ಮಾಡಲ್ಪಟ್ಟ ಆಸ್ತಿಯ ವಿಷಯ ಬಂದಾಗ ದಾನ ಪೂರ್ಣಮಾಡಿದ ದಿನಾಂಕ, ಸದ್ಭಾವನೆಯುಳ್ಳದ್ದಿತ್ತೆಂಬ ಸಂಗತಿ, ಮತ್ತು ಅದರ ಉದ್ದೇಶವು ವ್ಯಕ್ತಿಗತವಾಗಿರುವುದೋ ಇಲ್ಲವೆ ಸಾರ್ವಜನಿಕ ಧರ್ಮಾರ್ಥ ಉದ್ದೇಶಗಳಿಗಾಗಿರುವುದೋ ಮತ್ತು ಆ ಉದ್ದೇಶವು ಕಾರ್ಯಕಾರಿಯಾಗುವ ಪ್ರದೇಶವು ಯಾವುದು ಈ ವಿಷಯಗಳು ನಿರ್ದಿಷ್ಟವಾಗಬೇಕಾಗುವುದು.

**೧೦ ದಾನಿಯನ್ನು ಸಂಪೂರ್ಣ ಪ್ರತ್ಯೇಕಿಸಲಾಗದೆ ಇದ್ದ ಯಾವುದೇ ಕಾಲಕ್ಕೆ ಮಾಡಿದ ದಾನಗಳು.**

ಯಾವುದೇ ಕಾಲಕ್ಕೆ ಕೊಡಲಾದ ಯಾವುದೇ ದಾನದನ್ವಯವಾಗಿ ತೆಗೆದುಕೊಂಡ ಆಸ್ತಿಯು ಯಾವುದೇ ಕರಾರುಪತ್ರ ಇಲ್ಲವೆ ಬೇರೆ ರೀತಿಯಿಂದ ದಾನಗ್ರಾಹಿಯಿಂದ ತಾತ್ಕಾಲಿಕವಾಗಿ ಎಷ್ಟು ಮಟ್ಟಿಗೆ ಸದ್ಭಾವನೆಯಿಂದ ವಶವನ್ನು ಮತ್ತು ಉಪಭೋಗವನ್ನು ವಹಿಸಿಕೊಳ್ಳಲಾಗಿರುವುದಿಲ್ಲವೋ ಮತ್ತು ಆನಂತರ ದಾನಿಯನ್ನು ಸಂಪೂರ್ಣ ಹೊರತುಪಡಿಸಿ ಇಲ್ಲವೆ ಅವನಿಗೆ ಯಾವ ಲಾಭವನ್ನೂ ಕೊಡದೆ ವಶಾಧಿಕಾರದಲ್ಲಿ ಇಟ್ಟುಕೊಳ್ಳಲಾಗುವುದೋ ಅಷ್ಟುಮಟ್ಟಿಗೆ ಆ ಆಸ್ತಿಯು ದಾನಿಯ ಮರಣ ಕಾಲಕ್ಕೆ ಇಳಿದುಬರುವುದೆಂದು ಗಣಿಸಲ್ಪಡಲಾಗುವುದು.

ಆದರೆ, ಕಾಯ್ದಿಟ್ಟ ಲಾಭದ ಹಕ್ಕು ಬಿಟ್ಟುಕೊಡುವುದರಿಂದ ಇಲ್ಲವೆ ಬೇರೆ ರೀತಿಯಿಂದ ಅದು ಆನಂತರ ದಾನಿಯನ್ನು ಸಂಪೂರ್ಣ ಹೊರತುಪಡಿಸಿ ಇಲ್ಲವೆ ಅವನಿಗೆ ಯಾವ ಲಾಭವನ್ನು ಕೊಡದೆ ಅವನ ಮರಣ ಪೂರ್ವದಲ್ಲಿ ಕನಿಷ್ಟ ಎರಡು ವರುಷಗಳಷ್ಟಾದರೂ ಉಪಭೋಗಿಸಲ್ಪಟ್ಟಿದ್ದರೆ ದಾನಮಾಡಿದ ದಿನಾಂಕದಿಂದ ಈ ಮೊದಲು ಹೇಳಿದ ಪ್ರಕಾರ ಪ್ರತ್ಯೇಕವಾಗಿ ಇಟ್ಟುಕೊಳ್ಳಟ್ಟಿಲ್ಲವೆಂಬ ಕಾರಣಕ್ಕಾಗಿ ಮಾತ್ರ ಆ ಆಸ್ತಿಯು ಮರಣಕಾಲಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದಿಲ್ಲ.

**ವಿವೇಚನೆ:**

ಕಾಯಿದೆಯ ಪ್ರಕಾರ ಗೊತ್ತುಮಾಡಿದ ಕಾಲಾವಧಿಯಲ್ಲಿ ಜೀವಮಾನದಲ್ಲಿ ತಾತ್ಕಾಲಿಕವಾದ ದಾನವೆಂದು ಮಾಡಿದ ವಿನ್ಯಾಸದನ್ವಯವಾಗಿ ತೆಗೆದುಕೊಳ್ಳಲ್ಪಟ್ಟ ಆಸ್ತಿಯು ೯ನೆಯ ಕಲಮಿನನ್ವಯವಾಗಿ ಕರಪಾತ್ರವಾಗುವುದು. ಈ ಕಲಮು

ದಾನಗಳ ಸಂಬಂಧವಾಗಿ ಇನ್ನೂ ಕೆಲಹೊಣೆಗಾರಿಕೆಗಳನ್ನೂ ನಿರ್ಮಿಸುವುದು. ಆ ಕ್ಲಿಪ್ತ ಕಾಲಾವಧಿಯನ್ನು ದಾಟಿ ದಾನವನ್ನು ಮಾಡಲಾಗಿದ್ದರೂ ಈ ಕಲಮಿನಲ್ಲಿ ಹೇಳಲಾದ ಕರಾರುಗಳು ಇದ್ದರೆ, ಆ ದಾನದ ಆಸ್ತಿಯು ಮರಣ ಕಾಲಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದೆಂದು ಈ ಕಲಮು ಹೇಳುವುದು. ೧೦ನೆಯ ಕಲಮು ಸ್ವತಂತ್ರ ವಾಗಿರುವ ಕಲಮು ಅಲ್ಲ. ಅದು ೯ನೆಯ ಕಲಮಿನ ವ್ಯಾಪ್ತಿಯನ್ನು ಹೆಚ್ಚಿಸುವಂತಹ ಕಲಮು ಆಗಿದೆ. ೧೦ನೆಯ ಕಲಮನ್ನು ಪೃಥಃಕ್ಕರಿಸಿದರೆ ಈ ಮಾತುಗಳು ಎದ್ದು ಕಾಣುವುವು: (೧) ದಾನಮಾಡಲ್ಪಟ್ಟ ಆಸ್ತಿಯನ್ನು ಸದ್ಭಾವನೆಯಿಂದ ಕಬಜಾ ಮತ್ತು ಉಪಭೋಗಗಳನ್ನು ದಾನಗ್ರಾಹಿಯು ತಾತ್ಕಾಲಿಕವಾಗಿ ವಹಿಸಿಕೊಂಡಿರ ದಿದ್ದರೆ, (೨) ಆನಂತರ ದಾನಿಯನ್ನು ಸಂಪೂರ್ಣ ಹೊರತು ಪಡಿಸಿ ಆ ಆಸ್ತಿಯನ್ನು ವಶಾಧಿಕಾರದಲ್ಲಿಟ್ಟುಕೊಂಡರೆ, ಇಲ್ಲವೆ (೩) ಕರಾರುಪತ್ರ ಇಲ್ಲವೆ ಬೇರೆ ರೀತಿಯಿಂದ ಯಾವುದೇ ಲಾಭದಿಂದ ದಾನಿಯನ್ನು ಹೊರತುಪಡಿಸಲ್ಪಡದಿದ್ದರೆ, ಆ ದಾನವು ಯಾವುದೇ ಕಾಲಕ್ಕೆ ಮಾಡಲ್ಪಟ್ಟಿರಲಿ ದಾನಿಯ ಮರಣದ ಕಾಲಕ್ಕೆ ಇಳಿದು ಬರುವು ದೆಂದು ಗಣಿಸಲ್ಪಡಲಾಗುವುದು, ಎಂದು ಈ ಕಲಮು ಹೇಳುತ್ತದೆ.

ಈ ಕಲಮಿಗೆ ಅಪವಾದಾತ್ಮಕ ಕಕ್ಷೆಯೊಂದು ಇದೆ. ಆಸ್ತಿಯೊಂದು ದಾನ ಮಾಡಲ್ಪಟ್ಟಿರುವುದು. ಆದರೆ ದಾನ ಗ್ರಾಹಿಯು ಅದನ್ನು ತಾತ್ಕಾಲಿಕವಾಗಿ ತನ್ನ ವಶಕ್ಕೆ, ಉಪಭೋಗಕ್ಕೆ ತೆಗೆದು ಕೊಂಡಿರುವುದಿಲ್ಲ. ನಂತರ ಆ ಆಸ್ತಿಯ ಕಬಜಾ ಮತ್ತು ಉಪಭೋಗವು ದಾನಗ್ರಾಹಿಗೆ ಬಿಟ್ಟುಕೊಡಲಾಗಿರುವುದು. ಹೀಗೆ ಬಿಟ್ಟುಕೊಟ್ಟ ನಂತರ, ದಾನಿಯ ಮರಣದಕಿಂತಲೂ ಮೊದಲು ಕನಿಷ್ಠ ಎರಡು ವರುಷಗಳ ವರೆಗಾ ದರೂ ದಾನಗ್ರಾಹಿಯು ದಾನಿಯನ್ನು ಸಂಪೂರ್ಣ ಹೊರತು ಪಡಿಸಿ ಇಲ್ಲವೆ ಅವನಿಗೆ ಯಾವುದೇ ಕರಾರುಪತ್ರ ಇಲ್ಲವೆ ಬೇರೆ ರೀತಿಯಿಂದ ಬೇರೆ ಯಾವುದೇ ಲಾಭವನ್ನು ಕೊಡದೆ.ವಶದಲ್ಲಿ ತೆಗೆದುಕೊಂಡು ಉಪಭೋಗಿಸಿದ್ದರೆ, ದಾನ ಕೊಟ್ಟ ದಿನಾಂಕಕ್ಕೆ ತಾತ್ಕಾಲಿಕವಾಗಿ ದಾನಗ್ರಾಹಿಯು ವಶದಲ್ಲಿ ತೆಗೆದುಕೊಂಡು ಉಪಭೋಗಿಸಲಿಲ್ಲ ವೆಂಬ ಕಾರಣಕ್ಕಾಗಿಯೇ ಆ ದಾನವು ಕರಯೋಗ್ಯವಾಗುವುದಿಲ್ಲ. ಆ ಆಸ್ತಿಯು ಮರಣ ಕಾಲಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದಿಲ್ಲ. ಕರ ಮುಕ್ತತೆಯನ್ನು ಪಡೆ ಯಲು ದಾನದ ಆಸ್ತಿಯ ಬಗ್ಗೆ ಈ ಕರಾರುಗಳು ಪೂರೈಸಲ್ಪಟ್ಟಿರಬೇಕು: (೧) ದಾನಿಯು ಮರಣ ಪೂರ್ವದಲ್ಲಿ ಕನಿಷ್ಠ ಎರಡು ವರುಷಗಳ ಮಟ್ಟಿಗಾದರೂ ದಾನಗ್ರಾಹಿಯು ದಾನವಾಗಿ ಬಂದ ಆಸ್ತಿಯ ಕಬಜಾ ಮತ್ತು ಉಪಭೋಗವನ್ನು ಪಡೆದು ತನ್ನ ವಶ ದಲ್ಲಿ ಇಟ್ಟುಕೊಂಡಿರಬೇಕು. (೨) ಆ ಕಾಲಾವಧಿಯಲ್ಲಿ ಆ ಆಸ್ತಿಯ ಕಬಜಾ ಮತ್ತು ಉಪಭೋಗಕ್ಕಾಗಿ ದಾನಿಯು ಸಂಪೂರ್ಣವಾಗಿ ಹೊರತು ಪಡಿಸಲ್ಪಟ್ಟಿರಬೇಕು. (೩) ಆ ಕಾಲಾವಧಿಯಲ್ಲಿ ಯಾವುದೇ ಕರಾರುಪತ್ರದಿಂದ ಇಲ್ಲವೆ ಬೇರೆ ರೀತಿಯಿಂದ ದಾನಿಯು ಆ ಆಸ್ತಿಯಲ್ಲಿಯ ಯಾವುದೇ ಲಾಭದಿಂದ ಹೊರತು ಪಡಿಸಲ್ಪಟ್ಟಿರಬೇಕು.

ಅಂದರೆ ದಾನಕೊಟ್ಟ ಆಸ್ತಿಯ ಮೇಲೆ ದಾನಿಯು ಯಾವುದೇ ತರಹದ ಅಧಿಕಾರ ಹಿತಸಂಬಂಧವು ಅವನ ಮರಣ ಪೂರ್ವದಲ್ಲಿ ಕನಿಷ್ಠ ಎರಡು ವರುಷದ ಮಟ್ಟಿಗಾದರೂ ಇರಬಾರದು. ಹಾಗಿದ್ದರೆ ಮಾತ್ರ, ಆ ದಾನದ ಆಸ್ತಿಯು ಕರಮುಕ್ತವಾಗುವುದು. ಏಕೆಂದರೆ ಆ ಆಸ್ತಿಯು ದಾನಿಯ ಮರಣದ ಕಾಲಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದಿಲ್ಲ. ಇಲ್ಲದಿದ್ದರೆ ಎಷ್ಟು ಮಟ್ಟಿಗೆ ಹಿತಸಂಬಂಧ ಅಧಿಕಾರವು ಇಟ್ಟುಕೊಳ್ಳಲ್ಪಟ್ಟಿರುವುದು. ಅಷ್ಟು ಆಸ್ತಿಯ ಮಟ್ಟಿಗೆ ಕರವು ಬೀಳುವುದು.

**೧೧ ಮರಣಪೂರ್ವದಲ್ಲಿ ನಿಶ್ಚಿತ ಕಾಲಾವಧಿಯೊಳಗೆ ವಿನ್ಯಾಸಮಾಡಲ್ಪಟ್ಟ ಮಿತ ಹಿತ ಸಂಬಂಧಗಳು.**

ಕಬಜಾದಲ್ಲಿ ಹಿತಸಂಬಂಧವು ಉಂಟಾದ ನಂತರ ಮತ್ತು ಉಪಕಲಮು (೨) ರಿಂದ ಅಪವಾದವೆಂದು ಗಣಿಸಲಾಗದೆ ಇದ್ದ ವಿನ್ಯಾಸ ಇಲ್ಲವೆ ಅಧಿಕಾರ ಮುಕ್ತಾಯವು, ಹಕ್ಕು ಬಿಡುವಿಕೆ, ಆಶ್ವಾಸನ, ಅಧಿಕಾರ ತಪ್ಪಿಸುವಿಕೆ, ಅಧಿಕಾರ ಕಳೆದುಕೊಳ್ಳುವಿಕೆ ಇಲ್ಲವೆ ಬೇರೆ ಯಾವುದೇ ರೀತಿಯಿಂದ (ಯಾವುದು ಕಾಲಾವಧಿ ಮುಕ್ತಾಯದ ಮೂಲಕ ಹಿತಸಂಬಂಧವು ಮುಕ್ತಾಯವಾಗುವುದೋ ಅಂತಹ ನಿಶ್ಚಿತ ಕಾಲಾವಧಿಯ ಮುಕ್ತಾಯದಿಂದಾಗುವುದನ್ನು ಹೊರತುಪಡಿಸಿ ), ಇಡಿಯಾಗಿ ಇಲ್ಲವೆ ಭಾಗವಾಗಿ ಮತ್ತು ಕ್ರಯಕ್ಕಾಗಿ ಇಲ್ಲವೆ ಕ್ರಯಕ್ಕಾಗಿ ಅಲ್ಲದೆ, ಈ ಕಲಮಿನ ಕಕ್ಷೆಗಳಂಕಿತವಾಗಿ, ಎಲ್ಲಿ ಮರಣದ ಮೂಲಕ ಹಿತಮುಕ್ತಾಯವಾಗಬೇಕಾಗಿದ್ದ ಹಿತಸಂಬಂಧವು ವಿನ್ಯಾಸ ಮಾಡಲ್ಪಟ್ಟಿರುವುದೋ ಇಲ್ಲವೆ ಮುಕ್ತಾಯ ಮಾಡಲ್ಪಟ್ಟಿರುವುದೋ ಆಗ,

(ಅ) ಮೇಲೆ ಹೇಳಿದ ಪ್ರಕಾರ ಆ ಹಿತಸಂಬಂಧದ ವಿನ್ಯಾಸ ಇಲ್ಲವೆ ಮುಕ್ತಾಯ ಆಗಿರದಿದ್ದರೆ, ಮತ್ತು ಆ ಹಿತಸಂಬಂಧದ ನಿರೀಕ್ಷೆಯಿಂದ ಇಲ್ಲವೆ ಆ ಹಿತಸಂಬಂಧದ ಅಂಕಿತವಾಗಿ ಯಾವುದೇ ವಿನ್ಯಾಸವಾಗಿರದಿದ್ದರೆ, ಯಾವ ಆಸ್ತಿಯಲ್ಲಿ ಹಿತಸಂಬಂಧವಿದ್ದಿತೊ ಆ ಆಸ್ತಿಯು ೫ನೆಯ ಕಲಮಿನ ಪ್ರಕಾರ ಮರಣಕಾಲಕ್ಕೆ ಇಳಿದುಬರುತ್ತಿದ್ದರೆ, ಈ ಕಲಮಿನ ಸತ್ವದ ಮೂಲಕ ಆ ಆಸ್ತಿಯು ಇಡಿಯಾಗಿ ಮರಣ ಕಾಲಕ್ಕೆ ಇಳಿದು ಬರುವ ಆಸ್ತಿಗೆ ಜೋಡಿಸಲ್ಪಟ್ಟಿದೆಯೆಂದು ಗಣಿಸಲ್ಪಡಲಾಗುವುದು; ಇಲ್ಲವೆ,

(ಬ) ಮೇಲೆ ಹೇಳಿದ ಪ್ರಕಾರ ಆ ಹಿತಸಂಬಂಧದ ವಿನ್ಯಾಸ ಇಲ್ಲವೆ ಮುಕ್ತಾಯ ಆಗಿರದಿದ್ದರೆ ಮತ್ತು ಆ ಹಿತಸಂಬಂಧದ ನಿರೀಕ್ಷೆಯಿಂದ ಇಲ್ಲವೆ ಆ ಹಿತಸಂಬಂಧದ ಅಂಕಿತವಾಗಿ ಯಾವುದೇ ವಿನ್ಯಾಸವಾಗಿರದಿದ್ದರೆ ೭ನೆಯ ಕಲಮಿನ ಸತ್ವದ ಪ್ರಕಾರ ಆ ಹಿತಸಂಬಂಧವಿದ್ದ ಆಸ್ತಿಯು ಮರಣ ಕಾಲಕ್ಕೆ ಇಳಿದು ಬರುವ ಆಸ್ತಿಗೆ ವಿಶಿಷ್ಟವ್ಯಾಪ್ತಿಯ ಮಟ್ಟಿಗೆ ಕೂಡಿಸಲ್ಪಟ್ಟಿದೆ

ಯೆಂದು ಗಣಿಸಲ್ಪಡಲಾಗುತ್ತಿದ್ದರೆ ಈ ೧೧ನೆಯ ಕಲಮಿನ ಸತ್ವದ ಮೂಲಕ ಆ ಹಿತಸಂಬಂಧವಿಪ್ಪ ಆಸ್ತಿಯು ಮರಣ ಕಾಲಕ್ಕೆ ಇಳಿದು ಬರುವ ಆಸ್ತಿಗೆ ಆ ವ್ಯಾಪ್ತಿಯ ಮಟ್ಟಿಗೆ ಕೂಡಿಸಲಾಗಿದೆಯೆಂದು ಗಣಿಸಲ್ಪಡ ಲಾಗುವುದು.

(೨) ಮರಣಸಂಭವದ ಮೂಲಕ ಮುಕ್ತಾಯ ಮಿತಿಯುಳ್ಳ ಹಿತಸಂ ಬಂಧದ ವಿನ್ಯಾಸ ಇಲ್ಲವೆ ಮುಕ್ತಾಯವು ಮರಣದ ಮೊದಲು ಎರಡು ವರ್ಷಕ್ಕೆ ಕಡಿಮೆಯಿಲ್ಲದಪ್ಟು ಕಾಲಾವಧಿಯಲ್ಲಿ ಸದ್ಭಾವನೆಯಿಂದ ಪರಿಣಾಮಕಾರಿ ಯಾದಾಗ ಇಲ್ಲವೆ ಬಾಧಿಸಲ್ಪಟ್ಟಾಗ (ಇಲ್ಲವೆ ಅದು ಸಾರ್ವಜನಿಕ ಧರ್ಮಾರ್ಥ ಉದ್ದೇಶಗಳಿಗಾಗಿ ಪರಿಣಾಮಕಾರಿಯಾಗಿದ್ದರೆ ಇಲ್ಲವೆ ಬಾಧಿಸಲ್ಪಟ್ಟಿದ್ದರೆ ಮರಣದ ಮೊದಲು ೬ ತಿಂಗಳಿಗೆ ಕಡಿಮೆಯಾಗದಪ್ಟು ಕಾಲಾವಧಿಯಲ್ಲಿ ಆಗಿದ್ದಾಗ) ಆ ವಿನ್ಯಾಸವು ಇಲ್ಲವೆ ಮುಕ್ತಾಯವು,

(ಅ) ವಿನ್ಯಾಸದ ಇಲ್ಲವೆ ಮುಕ್ತಾಯದ ಮೂಲಕ ಇಲ್ಲವೆ ಅದರ ಸತ್ವದಿಂದ ಆ ಹಿತಸಂಬಂಧವಿದ್ದ ಆಸ್ತಿಗೆ ವಿನ್ಯಾಸಾನಂತರ ಇಲ್ಲವೆ ಮುಕ್ತಾಯಾನಂತರ ಕೂಡಲೆ ಆ ವ್ಯಕ್ತಿಯಿಂದ ಸದ್ಭಾವನೆಯಿಂದ ಕಬಜಾ ಮತ್ತು ಉಪಭೋಗದ ಅಧಿಕಾರವು ವಹಿಸಿಕೊಳ್ಳಲ್ಪಟ್ಟಿದ್ದರೆ ಮತ್ತು ವಿನ್ಯಾಸ ಇಲ್ಲವೆ ಮುಕ್ತಾಯವಾಗುವುದಕ್ಕೆ ಹೊಂದಿಕೊಂಡು ಮುಂಚಿತ ವಾಗಿ ಹಿತಸಂಬಂಧವಿದ್ದ ಮತ್ತು ಕರಾರುಪತ್ರದಿಂದ ಇಲ್ಲವೆ ಬೇರೆ ರೀತಿಯಿಂದ ಯಾವುದೇ ಲಾಭವನ್ನು ಇಟ್ಟುಕೊಂಡಿದ್ದ ವ್ಯಕ್ತಿಯನ್ನು ಸಂಪೂರ್ಣ ಹೊರತುಪಡಿಸಿ ಸ್ವಾಧೀನತೆಯನ್ನು ಇಟ್ಟುಕೊಂಡಿದ್ದರೆ,

(ಬ) ಭಾಗಶಃ ಮುಕ್ತಾಯವಾಗುವ ಸಂದರ್ಭದಲ್ಲಿ, ಯಾವುದರ ಮೂಲಕ ಅವನಿಗೆ ಹಿತಸಂಬಂಧವಿದ್ದಿತೋ ಆ ಅಧಿಕಾರ ಪತ್ರದ ಸತ್ವದಿಂದ ಆಸ್ತಿಯ ಯಾವುದೇ ಭಾಗ ಇಲ್ಲವೆ ಯಾವುದೇ ಲಾಭವು ಮೃತನಿಂದ ಉಪ ಭೋಗ ಇಲ್ಲವೆ ವಶಾಧಿಕಾರ ಇಟ್ಟುಕೊಳ್ಳಲ್ಪಟ್ಟಿದೆಯೆಂಬ ಕಾರಣಕ್ಕಾಗಿ ಮಾತ್ರ ಮೇಲಿನ ಪ್ಯಾರಾದಲ್ಲಿ ನಿರ್ದಿಷ್ಟಪಡಿಸಲಾದ ಕರಾರುಗಳು ಸಮಾ ಧಾನವಾಗಿರದಿದ್ದರೆ,

ಈ ಉಪಕಲಮಿನ ಪ್ರಕಾರ ಅಪವಾದವೆಂದಾಗುವುದು.

ಆದರೆ, ವಾಕ್ಯಾವಳಿ (ಅ)ದಲ್ಲಿ ಗುರುತಿಸಲಾದ ಆಸ್ತಿಯ ಸದ್ಭಾವನೆ ಯಿಂದ ಕಬಜಾ ಮತ್ತು ಉಪಭೋಗವನ್ನು ಮರಣದ ಕಾಲಕ್ಕೆ ಮುಕ್ತಾಯ ಮಿತಿಯುಳ್ಳ ಹಿತಸಂಬಂಧದ ವಿನ್ಯಾಸ ಇಲ್ಲವೆ ಮುಕ್ತಾಯವಾದ ಕೂಡಲೇ

ತಾತ್ಕಾಲಿಕವಾಗಿ ವಹಿಸಿಕೊಳ್ಳದಿದ್ದಾಗ, ಮುಕ್ತಾಯ ಇಲ್ಲವೆ ವಿನ್ಯಾಸ ವಾಗುವುದಕ್ಕೆ ಹೊಂದಿಕೊಂಡು ಮೊದಲು ಹಿತಸಂಬಂಧವಿದ್ದ ಮತ್ತು ಕರಾರುಪತ್ರ ಇಲ್ಲವೆ ಬೇರೆ ರೀತಿಯಿಂದ ಯಾವುದೇ ಲಾಭವಿದ್ದ ವ್ಯಕ್ತಿ ಯನ್ನು ಸಂಪೂರ್ಣ ಹೊರತುಪಡಿಸಿ, ಮರಣದ ಪೂರ್ವದಲ್ಲಿ ಕನಿಷ್ಠ ಎರಡು ವರ್ಷಗಳ ಮಟ್ಟಿಗಾದರೂ ಕಾಯಿದಿಟ್ಟ ಲಾಭ ಇಲ್ಲವೆ ಬೇರೆ ರೀತಿಯ ಹಕ್ಕು ಬಿಟ್ಟು ಕೊಟ್ಟದ್ದರಿಂದ ನಂತರ ಆ ಆಸ್ತಿಯ ಉಪಭೋಗ ಮಾಡಿ ದ್ದರೆ, ಆ ವಿನ್ಯಾಸ ಇಲ್ಲವೆ ಮುಕ್ತಾಯವು ಈ ಉಪಕಲಮಿನ ಪ್ರಕಾರ ಅಪ ವಾದವೆಂದಾಗುವುದು.

ಮತ್ತೂ ಆದರೆ, ಈ ಮೊದಲಿನ ಉಪಕಲಮಿನ ಕಕ್ಷಿಗಳ ಸತ್ವದಿಂದ ಉಂಟಾಗುವುದನ್ನು ಬಿಟ್ಟು ಬೇರೆಯಾಗಿ ವಾರಸಾಕರ ಆಕರಣೆಗೆ ಬಾಧಿಸು ವುದೆಂದು ಈ ಉಪಕಲಮಿನಿಂದ ಅರ್ಥ ಹಚ್ಚಲಾಗದು.

(೩) ಆ ಆಸ್ತಿಯ ಬೆಲೆಯನ್ನು ಉಳಿಸುವುದಕ್ಕೆ ಇಲ್ಲವೆ ಬೆಳೆಸುವು ದಕ್ಕೆ ಎಂದು ಎಣಿಕೆ ಹಾಕಲಾದ ಉದ್ದೇಶಗಳಿಗೆ ಉಪಯೋಗ ಮಾಡ ಲ್ಪಟ್ಟ ಹಣ ಇಲ್ಲವೆ ಹಣದಷ್ಟು ಪ್ರತಿ ಕಿಮ್ಮತ್ತು ಇರುವ ಪಾರು ಬೆಲೆಗಾಗಿ ಋಣ ಭಾರವು ಯಾವುದರ ಮೇಲೆ ಹಾಕಲಾಗಿರುವುದೋ ಅಂತಹ ಸಂದರ್ಭ ದಲ್ಲಿ ಬರುವ ಆಸ್ತಿಯ ಬಗ್ಗೆ ನಿರ್ದೇಶನವು ಯಾವ ಮಟ್ಟಿಗೆ ಮಾರು ಬೆಲೆಯು ಉಪಯೋಗಿಸಲ್ಪಟ್ಟಿತೋ ಅಷ್ಟು ಮಟ್ಟಿಗೆ ಋಣ ಭಾರದಂಕಿತ ವಾದ ಆಸ್ತಿಯೆಂದು ಅರ್ಥ ಹಚ್ಚಬೇಕು. ಈ ಸಂದರ್ಭವನ್ನು ಹೊರತು ಪಡಿಸಿ, ಲಕ್ಷಿಸಲಾದ ಹಿತಸಂಬಂಧವು ಯಾವ ಆಸ್ತಿಯಲ್ಲಿ ಇದ್ದಿತೋ ಆ ಆಸ್ತಿಯ ಮೇಲೆ ಋಣ ಭಾರವು ಇರುವ ಸಂದರ್ಭದಲ್ಲಿ ಆ ಹಿತಸಂಬಂಧವು ಸಂಬಂಧಾತ್ಮಕ ಕ್ರಿಯೆಗಳಿಂದ(೨೭ ನೆಯ ಕಲಮಿನಲ್ಲಿ ಈ ಮುಂದೆ ವ್ಯಾಖ್ಯೆ ಮಾಡಲಾದಂತೆ) ನಿರ್ಮಿತವಾಗಿದ್ದು ಆ ಹಿತಸಂಬಂಧದ ವಿನ್ಯಾಸವನ್ನು ಒಳಗೊಂಡಿದ್ದರೆ, ಆ ಆಸ್ತಿಯ ಬಗ್ಗೆ ಬರುವ ನಿರ್ದೇಶನವು ಬಂದಾಗ ಮತ್ತು ಉಪಕಲಮು (೧) ಅನ್ವಯಿಸಲ್ಪಡುವಾಗ ಋಣಭಾರ ಮುಕ್ತ ಆಸ್ತಿಯೆಂದು ಅರ್ಥ ಹಚ್ಚಬೇಕು.

(೪) ಆ ಮುಂದೆ ಯಾವುದೇ ಕಾಲಕ್ಕೆ, ವಿನ್ಯಾಸಕ್ಕೆ ಇಲ್ಲವೆ ಮುಕ್ತಾ ಯಕ್ಕೆ ಸಂಬಂಧಿಸಿದ :ಯಾವುದೇ ಕ್ರಿಯೆಗಳ ಸತ್ವದಿಂದ ಅವನಿಗೆ. ಯಾವುದೇ ಲಾಭವಾಗಿದ್ದರೆ, ಮರಣದ ಮೂಲಕ ಮಿತಗೊಳ್ಳುವ ಹಿತಸಂಬಂಧವು ವಿನ್ಯಾಸ ಮಾಡಲ್ಪಟ್ಟಿರುವಾಗ ಇಲ್ಲವೆ ಮುಕ್ತಾಯವಾದಾಗ ಉಪಕಲಮು (೨) ರ ಉದ್ದೇಶಗಳಿಗಾಗಿ .ಆಸ್ತಿಯ ಸದ್ಭಾವದ ಸ್ವಾಧೀನತೆ ಮತ್ತು

ಉಪಭೋಗಗಳು ಆನಂತರ ತಾತ್ಕಾಲಿಕವಾಗಿ ವಹಿಸಿಕೊಳ್ಳಲ್ಪಟ್ಟವೆಂದು ಗಣಿಸಲ್ಪಡಲಾಗುವುದಿಲ್ಲ. ಮತ್ತು ಆ ಹಿತಸಂಬಂಧವಿದ್ದ ಮತ್ತು ಕರಾರಪತ್ರ ಇಲ್ಲವೆ ಬೇರೆ ರೀತಿಯಿಂದ ಯಾವುದೇ ಲಾಭವಿದ್ದ ವ್ಯಕ್ತಿಯನ್ನು ಸಂಪೂರ್ಣ ಹೊರತುಪಡಿಸಿ ತದನಂತರ ಇಟ್ಟುಕೊಳ್ಳಲ್ಪಟ್ಟಿತೆಂದು, ಗಣಿಸಲ್ಪಡಲಾಗುವುದಿಲ್ಲ. ಅಲ್ಲದೆ ಅವನಿಗೆ ಇಂತಹ ಲಾಭವು ಇರುವಾಗ ಉಪಕಲಮು (೨) ರ ಮೊದಲನೆಯ ಕಕ್ಷೆಯ ಉದ್ದೇಶಗಳಿಗಾಗಿ ಆ ಆಸ್ತಿಯು ಅವನನ್ನು ಸಂಪೂರ್ಣ ಹೊರತುಪಡಿಸಿ ಉಪಭೋಗಿಸಲ್ಪಟ್ಟಿತೆಂದೂ ಗಣಿಸಲ್ಪಡಲಾಗುವುದಿಲ್ಲ.

(೫) ಈ ಹಿಂದಿನ ಉಪಕಲಮಿನಲ್ಲಿ—

(ಅ) ವಿನ್ಯಾಸದ ಬಗ್ಗೆ ಸಂಬಂಧಿಸಿದೆಯೆಂದು ಹೇಳಲಾದ ಯಾವುದೇ ಕ್ರಿಯೆಯ ಬಗ್ಗೆ ಆಗುವ ನಿರ್ದೇಶನವು ೨೭ ನೇಯ ಕಲಮಿನಲ್ಲಿ ವ್ಯಾಖ್ಯೆ ಮಾಡಲಾದ ಯಾವುದೇ ಸಂಬಂಧತ್ಮಾಕ ಕ್ರಿಯೆಗೆ ನಿರ್ದೇಶಿಸಲ್ಪಟ್ಟಿತೆಂದೂ ಅವುಗಳಲ್ಲಿ ವಿನ್ಯಾಸವೂ ಒಂದು ಎಂದೂ ತಿಳಿಯಲ್ಪಡಬೇಕು. ಮತ್ತು

(ಬ) ಮುಕ್ತಾಯಕ್ಕೆ ಸಂಬಂಧಿಸಿದ ಯಾವದೇ ಕ್ರಿಯೆಗಳ ಬಗ್ಗೆ ಆಗುವ ನಿರ್ದೇಶನವು ಹಾಗೆ ವ್ಯಾಖ್ಯೆಮಾಡಲ್ಪಟ್ಟ ಯಾವುದೇ ಸಂಬಧಾತ್ಮಕ ಕ್ರಿಯೆಗಳು, ಅವುಗಳಲ್ಲಿ ಮುಕ್ತಾಯದಲ್ಲಿ ಪರಿಣಾಮಕಾರಿಯಾಗುವ ಇಲ್ಲವೆ ಮುಕ್ತಾಯದ ಬಗ್ಗೆ ಚಿಂತನೆಯಲ್ಲಿ ಪರಿಣಮಿಸಿದ ಇಲ್ಲವೆ ಮುಕ್ತಾಯವನ್ನು ನಿರ್ದೇಶಿಸಿದ ವಿನ್ಯಾಸವು ಒಂದು, ಎಂದು ನಿರ್ದೇಶಿಸಲಾದಂತೆ ತಿಳಿಯಲ್ಪಡಬೇಕು.

**ವಿವೇಚನೆ:**

ಮರಣ ಪೂರ್ವದಲ್ಲಿಯ ಎರಡು ವರುಷಗಳಲ್ಲಿ ವಿನ್ಯಾಸ ಮಾಡಲ್ಪಟ್ಟ ಮತ್ತು ಮರಣ ಸಮಯಕ್ಕೆ ಮುಕ್ತಾಯವಾಗುವ ಮಿತಿಯುಳ್ಳ ಹಿತಸಂಬಂಧವನ್ನು ಕರಪಾತ್ರ ಮಾಡುವುದಕ್ಕೆ ಈ ಕಲಮು ಇದೆ. ಆ ಹಿತಸಂಬಂಧವು ವಿನ್ಯಾಸ ಮಾಡಲ್ಪಡದಿದ್ದರೆ, ಮರಣ ಸಮಯಕ್ಕೆ ಇಳಿದು ಬರುವ ಆಸ್ತಿಯೆಂದು ವಿಧಿಸುವ ೫ ನೇಯ ಕಲಮಿನ ವ್ಯಾಪ್ತಿ ಬರುತ್ತಿದ್ದಿತು. ಮರಣ ಪೂರ್ವದಲ್ಲಿ ಎರಡು ವರುಷಗಳಕಿಂತ ಮೊದಲು ಸದ್ಭಾವನೆಯಿಂದ ಯಾವುದೇ ವಿನ್ಯಾಸವು ಮಾಡಲ್ಪಟ್ಟಿದ್ದರೆ, ಆ ಆಸ್ತಿಯು ಕರಪಾತ್ರವಾಗುವುದಿಲ್ಲ. ಆದುದರಿಂದ ಯಾವ ವ್ಯಕ್ತಿಯ ಮರಣದಿಂದ ಯಾವುದೊಂದು ಹಿತಸಂಬಂಧವು ಅವನ ಮರಣದ ಮೂಲಕ ಮುಕ್ತಾಯವಾಗುವುದೋ ಆ ಹಿತಸಂಬಂಧವಿದ್ದ ಆಸ್ತಿಯ ವಿನ್ಯಾಸದ ಬಗ್ಗೆ ಹಾಕಲಾಗುವ ವಾರಸಾಕರವನ್ನು ತಪ್ಪಿಸುವುದನ್ನು ತಡೆಯುವುದಕ್ಕಾಗಿ ಈ ಕಲಮು ರೂಪಿಸಲ್ಪಟ್ಟಿದೆ.

**ಉದಾಹರಣೆ**

ಒಬ್ಬ ಹಿಂದು ವಿಧವೆ ಇದ್ದಾಳೆ. ಸ್ತ್ರೀಧನವೆಂದಾಗಿರುವ ಒಂದು ಆಸ್ತಿ ಅವಳಿಗೆ ಇದೆ. ಅವಳು ತನ್ನ ಮರಣದ ಮೊದಲು ಎರಡು ವರುಷಕ್ಕಿಂತ ಹಿಂದೆಯೇ ಆ ಆಸ್ತಿಯನ್ನು ಆ ಆಸ್ತಿಯ ಶೇಷಭೋಗಾಧಿಕಾರಿಗೆ ಹಕ್ಕು ಬಿಟ್ಟು ಕೊಟ್ಟಿರುತ್ತಾಳೆ. ಅವಳ ಮರಣದಿಂದ ಆ ಆಸ್ತಿಯು ಆ ಶೇಷಭೋಗಾಧಿಕಾರಿಗೆ ಇಳಿದು ಬಂದಿತೆಂದು ಹೇಳಲಾಗದು. ಏಕೆಂದರೆ ಆಸ್ತಿಯು ಅವಳ ಮರಣ ಪೂರ್ವದಲ್ಲಿಯ ಎರಡು ವರುಷಗಳ ಮುಂಚಿತವೆ ಪ್ರತ್ಯಕ್ಷವಾಗಿ ಹಸ್ತಾಂತರವಾಗಿದೆ. ಆದುದರಿಂದ ೫ ನೆಯ ಕಲಮಾಗಲಿ, ೭ ನೆಯ ಕಲಮಾಗಲಿ ಅನ್ವಯಿಸುವುದಿಲ್ಲ. ಆದರೆ ಈ ವಿನ್ಯಾಸವು ಈ ಕಲಮಿನ ೧ ನೆಯ ಉಪಕಲಮಿನ ಪ್ರಕಾರ ಮರಣ ಕಾಲಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದರಿಂದ ಕರಪಾತ್ರವಾಗುವುದು.

ಈ ಕಲಮಿನ ತಲೆ ಬರಹವು ಇದರ ವ್ಯಾಪ್ತಿಯನ್ನು ಸೂಚಿಸುವುದು. ಮರಣದ ಮೂಲಕ ಮುಕ್ತಾಯ ಮಿತವಾಗುವ ಹಿತಸಂಬಂಧಗಳ ಬಗ್ಗೆ ಈ ಕಲಮು ಸ್ಪಷ್ಟಪಡಿಸುತ್ತಿದೆ. ಆ ಹಿತಸಂಬಂಧವು ವಶಾಧಿಕಾರದಲ್ಲಿರಬೇಕು. ಜೀವಮಾನದಲ್ಲಿರುವ ಹಿತಸಂಬಂಧವು ವಶಾಧಿಕಾರದಲ್ಲಿದ್ದರೆ ಸಾಕು; ಯಾವುದೇ ರೀತಿಯಲ್ಲಿ, ಅದು ಅಕಾಲಿಕವಾಗಿ ಮುಕ್ತಾಯವಾದರೂ ಆ ಆಸ್ತಿಯು ೧೧ ನೆಯ ಕಲಮಿನನ್ವಯವಾಗಿ ಕರ ಪಾತ್ರವಾಗುವುದು. ಈ ಕಲಮು ನಿರ್ದಿಷ್ಟವಾಗಿ " ಹಕ್ಕು ಬಿಟ್ಟುಕೊಡುವಿಕೆ ಆಶ್ವಾಸನ, ಹಕ್ಕುತಪ್ಪಿಸುವಿಕೆ, ಹಕ್ಕು ಕಳೆದುಕೊಳ್ಳುವಿಕೆ," ಈ ವಿಷಯಗಳಿಗೆ ಮಹತ್ವಕೊಟ್ಟರೂ ಅದರ ಸಾಮಾನ್ಯ ತತ್ವವನ್ನು ಆ ವಿಷಯಗಳು ಮಿತಗೊಳಿಸುವುದಿಲ್ಲ. ಆದರೆ ಆ ಸಾಮಾನ್ಯತತ್ವಕ್ಕೆ ಒಂದು ಅಪವಾದವಿದೆ. ವಿನ್ಯಾಸವು ಮರಣ ಪೂರ್ವದಲ್ಲಿ ಎರಡು ವರುಷಗಳ ಮೊದಲು ಆಗಿರಬೇಕು. ಹೊಸ ಮಾಲಕರು ಮೂಲ ಮಾಲಕರ ಮರಣದ ಪೂರ್ವದಲ್ಲಿ ಕನಿಷ್ಠ ಎರಡು ವರುಷಗಳಷ್ಟು ಕಾಲಾವಧಿಯವರೆಗೆ ಮೂಲ ಮಾಲಕರನ್ನು ಸಂಪೂರ್ಣ ಹೊರತುಪಡಿಸಿ ಆಸ್ತಿಯ ಉಪಭೋಗ ಮಾಡಿರಬೇಕು. ವಿನ್ಯಾಸವು ಸಾರ್ವಜನಿಕ ಧರ್ಮಾರ್ಥ ಉದ್ದೇಶಗಳಿಗಾಗಿ ಆಗಿದ್ದರೆ, ಕಾಲಾವಧಿಯು ೬ ತಿಂಗಳಷ್ಟು ಇರುವುದು. ಈ ಅಪವಾದ ವಿಷಯವು ಉಪಕಲಮು (೨) ರಲ್ಲಿ ಹೇಳಲಾಗಿದೆ.

ಈ ಉದಾಹರಣೆಗಳು ಈ ಕಲಮನ್ನು ಇನ್ನೂ ಸ್ಪಷ್ಟ

(೧) ಅನು ಆಸ್ತಿಯೊಂದನ್ನು ಬನಿಗೆ ಜೀವಮಾನದವರೆಗೆ ಕೊಡುವನು. ಮತ್ತು ಆ ಆಸ್ತಿಯು ಬನ ಮರಣದನಂತರ ಕನಿಗೆ ಹೋಗಬೇಕೆಂದು ವ್ಯವಸ್ಥೆಮಾಡಿರುವನು. ಬನ ಮರಣದ ಮೂಲಕ ಆ ಆಸ್ತಿಯಲ್ಲಿಯ ಮಿತಹಿತ ಸಂಬಂಧವು ಮುಕ್ತಾಯವಾಗಿರುವುದು. ಮತ್ತು ಆಸ್ತಿಯು ಬನ ಮರಣದ ನಂತರ ಕನಿಗೆ ಇಳಿದು ಬರುವುದು. ಈ ಆಸ್ತಿಯು ೫ನೆಯ ಕಲಮಿನ ಪ್ರಕಾರ ಕರಪಾತ್ರವಾಗುವುದು.

(೨) ಅನು ಬನಿಗೆ ಒಂದು ಆಸ್ತಿಯನ್ನು ವ್ಯವಸ್ಥೆ ಮಾಡಿಕೊಡುವನು. ಆ ಆಸ್ತಿಯ ಮೇಲೆ ಒಂದು ವಾರ್ಷಿಕ ವೇತನದ ಭಾರ ಹಾಕುವನು. ಆ ವಾರ್ಷಿಕ ವೇತನವು ಕನಿಗೆ ಮುಟ್ಟಬೇಕೆಂದು ವ್ಯವಸ್ಥೆ ಮಾಡಿರುವನು. ಕನ ಮರಣದ ಮೂಲಕ ಋಣಭಾರವು ಮುಕ್ತಾಯವಾಗುವುದು. ಮತ್ತು ಆ ಆಸ್ತಿಯು ೭ನೆಯ ಕಲಮಿನನ್ವಯವಾಗಿ ಕರಪಾತ್ರವಾಗುವುದು.

(೩) ೧೧ನೆಯ ಉದಾಹರಣೆಯಲ್ಲಿಯ ಬನು ತನ್ನ ಹಿತಸಂಬಂಧವನ್ನು ಕನಿಗೆ ಹಸ್ತಾಂತರಿಸಿಕೊಟ್ಟರೆ, ಬನ ಮರಣದ ಮೂಲಕ ಯಾವ ಆಸ್ತಿಯೂ ಕನಿಗೆ ಇಳಿದು ಬರುವುದಿಲ್ಲ. ಏಕಂದರೆ ಬನ ಮರಣದಕಿಂತ ಮೊದಲೆ ಕನು ಆಸ್ತಿಯ ಒಡೆಯನಾಗಿರುವನು. ಆದ್ದರಿಂದ ೫ನೆಯ ಕಲಮು ಅನ್ವಯಿಸುವುದಿಲ್ಲ.

(೪) ೨ನೆಯ ಉದಾಹರಣೆಯಲ್ಲಿಯ ಕನು ತನ್ನ ವಾರ್ಷಿಕ ವೇತನವನ್ನು ಬನಿಗೆ ಹಸ್ತಾಂತರಿಸಿದರೆ, ಕನ ಮರಣದ ನಂತರ ಯಾವ ಹಿತಸಂಬಂಧವೂ ಮುಕ್ತಾಯವಾಗದ್ದರಿಂದ ಆ ವಾರ್ಷಿಕ ವೇತನದಲ್ಲಿಯ ಹಿತಸಂಬಂಧವು ಕರಪಾತ್ರ ವಾಗುವುದಿಲ್ಲ.

ಹೀಗೆ ಮಿತ ಹಿತಸಂಬಂಧವನ್ನು ವಿನ್ಯಾಸ ಮಾಡುವುದರಿಂದ ಕಲಮು ೫ ಮತ್ತು ೭ರನ್ವಯವಾಗಿ ಕರಹಾಕಲು ಬರುವುದಿಲ್ಲ. ವಾರಸಾ ಕರ ತಪ್ಪಿಸಲು ಇದರಿಂದ ಎಡೆ ಸಿಕ್ಕುವದು. ಕರತಪ್ಪಿಸುವ ಹವಣಿಕೆಯನ್ನು ತಡೆಯುವದಕ್ಕಾಗಿ ವಿಶೇಷ ಕಲಮು ಬೇಕಾಯಿತು. ಅದಕ್ಕಾಗಿ ೧೧ನೆಯ ಕಲಮು ರೂಪಿಸಲ್ಪಟ್ಟಿದೆ. ಯಾವ ವಿನ್ಯಾಸ ಮಾಡಿದ್ದರೆ ೫ ಇಲ್ಲವೆ ೭ನೆಯ ಕಲಮು ಹತ್ತುತ್ತಿತ್ತೊ, ಅದನ್ನು ತಪ್ಪಿಸುವಂತೆ ವಿನ್ಯಾಸ ಮಾಡಲಾಗಿದ್ದರೆ ೧೧ನೆಯ ಕಲಮು ಹತ್ತುವುದು. ೧೧ನೆಯ ಕಲಮು ಹತ್ತಿದರೆ ೫ ಇಲ್ಲವೆ ೭ನೆಯ ಕಲಮು ಹತ್ತುವುದಿಲ್ಲ; ೫ ಇಲ್ಲವೆ ೭ ಹತ್ತಿದರೆ ೧೧ನೆಯ ಕಲಮು ಹತ್ತುವುದಿಲ್ಲ. ೫ ಇಲ್ಲವೆ ೭ನೆಯ ಕಲಮನ್ನು ತಪ್ಪಿಸುವ ಹವಣಿಕೆ ಕಂಡು ಬಂದರೆ ಆಗ ೧೧ನೆಯ ಕಲಮು ಹತ್ತುವುದು, ಎಂದು ಹೇಳಿದರೆ ಮೂರೂ ಕಲಮುಗಳ ಅಧಿಕಾರ ಕ್ಷೇತ್ರವನ್ನು ಸೂಚಿಸಿದಂತಾಗುವುದು. ೧೧ನೆಯ ಕಲಮಿಗೆ ಅಪವಾದವೊಂದು ಇದೆ. ಆ ಅಪವಾದದಂಕಿತವಾಗಿ ೧೧ನೆಯ ಕಲಮಿನ ಅಧಿಕಾರವನ್ನು ಅಳೆಯಬೇಕು.

ವಿನ್ಯಾಸ ಇಲ್ಲವೆ ಮುಕ್ತಾಯವು ಇಡಿಯಾಗಿ ಆಗಿರಬಹುದು ಇಲ್ಲವೆ ಭಾಗವಾಗಿ ಆಗಿರಬಹುದು. ಆದರೂ ಅದು ಈ ಕಲಮಿನ ಕಕ್ಷೆಯಲ್ಲಿ ಬರುವುದು. ವಿನ್ಯಾಸ ಇಲ್ಲವೆ ಮುಕ್ತಾಯವು ಪ್ರತಿಬೆಲೆ ತೆಗೆದುಕೊಂಡು ಆಗಿರಬಹುದು, ಇಲ್ಲವೆ ತೆಗೆದುಕೊಳ್ಳದೆ ಆಗಿರಬಹುದು. ಆದರೂ ಈ ಕಲಮು ಅನ್ವಯಿಸುವುದು. ಈ ವಿಧಿ ಇರದಿದ್ದರೆ ಪ್ರತಿಬೆಲೆಗಾಗಿ ವಿನ್ಯಾಸ ಮಾಡಲಾಗಿದೆ ಎಂಬ ಸದರಿನಲ್ಲಿ ಕರವನ್ನು ತಪ್ಪಿಸಲು ಸಾಧ್ಯವಾಗು

ತ್ತಿದ್ದಿತು. ಈ ಕಲಮಿನಲ್ಲಿ ಬರುವ ವಿನ್ಯಾಸಗಳು ಮರಣ ಪೂರ್ವದಲ್ಲಿಯು ನಿಶ್ಚಿತ ಮಿತ ಕಾಲಾವಧಿಯಲ್ಲಿ ಆದಂಥವು ಎಂಬುದನ್ನು ನೆನೆಯುಬೇಕು. ವಿನ್ಯಾಸ ಇಲ್ಲವೆ ಮುಕ್ತಾಯವು, ಹಕ್ಕುಬಿಟ್ಟುಕೊಡುವಿಕೆ, ಆಶ್ವಾಸನ, ಹಕ್ಕುತಪ್ಪಿಸುವಿಕೆ, ಹಕ್ಕುಕಳೆದು ಕೊಳ್ಳುವಿಕೆ, ಇಲ್ಲವೆ ಇನ್ನೂ ಬೇರೆ ಯಾವುದೇ ರೀತಿಯಿಂದ ಆಗಿದ್ದರೂ ಅದು ಲಕ್ಷಿಸ ಲ್ಪಡುವುದು. ಹೀಗೆ ಹೇಳಿರುವುದರಿಂದ ವಿನ್ಯಾಸ ಇಲ್ಲವೆ ಮುಕ್ತಾಯವು ಹೇಗೆ ಮಾಡಲ್ಪಟ್ಟಿತು ಎಂಬುದು ಅಷ್ಟು ಮಹತ್ವದ್ದಲ್ಲ. ಕಾಲ ಮಿತಿ ಈ ಕಲಮಿನ ಆಸ್ತಿ ವಾರವೆಂಬುದನ್ನು ತಿಳಿಯಬೇಕು. ಈ ಕಾಲಮಿತಿ ಎರಡು ವರುಷ ಸಾಮಾನ್ಯ ವಿನ್ಯಾಸಗಳಿಗೆ, ೬ ತಿಂಗಳು ಸಾರ್ವಜನಿಕ ಧರ್ಮಾರ್ಥ ಉದ್ದೇಶಗಳಿಗಾಗಿ ಮಾಡಿದ ವಿನ್ಯಾಸಗಳಿಗೆ ಎಂಬುದನ್ನು ಹೇಳಲಾಗಿದೆ.

**೧೨ ಅಧಿಕಾರ ಕಾಯಿದಿಟ್ಟುಕೊಂಡು ಮಾಡಿದ ನಿವೇಶನಗಳು.**

(೧) ಕಾಗದಪತ್ರ ಇಲ್ಲವೆ ಮೃತ್ಯುಲೇಖದಂತೆ ಪರಿಣಾಮವಾಗದೆ ಇರುವ ಬೇರೆ ಯಾವುದೇ ದಸ್ತೈವಜಿನಿಂದ ಮೃತನಿಂದ ಮಾಡಲ್ಪಟ್ಟ ಯಾವುದೇ ನಿವೇಶನದಸ್ವಯವಾಗಿ ಇಳಿದು ಬರುವ ಆಸ್ತಿಯು ಯಾವುದರಿಂದ ಇಂತಹ ಆಸ್ತಿ ಯಲ್ಲಿಯು ಜೀವಮಾನದ ಹಿತಸಂಬಂಧವು ಇಲ್ಲವೆ ಮರಣದ ಘಟನೆಯಿಂದ ನಿರ್ದಿಷ್ಟ ಪಡಿಸಲು ಸಾಧ್ಯವಾಗುವ ಬೇರೆ ಯಾವುದೇ ಕಾಲಾವಧಿಯ ಹಿತ ಸಂಬಂಧವು ನಿವೇಶನ ಮಾಡುವವನಿಂದ ಪ್ರತ್ಯಕ್ಷವಾಗಿ ಇಲ್ಲವೆ ಪರ್ಯಾಯ ವಾಗಿ ಕಾಯಿದು ಇರಿಸಲ್ಪಟ್ಟಿರುವುದು, ಇಲ್ಲವೆ ಯಾವುದರಿಂದ ನಿವೇಶನ ಮಾಡಿದವನು ಬೇರೆ ಯಾವುದೇ ಅಧಿಕಾರದ ಕಾರ್ಯಾಚರಣೆಯಿಂದ ಇಂತಹ ಆಸ್ತಿಯು ತನಗೆ ಮರಳಿ ಬರಬೇಕೆಂಬ ಇಲ್ಲವೆ ಅದರಲ್ಲಿಯು ಕೇವಲ ಹಿತ ಸಂಬಂಧವನ್ನು ಮರಳಿ ಬೇಡುವ ಹಕ್ಕನ್ನು ಕಾಯಿದು ಇರಿಸಿಕೊಂಡಿರಬಹುದು, ಅಂತಹ ಆಸ್ತಿಯು ನಿವೇಶನ ಮಾಡಿದವನ ಮರಣದಿಂದ ಇಳಿದು ಬರುವು ದೆಂದು ಗಣಿಸಲ್ಪಡಲಾಗುವುದು.

ಆದರೆ ಇಂತಹ, ಹಿತಸಂಬಂಧ ಇಲ್ಲವೆ ಹಕ್ಕನ್ನು ಮತ್ತು ಕರಾರಪತ್ರ ಇಲ್ಲವೆ ಬೇರೆ ರೀತಿಯಿಂದ ಅವನಿಗಿರುವ ಯಾವುದೇ ಲಾಭವನ್ನು ಹಕ್ಕು ಬಿಟ್ಟು ಕೊಡುವುದರಿಂದ ಆಸ್ತಿಯು ನಿವೇಶನ ಮಾಡುವವನನ್ನು ಸಂಪೂರ್ಣವಾಗಿ ಹೊರತು ಪಡಿಸಿದನಂತರ ಅವನ ಮರಣದಕಿಂತಲೂ ಮೊದಲು ಕನಿಷ್ಠ ಎರಡು ವರುಷಗಳ ಮಟ್ಟಿಗೆ ಉಪಭೋಗಿಸಲ್ಪಟ್ಟಿದ್ದರೆ ಇಂತಹ ಹಿತಸಂಬಂಧ ಇಲ್ಲವೆ ಹಕ್ಕು ಕಾಯಿದು ಇರಿಸಿಕೊಳ್ಳಲ್ಪಟ್ಟಿದೆಯೆಂಬ ಕಾರಣಕ್ಕಾಗಿ ಮಾತ್ರ ನಿವೇ ಶನ ಮಾಡಿದವನ ಮರಣದ ಸಮಯಕ್ಕೆ ಆ ಆಸ್ತಿಯು ಇಳಿದು ಬರುವುದೆಂದು ಗಣಿಸಲ್ಪಡಲಾಗುವುದಿಲ್ಲ.

**ವಿವರಣೆ:** ತನ್ನ ಮತ್ತು (೨೭ ನೆಯ ಕಲಮಿನಲ್ಲಿ ವ್ಯಾಖ್ಯೆಮಾಡಲಾದಂತೆ) ತನ್ನ ಯಾವುದೇ ಸಂಬಂಧಿಕರ ಪೋಷಣೆಗಾಗಿ, ನಿವೇಶಿತ ಆಸ್ತಿಯಲ್ಲಿ ಹಿತಸಂಬಂಧವನ್ನು ನಿವೇಶನ ಮಾಡಿದವನು ಕಾಯಿದು ಇರಿಸಿಕೊಂಡಿರುವುದು ಈ ಕಲಮಿನ ಅರ್ಥದಲ್ಲಿ ತನಗಾಗಿ ಹಿತಸಂಬಂಧವನ್ನು ಕಾಯಿದು ಇರಿಸಿಕೊಳ್ಳಲಾಗಿರುವುದೆಂದು ಗಣಿಸಲ್ಪಡಲಾಗುವುದು.

(೨) ಉಪಕಲಮು (೧) ರಲ್ಲಿ ಏನೇ ಹೇಳಲಾಗಿದ್ದರೂ ಒಬ್ಬ ವ್ಯಕ್ತಿಯಿಂದ ಆಸ್ತಿಯು ಒಬ್ಬನಿಗೆ ಇಲ್ಲವೆ ಹೆಚ್ಚು ಜನರಿಗೆ ಅವರವರ ಜೀವಮಾನದವರೆಗೆ ಮತ್ತು ಅವರ ಮರಣದನಂತರ ನಿವೇಶನ ಮಾಡಿದವನಿಗೆ ಅವನ ಜೀವಮಾನದವರೆಗೆ, ಮತ್ತು ಆನಂತರ ಮತ್ತೆ ಬೇರೆ ವ್ಯಕ್ತಿಗಳಿಗೆ ನಿವೇಶನ ಮಾಡಲ್ಪಟ್ಟಿರುವಾಗ ಮತ್ತು ಅವನ ಹಿತಸಂಬಂಧವು ಸ್ವಾಧೀನತೆಯಲ್ಲಿ ಬರುವುದಕ್ಕಿಂತ ಮೊದಲು ನಿವೇಶನ ಮಾಡಿದವನು ಮರಣ ಹೊಂದಿದರೆ, ಈ ಕಲಮಿನ ಅರ್ಥದಲ್ಲಿ ಆ ಆಸ್ತಿಯು ನಿವೇಶನ ಮಾಡಿದವನ ಮರಣ ಸಮಯಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು.

**ವಿವೇಚನೆ:**

ರದ್ದು ಮಾಡಲ್ಪಡಲು ಅಧಿಕಾರವುಳ್ಳ ನಿವೇಶನದನ್ವಯವಾಗಿರುವ ಆಸ್ತಿಯನ್ನು ಇಲ್ಲವೆ ಮೃತನು ತನಗಾಗಿ ಇಲ್ಲವೆ ತನ್ನ ಸಂಬಂಧಿಕರಿಗಾಗಿ ಕೆಲ ಮಟ್ಟಿಗೆ ಲಾಭದಾಯಕ ಹಿತಸಂಬಂಧವನ್ನು ಕಾಯಿದು ಇಟ್ಟುಕೊಂಡ ಆಸ್ತಿಯನ್ನು ಈ ಕಲಮು ಲಕ್ಷಿಸುವುದು. ಈ ಕಲಮಿನ ಪ್ರಕಾರ ನಿವೇಶನವು ಯಾವುದೊಂದು ಕಾಗದಪತ್ರ ಇಲ್ಲವೆ ಮೃತ್ಯುಲೇಖವಲ್ಲದೆ ಯಾವುದೊಂದು ದಸ್ತೈವಜಿನ ಮೂಲಕ ಮಾಡಲ್ಪಟ್ಟಿರಬೇಕು. ಆ ಕಾಗದದ ಮೂಲಕ ಅವನು ಪ್ರತ್ಯಕ್ಷವಾಗಿ ಇಲ್ಲವೆ ಪರ್ಯಾಯವಾಗಿ ಆ ಆಸ್ತಿಯಲ್ಲಿ ಹಿತಸಂಬಂಧವನ್ನು ಜೀವಮಾನದವರೆಗೆ ಕಾಯಿದು ಇರಿಸಿಕೊಂಡಿರಬೇಕು. ಇಲ್ಲವೆ ನಿವೇಶನವನ್ನು ರದ್ದುಗೊಳಿಸುವ ಅಧಿಕಾರವನ್ನು ಕಾಯಿದು ಇರಿಸಿಕೊಂಡಿರಬೇಕು. ಅಂದರೆ ಆ ನಿವೇಶನದ ಮೂಲಕವಾಗಿರುವ ಆಸ್ತಿಯು ನಿವೇಶನ ಮಾಡಿದವನ ಮರಣದ ಮೂಲಕ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು.

ಈ ಕಲಮಿಗೆ ಒಂದು ಅಪವಾದವಿದೆ. ನಿವೇಶನ ಮಾಡಿದವನು ತನ್ನ ಹಿತಸಂಬಂಧದ ಇಲ್ಲವೆ ಅಧಿಕಾರದ ಹಕ್ಕು ಬಿಟ್ಟುಕೊಟ್ಟರೆ, ಮತ್ತು ಇದರಿಂದ ಅನುಗ್ರಹಿಯು ನಂತರ ನಿವೇಶನ ಮಾಡಿದವನನ್ನು ಸಂಪೂರ್ಣ ಹೊರ್ತುಪಡಿಸಿ ಇಲ್ಲವೆ ಯಾವುದೇ ಕರಾರುಪತ್ರ ಇಲ್ಲವೆ ಬೇರೆ ರೀತಿಯಿಂದ ಬರುವ ಲಾಭವನ್ನು ಅವನಿಗೆ ಕೊಡದೆ, ಅವನ ಮರಣದ ಪೂರ್ವದಲ್ಲಿ ಕನಿಷ್ಠ ಎರಡು ವರುಷಗಳ ಮಟ್ಟಿಗೆ

ಆಸ್ತಿಯನ್ನು ಉಪಭೋಗಿಸಿದ್ದರೆ ನಿವೇಶಿತವಾದ ಆಸ್ತಿಯು ಕರಪಾತ್ರವಾಗುವುದಿಲ್ಲ. ಇದರಲ್ಲಿ ಹೇಳಿದ ಲಕ್ಷಣಗಳು ೧೦ ನೆಯ ಕಲಮಿನಲ್ಲಿಯೂ ಹೇಳಲ್ಪಟ್ಟಿವೆ.

ನಿವೇಶನ ಮಾಡಿದವನು ತನಗಾಗಿ ಇಲ್ಲವೆ ತನ್ನ ಸಂಬಂಧಿಕರಿಗಾಗಿ ಪೋಷಣೆಗೆಂದು ಹಿತಸಂಬಂಧವನ್ನು ಇಟ್ಟುಕೊಂಡರೆ, ಈ ಕಲಮಿನ ಅರ್ಥದಲ್ಲಿ ಅವನು ಹಿತ ಸಂಬಂಧವನ್ನು ಕಾಯಿದು ಇರಿಸಿಕೊಂಡಂತೆ ಆಗುವದು. ಅದಕ್ಕಾಗಿ ಆ ಆಸ್ತಿಯು ಕರ ಪಾತ್ರವಾಗುವುದು.

ಉಪಕಲಮು (೨) ನ್ನು ಈ ಉದಾಹರಣೆಯಿಂದ ತಿಳಿಸಬಹುದು. **ಅ** ನು ಆಸ್ತಿಯನ್ನು **ಬ** ನಿಗೆ ಜೀವಮಾನದ ವರೆಗೆ, ನಂತರ **ಕ** ನಿಗೆ ಅವನ ಜೀವಮಾನದವರೆಗೆ, ಆನಂತರ ತನಗೆ (**ಅ**ನಿಗೆ) ಜೀವಮಾನದವರೆಗೆ, ನಂತರ **ಡ** ನಿಗೆ ಎಂದು ವ್ಯವಸ್ಥೆ ಮಾಡುವನು. **ಡ** ಇಲ್ಲವೆ **ಕ** ನ ಜೀವಮಾನದಲ್ಲಿ **ಅ**ನು ಮರಣಹೊಂದಿದರೆ, ನಿವೇಶಿತ ವಾದ ಎಲ್ಲ ಆಸ್ತಿಯು ಈ ಕಲಮಿನ ಉಪಕಲಮು (೧) ರ ಪ್ರಕಾರ ಕರಪಾತ್ರ ವಾಗುತ್ತಿತ್ತು. ಏಕೆಂದರೆ **ಅ** ನು ಆಸ್ತಿಯಲ್ಲಿಯ ಹಿತಸಂಬಂಧವನ್ನು ಕಾಯಿದು ಇರಿಸಿಕೊಂಡಿದ್ದನು. ಆದರೆ ಉಪಕಲಮು (೨) ಇಂತಹ ಸಂದರ್ಭದಲ್ಲಿ ಕರಮುಕ್ತತೆಯು ಆಸ್ಪದವಮಾಡಿಕೊಡುವುದು.

**೧೩ ಜತೆಯಾಗಿ ಹಣತೊಡಗಿಸುವಿಕೆ**

ಯಾವುದೊಂದು ಆಸ್ತಿಗೆ ಇಲ್ಲವೆ ಯಾವುದೊಂದು ಆಸ್ತಿಯನ್ನು ಕೊಂಡುಕೊಳ್ಳಲು ಉಪಯೋಗಿಸಲಾದ ಧನಸಂಗ್ರಹಕ್ಕೆ ಒಬ್ಬ ವ್ಯಕ್ತಿಯು ಪೂರ್ಣ ಹಕ್ಕುದಾರನಾಗಿದ್ದು ಇನ್ನೊಬ್ಬನಿಗೆ ಹಸ್ತಾಂತರಿಸಲ್ಪಡುವಂತೆ ಇಲ್ಲವೆ ತಾನು ಮತ್ತು ಇನ್ನೊಬ್ಬ ವ್ಯಕ್ತಿಯು ಜತೆಯಾಗಿ ಮಾಲಕರಾಗುವಂತೆ, ವಿನ್ಯಾಸದ ಮೂಲಕವಾಗಲಿ ಇಲ್ಲವೆ ಬೇರೆ ರೀತಿಯಿಂದಾಗಲಿ; ತಾನೊಬ್ಬನೆ ಆಗಲಿ ಇಲ್ಲವೆ ಇನ್ನೊಬ್ಬರ ಜತೆಯಾಗಿ ಇಲ್ಲವೆ ವ್ಯವಸ್ಥೆಯಿಂದ ಮಾಡಿ, ಆ ಆಸ್ತಿಯಲ್ಲಿಯ ಯಾವುದೊಂದು ಭಾಗದ ಲಾಭದಾಯಕ ಹಿತಸಂಬಂಧವು ಅವನ ಮರಣದ ಮೂಲಕ ಇನ್ನೊಬ್ಬರಿಗೆ ಪಾಶ್ಚಾತ್ ಜೀವಿತ್ವದ ಮೂಲಕ ಇಳಿದು ಬರುತ್ತಿದ್ದರೆ ಇಲ್ಲವೆ ಒದಗಿಬರುತ್ತಿದ್ದರೆ, ಆ ಇಡಿ ಆಸ್ತಿಯು ಅವನ ಮರಣದ ಮೂಲಕ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು.

**ವಿವೇಚನೆ**

ಜತೆಯಾಗಿ ಧಾರಣಮಾಡಿದ ಆಸ್ತಿಯ ಕರಪಾತ್ರತೆಯ ಬಗ್ಗೆ ಈ ಕಲಮು ಹೇಳುತ್ತದೆ. ಒಬ್ಬ ವ್ಯಕ್ತಿಯು ಮೂಲದಲ್ಲಿ ಒಂದು ಆಸ್ತಿಗೆ ಸಂಪೂರ್ಣ ಮಾಲಕನಾಗಿದ್ದು ನಂತರ ಇನ್ನೊಬ್ಬನಿಗೆ ಒಡೆತನದಲ್ಲಿ ಭಾಗಿಯನ್ನಾಗಿ ಮಾಡಿಕೊಂಡರೆ ಈ ವ್ಯವಸ್ಥೆಯಿಂದ ಮೂಲ ಮಾಲಕನ ಮರಣದಿಂದ ಆಸ್ತಿಯು ಇನ್ನೊಬ್ಬನಿಗೆ

ಪಶ್ಚಾತ್ ಜೀವಿತ್ವದ ಕಾರಣದಿಂದ ಬರುತ್ತಿದ್ದರೆ, ಮೂಲ ಮಾಲಕನ ಮರಣದಿಂದ ಇಡಿ ಆಸ್ತಿಯು ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು. ಆದರೆ ಆಸ್ತಿಯು ಮಾಲಕನಿಗೆ ಮೂಲದಲ್ಲಿಯೆ ಅದರ ಭಾಗಕ್ಕೆ ಮಾತ್ರ ಅಧಿಕಾರವಿದ್ದರೆ ಕೂಡಿ ಕೊಂಡಿರುವರೆಂಬ ಕಾರಣಕಾಗಿ ಇಲ್ಲವೆ ಜತೆ ಮಾಲಕತ್ವಕ್ಕಾಗಿ ಇಡಿ ಆಸ್ತಿಯು ಕರ ಪಾತ್ರವಾಗುವುದಿಲ್ಲ. ಈ ಕಲಮಿನ ಪ್ರಕಾರ ಕರಪಾತ್ರವಾಗಬೇಕಾದ ಆಸ್ತಿಯು ಮೂಲದಲ್ಲಿ ಒಬ್ಬನದೆ ಒಡೆತನವಿರಬೇಕು. ನಂತರ ಹಸ್ತಾಂತರವಾಗಿ ಜತೆ ಮಾಲಕತ್ವ ಉಂಟಾಗಿರಬೇಕು. ಹಸ್ತಾಂತರಿಸುವವನ ಮರಣದಿಂದ ಪಶ್ಚಾತ್ ಜೀವಿತ್ವದ ಮೂಲಕ ಇನ್ನೊಬ್ಬನಿಗೆ ಆ ಆಸ್ತಿಯಲ್ಲಿಯ ಭಾಗವು ಇಳಿದು ಬರುವಂತಿರಬೇಕು. ಅಂದರೆ ಈ ಕಲಮಿನ ಪ್ರಕಾರ ಹಸ್ತಾಂತರ ಮಾಡಿದ ಮೂಲ ಮಾಲಕನ ಮರಣದ ಸಮಯಕ್ಕೆ ಇಡೀ ಆಸ್ತಿಯು ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು, ಮತ್ತು ಅದೆಲ್ಲ ಕರಪಾತ್ರವಾಗುವುದು.

**ಉದಾಹರಣೆ:** ಅನು ಒಂದು ಲಕ್ಷ ರೂಪಾಯಿ ಬೆಲೆಯುಳ್ಳ ಸರಕಾರಿ ಆಶ್ವಾಸನ ಪತ್ರಗಳ ಒಡೆಯನು ಇದ್ದಾನೆ. ಅವುಗಳನ್ನು ತನ್ನ ಮತ್ತು ತನ್ನ ಮಗ ಬ ಇವರ ಜತೆ ಹೆಸರಿನಲ್ಲಿ ಹಸ್ತಾಂತರಿಸುತ್ತಾನೆ. ಇಬ್ಬರೂ ಜೀವಿಸಿರುವಾಗ ಆ ಹಿತ ಸಂಬಂಧದಲ್ಲಿ ತಾನು ೧/೪ ಪಾಲು ತೆಗೆದುಕೊಳ್ಳಬೇಕೆಂದೂ ಮಗನು ೩/೪ ಪಾಲು ತೆಗೆದು ಕೊಳ್ಳಬೇಕೆಂದೂ ಕರಾರು ಹಾಕಿರುತ್ತಾನೆ. ಇಬ್ಬರಲ್ಲಿ ಒಬ್ಬರು ಮರಣ ಹೊಂದಿದ್ದರೆ ಪಶ್ಚಾತ್ ಜೀವಿತ್ವದಿಂದ ಯಾರು ಬದುಕಿರುವರೊ ಅವರಿಗೆ ಪೂರ್ಣ ಒಡೆತನ ಬರುವುದು. ಇಲ್ಲಿ ಅನು ತನಗಾಗಿ ಕೇವಲ ೧/೪ ದಷ್ಟು ಭಾಗ ಇಟ್ಟುಕೊಂಡಿದ್ದರೂ ಅವನು ಮರಣ ಹೊಂದಿದರೆ ಈ ಕಲಮು ಹತ್ತುವುದು. ಮತ್ತು ಇಡೀ ಆಸ್ತಿಯು ಕರಪಾತ್ರ ವಾಗುವುದು.

**೧೪ ದಾನಗ್ರಾಹಿಯ ಸಲುವಾಗಿ ಇಡಲಾದ ವಿಮಾ ಪಾಲಿಸಿಗಳು.**

(೧) ಯಾವುದೇ ವ್ಯಕ್ತಿಯಿಂದ ತನ್ನ ಜೀವ ವಿಮೆ ಇಳಿಸಿದ ವಿಮಾ ಪಾಲಿಸಿಯನ್ವಯವಾಗಿ ಎಲ್ಲಿ ಆ ಪಾಲಿಸಿಯು ದಾನಗ್ರಾಹಿಯ ಸಲುವಾಗಿ ಅವನಿಂದ ಇಡಿಯಾಗಿ ಇಟ್ಟುಕೊಳ್ಳಲ್ಪಟ್ಟಿದೆಯೊ, ಆ ದಾನಗ್ರಾಹಿಯು ನಾಮ ಕರಣ ಮಾಡಲ್ಪಟ್ಟವನಿರಲಿ ಇಲ್ಲವೆ ಬಿಟ್ಟಹಕ್ಕು ಪಡೆದವನಿರಲಿ, ಆ ಹಣವು ಸ್ವೀಕರಿಸಲ್ಪಟ್ಟಿದೆಯೋ ಇಲ್ಲವೆ ಎಲ್ಲಿ ಪಾಲಿಸಿಯಲ್ಲಿಯ ಕೆಲವೊಂದು ಭಾಗವನ್ನು ಮೇಲ್ಕಾಣಿಸಿದ ಉದ್ದೇಶಕ್ಕಾಗಿ ಅವನಿಂದ ಇಡಲ್ಪಟ್ಟಿದ್ದರೆ, ಅವನು ಕೊಟ್ಟ ವಿಮಾ ಕಂತುಗಳ ಪ್ರಮಾಣದಲ್ಲಿ ಹಣವು ಸ್ವೀಕರಿಸಲ್ಪಟ್ಟಿದೆಯೋ ಅಲ್ಲಿ ಅಂತಹ ಹಣದ ಭಾಗವು ವಿಮೆ ಇಳಿಸಿದವನ ಮರಣದಿಂದ ಆ ಹಣವು ಮರಣದ ಮೂಲಕ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು.

**ವಿವರಣೆ:** ಮೃತನಿಂದ ಮಾಡಲ್ಪಟ್ಟ ನಿವೇಶನದ ಪರಿಣಾಮವಾಗಿ ಇಲ್ಲವೆ ಅದರ ಸತ್ವದಿಂದ ಮೃತವ್ಯಕ್ತಿಯ ಜೀವವಿಮಾ ಪಾಲಿಸಿಯು ಪರಿಣಮಿಸಿದ್ದರೆ, ಆ ಪಾಲಿಸಿಯು ಮೃತವ್ಯಕ್ತಿಯಿಂದಲೇ ಮಾಡಲಾಗಿದೆಯೆಂದು ತಿಳಿಯಲ್ಪಡಲಾಗುವುದು.

(೨) ಮೃತವ್ಯಕ್ತಿಯಿಂದ ಮಾಡಲ್ಪಟ್ಟ ನಿವೇಶನದ ಸತ್ವದಿಂದ ಇಲ್ಲವೆ ಅದರ ಪರಿಣಾಮವಾಗಿ ಯಾವುದೊಂದು ವಿಮೆಯ ಪಾಲಿಸಿಯ ಮೇಲೆ ಕೊಡಲಾದ ವಿಮಾಕಂತುಗಳು ಆ ನಿವೇಶಿತ ಆಸ್ತಿಯಲ್ಲಿಂದ ಕೊಡಲಾಗಿದ್ದರೆ, ಹಾಗೆ ಕೊಡಬೇಕೆಂದು ಮೃತನಿಂದ ವ್ಯವಸ್ಥೆ ಮಾಡಲ್ಪಟ್ಟಿರಲಿ ಇಲ್ಲವೆ ಬಿಡಲಿ, ಇಲ್ಲವೆ ನಿವೇಶಿತ ಆಸ್ತಿಯಿಂದ ಬರುವ ಉತ್ಪನ್ನದಿಂದ ಕೊಡಲಾಗಿದ್ದರೆ, ಹಾಗೆ ಕೊಡಬೇಕೆಂದು ಮೃತನಿಂದ ವ್ಯವಸ್ಥೆ ಮಾಡಲ್ಪಟ್ಟಿರಲಿ ಇಲ್ಲವೆ ಬಿಡಲಿ, ಅವು ಉಪಕಲಮು (೧) ರ ಉದ್ದೇಶಗಳಿಗಾಗಿ ಮೃತನಿಂದಲೇ ಕೊಡಲ್ಪಟ್ಟಿವೆಯೆಂದು ತಿಳಿಯಲ್ಪಡಲಾಗುವುದು.

ಆದರೆ, ನಿವೇಶನದ ಉದ್ದೇಶಗಳಿಗಾಗಿ ಮೃತನಿಂದ ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ಆಸ್ತಿಯಿಂದಾಗಲಿ ಇಲ್ಲವೆ ಆ ಆಸ್ತಿಯನ್ನು ಪ್ರತಿನಿಧೀಕರಿಸುವ ಆಸ್ತಿಯಿಂದಾಗಲೀ, ಇಲ್ಲವೆ ಮೃತನಿಂದ ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ವ್ಯವಸ್ಥೆ ಮಾಡಲಾದ ಉತ್ಪನ್ನದಿಂದಾಗಲೀ, ಆ ಉತ್ಪನ್ನವು ಅಂತಹ ಆಸ್ತಿಯಿಂದ ಬಂದಿರಲಿ ಇಲ್ಲವೆ ಬೇರೆ ಯಾವುದರಿಂದಾದರೂ ಬಂದಿರಲಿ, ಯಾವುದೇ ಹಣವು ಸಲ್ಲಿಸಲ್ಪಡಲಾಗಿರದಿದ್ದರೆ, ಮೃತನು ಮತ್ತು ಇನ್ನೊಬ್ಬ ಬೇರೆ ಯಾವುದೇ ವ್ಯಕ್ತಿಯು ಇವರ ನಡುವೆ ಮಾಡಿಕೊಳ್ಳಲಾದ ಯಾವುದೇ ಪರಸ್ಪರ ವ್ಯವಸ್ಥೆಯ ಭಾಗವಾಗಿ ಹಣ ಕೊಡಲಾಗಿಲ್ಲವೆಂದು ನಿಯಂತ್ರಕನಿಗೆ ಸಮಾಧಾನವಾಗಿದ್ದರೆ ಆ ಹಣವನ್ನು ಮೃತನು ಕೊಟ್ಟಿರುವನೆಂದು ತಿಳಿಯಲ್ಪಡಲಾಗದು.

(೩) **ಈ ಕಲಮಿನ ಉದ್ದೇಶಗಳಿಗಾಗಿ,**

(ಅ) " ನಿವೇಶಿತ " ಎಂಬ ಪದಪ್ರಯೋಗವು ಯಾವುದೇ ವಿನ್ಯಾಸ, ವಿಶ್ವಸ್ತನಿಧಿ,ಕರಾರಪತ್ರ, ಒಪ್ಪಿಗೆಪತ್ರ ಇಲ್ಲವೆ ವ್ಯವಸ್ಥೆ ಇದನ್ನು ಒಳಗೊಳ್ಳುವುದು; ಮತ್ತು,

(ಬ) ಒಬ್ಬ ವ್ಯಕ್ತಿಯು ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ನಿವೇಶನವನ್ನು ಮಾಡಿದ್ದರೆ ಇಲ್ಲವೆ ಕರಾರುಪತ್ರ ಮಾಡಿಕೊಟ್ಟಿದ್ದರೆ ಅವನು ನಿವೇಶನವನ್ನು ಮಾಡಿದ್ದಾನೆಂದು ಗಣಿಸಲ್ಪಡಲಾಗುವುದು. ಮತ್ತು

ವಿಶೇಷವಾಗಿ ( ಈ ವಾಕ್ಯಾವಳಿಯಲ್ಲಿಯ ಈ ಮೊದಲಿನ ಶಬ್ದಗಳ ಸಾಮಾನ್ಯತ್ವಕ್ಕೆ ಭಂಗಬರದಂತೆ ) ನಿವೇಶನದ ಉದ್ದೇಶಗಳಿಗಾಗಿ ಅವನು ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ಧನವನ್ನು ಒದಗಿಸಿಕೊಡುವೆನೆಂದು ಅಂಗೀಕರಿಸಿದ್ದರೆ ಇಲ್ಲವೆ ಒದಗಿಸಿಕೊಟ್ಟಿದ್ದರೆ, ಇಲ್ಲವೆ ಇನ್ನೊಬ್ಬ ಬೇರೆ ವ್ಯಕ್ತಿಯೊಡನೆ ಪರಸ್ಪರ ಕರಾರು ವ್ಯವಸ್ಥೆ ಮಾಡಿಕೊಂಡು ಆ ಇನ್ನೊಬ್ಬ ವ್ಯಕ್ತಿಯು ನಿವೇಶನ ಮಾಡುವಂತೆ ಇಲ್ಲವೆ ಕರಾರುಪತ್ರ ಮಾಡುವಂತೆ ಮಾಡಿದರೆ, ನಿವೇಶನ ಮಾಡಿದಂತೆ ಎಂದು ಗಣಿಸಲ್ಪಡಲಾಗುವುದು.

**ವಿವೇಚನೆ**

ದಾನಗ್ರಾಹಿಯ ಲಾಭಕ್ಕಾಗಿ ಯಾವನೊಬ್ಬ ವ್ಯಕ್ತಿಯಿಂದ ಇಡಲ್ಪಟ್ಟ ವಿಮಾ ಪಾಲಿಸಿಯನ್ವಯವಾಗಿ ಬಂದ ಹಣವನ್ನು ಕರಪಾತ್ರಮಾಡುವದಕ್ಕಾಗಿ ಈ ಕಲಮು ಇದೆ. ನಿವೇಶಿತವಾದ ಯಾವುದೇ ಆಸ್ತಿಯಲ್ಲಿಂದ ಇಲ್ಲವೆ ನಿವೇಶಿತ ಆಸ್ತಿಯನ್ವಯವಾಗಿ ಉಂಟಾಗಿರುವ ಯಾವುದೇ ಉತ್ಪನ್ನದಿಂದ ಆ ವ್ಯಕ್ತಿಯಿಂದ ವಿಮಾಕಂತುಗಳು ಕೊಟ್ಟಿರಬಹುದು. ಎಲ್ಲಿ ವಿಮಾಕಂತುಗಳ ಭಾಗವನ್ನು ಮಾತ್ರ ಕೊಡಲಾಗಿದ್ದರೆ ಅದರ ಪ್ರಮಾಣದಲ್ಲಿ ಪಡೆಯಲಾದ ಪಾಲಿಸಿಯ ಹಣವು ಮಾತ್ರ ಕರಪಾತ್ರವಾಗುವುದು. ಆ ಪಾಲಿಸಿಯನ್ನು ದಾನಗ್ರಾಹಿಗೆ ನಾಮಕರಣದಿಂದ ಇಲ್ಲವೆ ಹಕ್ಕು ಬಿಟ್ಟುಕೊಡುವುದರಿಂದ ವರ್ಗಾಯಿಸಿದ ನಂತರ ಪಾಲಿಸಿದಾರನು ವಿಮಾಕಂತುಗಳನ್ನು ತುಂಬಿದ್ದರೆ ಆ ಪಾಲಿಸಿಯ ಹಣವು ಇಡಿಯಾಗಿ ಇಲ್ಲವೆ ಭಾಗವಾಗಿ ಯಾವ ಪ್ರಮಾಣದಲ್ಲಿ ಕಂತು ತುಂಬಲಾಗಿರುವುದೊ ಅಷ್ಟು, ಪಾಲಿಸಿದಾರನ ಮರಣದ ಮೂಲಕ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು. ಈ ಕಲಮನ್ನು ಬಿಡಿಸಿ ನೋಡಿದರೆ ಹೀಗೆ ಕಾಣುವುದು:

(೧) ವಿಮಾಪಾಲಿಸಿಯು ಮೃತನ ಜೀವವಿಮಾ ಪಾಲಿಸಿಯಾಗಿರಬೇಕು. ಅದು ಇನ್ನೊಬ್ಬರ ಜೀವವಿಮಾಪಾಲಿಸಿಯಾಗಿದ್ದರೆ ಈ ಕಲಮು ಅನ್ವಯಿಸುವುದಿಲ್ಲ.

(೨) ಮೃತನಿಂದ ಪಾಲಿಸಿಯು ಪರಿಣಮಿಸಲ್ಪಟ್ಟಿರಬೇಕು. ಈ ಪರಿಣಮಿಸುವಿಕೆಯು ಅವನು ಮಾಡಿದ ನಿವೇಶನದ ಪರಿಣಾಮವಾಗಿದ್ದರೆ ಆ ಪಾಲಿಸಿಯು ಮೃತನಿಂದಲೇ ಪರಿಣಮಿಸಲ್ಪಟ್ಟಿದೆಯೆಂದು ತಿಳಿಯಲಾಗುವುದೆಂದು ವಿವರಣೆಯು ಸ್ಪಷ್ಟ ಮಾಡುವುದು.

(೩) ಆ ಜೀವವಿಮಾ ಪಾಲಿಸಿಯು ಮೃತನಿಂದ ದಾನಗ್ರಾಹಿಯ ಲಾಭಕ್ಕಾಗಿ ಇಟ್ಟುಕೊಳ್ಳಲ್ಪಟ್ಟಿರಬೇಕು. ಆ ದಾನಗ್ರಾಹಿಯು ನಾಮಕರಣ ಮಾಡಲ್ಪಟ್ಟವನಿರಬಹುದು ಇಲ್ಲವೆ ಬಿಟ್ಟಹಕ್ಕು ಪಡೆದವನಿರಬೇಕು.

(೪) ಮೃತನಿಂದ ನಿವೇಶನಮಾಡಲ್ಪಟ್ಟ ಆಸ್ತಿಯೊಳಗಿಂದ ಇಲ್ಲವೆ ನಿವೇಶನದ ಆಸ್ತಿಯನ್ವಯವಾಗಿ ಒದಗಿ ಬರುವ ಉತ್ಪನ್ನದಿಂದ ವಿಮಾ ಕಂತುಗಳು ಕೊಡಲ್ಪಟ್ಟಿದ್ದರೆ ಅವು ಮೃತನಿಂದಲೇ ಕೊಡಲ್ಪಟ್ಟುವೆಂದು ತಿಳಿಯಬೇಕೆಂದು ಉಪಕಲಮು (೨) ಸ್ಪಷ್ಟಪಡಿಸುತ್ತದೆ.

ಈ ಕಲಮಿನಲ್ಲಿ " ಪರಿಣಮಿಸು " ಎಂಬ ಪದವು ಬರುವುದು. ವಿಮಾ ಪಾಲಿಸಿಯ ಮೊದಲ ಕಂತು ಕೊಡಲು ಯಾರು ಹೊಣೆಗಾರರೋ ಅವರೇ ಪಾಲಿಸಿಯನ್ನು ಪರಿಣಮಿಸಿದಂತೆ; ಪರಿಣಮಿಸು ಶಬ್ದದ ವ್ಯಾಪ್ತಿ ದೊಡ್ಡದಿದೆ. ಪರಿಣಮಿಸುವಿಕೆಯು ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ಆಗಿರಬಹುದು. ಪರಿಣಮಿಸುವಿಕೆಯು ಯಾವುದೊಂದು ನಿವೇಶನದ ಪರಿಣಾಮವಾಗಿ ಇಲ್ಲವೆ ಅದರ ಸತ್ವದ ಮೂಲಕ ಆಗಿದದ್ದರೆ, ಅದು ನಿವೇಶನ ಮಾಡಿದವನಿಂದಲೇ ಪರಿಣಮಿಸಲಾಗಿದೆಯೆಂದು ಗಣಿಸಲ್ಪಡಲಾಗುವುದು.

ಈ ಕಲಮಿನ ಅರ್ಥದ ಪ್ರಕಾರ ಮತ್ತು ಉದ್ದೇಶಗಳಿಗಾಗಿ ನಿವೇಶನವು ಯಾವುದೇ ವಿನ್ಯಾಸ, ವಿಶ್ವಸ್ತ ನಿಧಿ, ಕರಾರು, ಒಪ್ಪಿಗೆಪತ್ರ-ವ್ಯವಸ್ಥೆ ಇವುಗಳನ್ನು ಒಳಗೊಳ್ಳುವದೆಂಬುದನ್ನು ನೆನೆಯಬೇಕು. ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ನಿವೇಶನ ಮಾಡಿದ್ದರೂ ಆ ವ್ಯಕ್ತಿಯು ನಿವೇಶನ ಮಾಡಿದ್ದಾನೆಂದು ತಿಳಿಯಲಾಗುವುದು; ಇಲ್ಲವೆ ನಿವೇಶನದ ಸಲುವಾಗಿ ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ಧನ ಸಂಗ್ರಹದ ವ್ಯವಸ್ಥೆ ಮಾಡಿದ್ದರೆ, ಇಲ್ಲವೆ ನಿವೇಶನ ಮಾಡುವುದಕ್ಕೆ ಇನ್ನೊಬ್ಬ ವ್ಯಕ್ತಿಯ ಜತೆಗೆ ಒಡಂಬಡಿಕೆಯ ವ್ಯವಸ್ಥೆ ಮಾಡಿಕೊಂಡಿದ್ದರೆ, ಆ ವ್ಯಕ್ತಿಯು ನಿವೇಶನ ಮಾಡಿದಂತೆ ಎಂದು ಗಣಿಸಲ್ಪಡಲಾಗುವದೆಂದು ವಿಶದಮಾಡಿ ಈ ಕಲಮಿನ ವ್ಯಾಪ್ತಿಯನ್ನು ಹಿಗ್ಗಿಸಲಾಗಿದೆ.

ಪಾಲಿಸಿ ಇಟ್ಟುಕೊಳ್ಳುವದೆಂದರೆ ವಿಮಾ ಕಂತುಗಳು ಯಾವಾಗ ಕೊಡಲು ಯೋಗ್ಯವಾಗುವುವೊ ಆಗ ಕೊಡುತ್ತ ಹೋಗುವುದು. ಈ ವಿಮಾ ಕಂತುಗಳನ್ನು ಕೊಡುವ ಹೊಣೆಯು ಯಾರದು ಇರುವದೋ ಅವನೇ ಪಾಲಿಸಿ ಇಟ್ಟುಕೊಂಡವನು. ಆದುದರಿಂದ ವಿಮಾಕಂತುಗಳು ಮೃತನಿಂದ ಕೊಡಲ್ಪಟ್ಟಿರಬೇಕು ಇಲ್ಲವೆ ಅವನ ಆದೇಶದಂತೆ ಅವನ ಆಸ್ತಿಯೊಳಗಿಂದ ಕೊಡಲ್ಪಟ್ಟಿರಬೇಕು. ಈ ಮಾತುಗಳನ್ನು ಹೊರತುಪಡಿಸಿ ವಿಮಾಕಂತುಗಳು ಕೊಡಲ್ಪಟ್ಟಿದ್ದರೆ ಮತ್ತು ಮೃತನ ಆಸ್ತಿಯ ಸಂಬಂಧವಿಲ್ಲದೆ, ಕೊಡಲ್ಪಟ್ಟಿವೆಯೆಂದು ನಿಯಂತ್ರಕನಿಗೆ ಸಮಾಧಾನವಾದರೆ ಮೃತನಿಂದ ವಿಮಾಕಂತು ಕೊಡಲಾಗಿಲ್ಲವೆಂದು ತಿಳಿಯಲ್ಪಡಲಾಗುವುದು.

ಪಾಲಿಸಿಯ ಲಾಭ ಪಡೆಯುವದಕ್ಕೆ ದಾನಗ್ರಾಹಿಯು ನೇಮಕವಾದ ನಂತರ ಯಾರು ವಿಮಾಕಂತುಗಳನ್ನು ಕೊಟ್ಟಿರುವರು, ಎಂಬುದೇ ಈ ಕಲಮಿನಲ್ಲಿ ನೋಡ

ಬೇಕಾದ ಮಾತು. ಪಾಲಿಸಿ ಪರಿಣಮಿಸಿದವನು ದಾನಿಯ ಸ್ಥಳದಲ್ಲಿರಬೇಕು. ಇದರಿಂದ ದಾನಗ್ರಾಹಿಯಿಂದ ಯಾವ ಪ್ರತಿಬೆಲೆಯನ್ನು ದಾನಿಯಾವವನು ಪಡೆದಿರಬಾರದೆಂಬುದು ಸ್ಪಷ್ಟವಾಗುವುದು. ಪಾಲಿಸಿಯ ಹಕ್ಕು ಬಿಟ್ಟುಕೊಟ್ಟನಂತರ ಎಷ್ಟು ವಿಮಾಕಂತುಗಳನ್ನು ದಾನಿಯು ಕೊಟ್ಟಿರುವನೋ ಅಷ್ಟು ಪ್ರಮಾಣದಲ್ಲಿ ಮಾತ್ರ ದಾನಿಯ ಮರಣದಿಂದ ಕರಪಾತ್ರವಾಗುವುದು.

**ಉದಾಹರಣೆ:**

**ಅ** ನು ಜೀವವಿಮಾ ಪಾಲಿಸಿ ತೆಗೆದುಕೊಂಡಿದ್ದಾನೆ. ಪಾಲಿಸಿ ತೆಗೆದುಕೊಂಡು ೧೪ ಕಂತುಗಳನ್ನು ಕೊಟ್ಟನಂತರ ಆ ಪಾಲಿಸಿಯನ್ನು **ಬ** ನಿಗೆ ವರ್ಗಾಯಿಸಿ ಹಕ್ಕು ಬಿಟ್ಟುಕೊಡುತ್ತಾನೆ. ಹಕ್ಕು ಬಿಟ್ಟುಕೊಟ್ಟನಂತರ ೧೧ ಕಂತು ಕೊಡಲ್ಪಟ್ಟನಂತರ **ಅ** ನು ಮರಣಹೊಂದುತ್ತಾನೆ. ಈ ೧೧ ಕಂತುಗಳಲ್ಲಿ ಮೃತದಾನಿಯು ೫ ಕಂತುಗಳನ್ನು ಮಾತ್ರ ಕೊಟ್ಟಿದ್ದಾನೆ. ಹಕ್ಕು ಬಿಟ್ಟುಕೊಡುವದಕ್ಕಿಂತ ಮೊದಲು ಕೊಟ್ಟ ಕಂತುಗಳು ಲೆಕ್ಕಕ್ಕೆ ಬರುವುದೇ ಇಲ್ಲ. ಹಕ್ಕು ಬಿಟ್ಟನಂತರ ಕೊಟ್ಟ ೧೧ ರಲ್ಲಿ ೫ ಮಾತ್ರ ದಾನಿ ಕೊಟ್ಟಿದ್ದಾನೆ. ಅವನ ಮರಣದ ನಂತರ ವಿಮಾ ಪಾಲಿಸಿಯ ಹಣದಲ್ಲಿ ೫|೧೧ ದಷ್ಟು ಮಾತ್ರ ವಾರಸಾಕರ ಪಾತ್ರವಾಗುವುದು.

ವಿಮಾ ಪಾಲಿಸಿಯಿಂದ ಬರುವ ಹಣವು ಈ ಕಾಯಿದೆಯ ಪ್ರಕಾರ ಅನೇಕ ಕಲಮುಗಳಿಂದ ಕರಪಾತ್ರವಾಗುವುದು. ಮೃತನ ಮರಣ ಸಮಯದ ವರೆಗೆ ಆ ಪಾಲಿಸಿಯಲ್ಲಿಯ ಹಕ್ಕು ಮೃತನ ಅಂತರ್ಗತವಾಗಿಯೇ ಇದ್ದರೆ ೫ ನೆಯ ಕಲಮಿನ ಪ್ರಕಾರ ವಾರಸಾಕರ ಪಾತ್ರವಾಗುವುದು. ಮೃತನು ತನ್ನ ಮರಣ ಕಾಲಕ್ಕೆ ಪಾಲಿಸಿ ಹಣವನ್ನು ವಿನ್ಯಾಸ ಮಾಡುವ ಸಾಮರ್ಥ್ಯವುಳ್ಳವನಾಗಿದ್ದರೆ, ೬ ನೆಯ ಕಲಮು ಹತ್ತುವುದು. ಕಾಯಿದೆಯು ಗೊತ್ತು ಮಾಡಿದ ಕಾಲಾವಧಿಯಲ್ಲಿ ಮೃತನು ಜೀವ ವಿಮಾ ಪಾಲಿಸಿಯನ್ನು ದಾನವಾಗಿ ಕೊಟ್ಟರೆ, ೯ ನೆಯ ಕಲಮಿನ ಪ್ರಕಾರ ಕರಪಾತ್ರವಾಗುವುದು. ಮೃತನು ಪಾಲಿಸಿಯನ್ನು ತಾನೇ ಪರಿಣಮಿಸಿ ದಾನಗ್ರಾಹಿಯೊಬ್ಬನ ಸಲುವಾಗಿ ಇಟ್ಟುಕೊಂಡಿದ್ದರೆ ೧೪ ನೆಯ ಕಲಮು ಹತ್ತುವುದು. ಪಾಲಿಸಿಯೊಂದನ್ನು ತಾನೇ ಇಲ್ಲವೆ ಇನ್ನೊಬ್ಬನ ಜತೆಯಾಗಿ ಇಲ್ಲವೆ ವ್ಯವಸ್ಥೆಯೊಡಗೂಡಿ ಮೃತನು ಕೊಂಡುಕೊಂಡಿದ್ದರೆ ೧೫ ನೆಯ ಕಲಮು ಹತ್ತುವುದು. ಮೃತನ ಆಸ್ತಿಯಿಂದ ಒದಗಿ ಬಂದ ಹಣದಿಂದ ಕೊಂಡ ಇಲ್ಲವೆ ಕೊಳ್ಳುವ ವ್ಯವಸ್ಥೆ ಮಾಡಿದ ಪಾಲಿಸಿಯಿಂದ ಬಂದ ಹಣವು ೧೬ ನೆಯ ಕಲಮಿನನ್ವಯವಾಗಿ ಕರಪಾತ್ರವಾಗುವುದು. ೧೫ ಮತ್ತು ೧೬ ನೆಯ ಕಲಮುಗಳಲ್ಲಿ ನಿರ್ದೇಶಿಸಲಾದ ಪಾಲಿಸಿಯು ಮೃತನ ಜೀವ ವಿಮಾ ಪಾಲಿಸಿಯೇ ಆಗಿರಬೇಕೆಂಬ ಆವಶ್ಯಕತೆಯಿಲ್ಲ. ವಿಮಾ ಪಾಲಿಸಿಯ ಬಗ್ಗೆ ಹೀಗೆ ಐದಾರು ಕಲಮುಗಳು ಹತ್ತುವುದರಿಂದ ಯಾವ ಕಲಮು ಹಚ್ಚಿದರೆ ಹೆಚ್ಚು ಕರ ಬರುವುದೋ ಅದನ್ನು ನಿಯಂತ್ರಕನು ಹಚ್ಚುವನು.

೧೪ ನೆಯ ಕಲಮಿನಲ್ಲಿಯ ಪಾಲಿಸಿಯು ಮೃತನ ಜೀವ ವಿಮಾ ಪಾಲಿಸಿಯು ಆದರೆ ೧೫ ನೆಯ ಕಲಮಿನಲ್ಲಿ ಬರುವುದು. ಪಾಲಿಸಿಯು ಯಾರ ಜೀವ ವಿಮಾ ಪಾಲಿಸಿಯೂ ಆಗಿರಬಹುದು. ೧೪ ನೆಯ ಕಲಮಿನಲ್ಲಿಯ ಪಾಲಿಸಿಯು ಮೃತನಿಂದಲೇ ಪರಿಣಮಿಸಲ್ಪಟ್ಟಿರಬೇಕು. ಈ ನಿರ್ಬಂಧವು ೧೫ ನೆಯ ಕಲಮಿನಲ್ಲಿ ಹೇಳಲಾದ ಪಾಲಿಸಿಗಳಿಗೆ ಇಲ್ಲ. ೧೪ ನೆಯ ಕಲಮಿನಲ್ಲಿ ಮೃತನು ದಾನಗ್ರಾಹಿಯ ಲಾಭದ ಸಲುವಾಗಿ ಎಷ್ಟು ಪ್ರಮಾಣದಲ್ಲಿ ಇಟ್ಟುಕೊಂಡಿರುವನೋ ಅಷ್ಟು ಮಟ್ಟಿಗೆ ಮಾತ್ರ ಕರಪಾತ್ರವಾಗುವುದು. ಆದರೆ ಮೃತನ ಮರಣದಿಂದ ಒದಗಿ ಬರುವ ಆ ಪಾಲಿಸಿಯಲ್ಲಿಯ ಲಾಭದಾಯಕ ಹಿತಸಂಬಂಧದ ಪ್ರತಿನಿಧಿಯಾಗಿರುವ ಹಣದ ಮೊತ್ತದ ಮೇಲೆ ೧೫ ನೆಯ ಕಲಮಿನ ಪ್ರಕಾರ ಕರ ಹಾಕಲಾಗುವುದು.

**೧೫. ಮೃತನಿಂದ ಕೊಂಡುಕೊಳ್ಳಲಾದ ಇಲ್ಲವೆ ಕೊಳ್ಳುವ ವ್ಯವಸ್ಥೆ ಮಾಡಲಾದ ವಾರ್ಷಿಕ ವೇತನ ಇಲ್ಲವೆ ಇತರ ಹಿತಸಂಬಂಧ**

ಅವನೊಬ್ಬನಿಂದ ಇಲ್ಲವೆ ಯಾವುದೇ ಇನ್ನೊಬ್ಬರ ಜತೆಗೂಡಿ ಇಲ್ಲವೆ ಇನ್ನೊಬ್ಬರೊಡನೆ ವ್ಯವಸ್ಥೆಯಿಂದ ಮೃತನಿಂದ ಕೊಂಡುಕೊಳ್ಳಲ್ಪಟ್ಟ ಇಲ್ಲವೆ ಕೊಳ್ಳುವ ವ್ಯವಸ್ಥೆ ಮಾಡಲ್ಪಟ್ಟ ಯಾವುದೇ ವಾರ್ಷಿಕವೇತನ ಇಲ್ಲವೆ ಇತರ ಹಿತಸಂಬಂಧವು ಮರಣದ ಮೂಲಕ ಪಶ್ಚಾತ್ ಜೀವಿತ್ವದ ಮೂಲಕ ಇಲ್ಲವೆ ಬೇರೆ ರೀತಿಯಿಂದ ಎಷ್ಟು ಮಟ್ಟಿಗೆ ಅವನಿಗೆ ಉಂಟಾಗುವುದೋ ಇಲ್ಲವೆ ಒದಗಿ ಬರುವುದೋ ಅಷ್ಟು ಮಟ್ಟಿಗಿನ ಲಾಭದಾಯಕ ಹಿತಸಂಬಂಧವು ಮರಣ ಸಮಯಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು.

**ವಿವರಣೆ:** ಲಾಭಾನುಗ್ರಹಿಯು ಮರಣ ಪೂರ್ವದಲ್ಲಿ ನಿರೀಕ್ಷಿಸುತ್ತಿರುವ ಯಾವುದೇ ಹಿತಸಂಬಂಧವನ್ನು ಲಕ್ಷಿಸದೆಯೇ ಆ ಲಾಭದಾಯಕ ಹಿತಸಂಬಂಧದ ವ್ಯಾಪ್ತಿಯನ್ನು ಗೊತ್ತು ಮಾಡಬೇಕು.

**ವಿವೇಚನೆ:**

ತನ್ನ ಜೀವಮಾನದಲ್ಲಿಯೆ ತನ್ನ ಆಸ್ತಿಯನ್ನು ಕರಗಿಸಿ ವಾರಸಾಕರ ತಪ್ಪಿಸುವುದನ್ನು ತಡೆಯುವದಕ್ಕೆಂದು ಈ ಕಲಮಿನ ಸಾಮಾನ್ಯ ಉದ್ದೇಶವಿದೆ. ಜೀವಮಾನದಲ್ಲಿ ಕರಗಿದುದು ಅವನ ಮರಣದ ನಂತರ ಲಾಭದಾಯಕ ಹಿತಸಂಬಂಧವಾಗಿ ಪುನಃ ಪ್ರಕಟವಾಗುವುದು. ಈ ವ್ಯವಸ್ಥೆಯನ್ನು ಲಕ್ಷಿಸುವದಕ್ಕೆ ಈ ಕಲಮು ರೂಪಿಸಲ್ಪಟ್ಟಿದೆ. ವಾರ್ಷಿಕ ವೇತನಗಳಿಗೆ ಮಾತ್ರ ಇದು ಅನ್ವಯಿಸುತ್ತದೆಂದಲ್ಲ. ಇತರ ಹಿತಸಂಬಂಧಗಳಿಗೂ ಅನ್ವಯಿಸುತ್ತದೆ. ಇತರ ಹಿತಸಂಬಂಧದಲ್ಲಿ ವಿಮಾಪಾಲಿಸಿಯ ಹಣವು ಬರುವುದು. ಅದರ ವ್ಯಾಪ್ತಿ ಬಹು ದೊಡ್ಡದಿದೆ. ಹಣದ ರೂಪದಲ್ಲಿ ಸರಕು, ಭೂಮಿ, ಸೇವೆಗಳು ಮುಂತಾದ ಎಲ್ಲವನ್ನೂ ಒಳಗೊಳ್ಳುತ್ತದೆ.

**ಉದಾಹರಣೆ:**

(೧) ಒಂದು ಸಂಸ್ಥೆಯ ಸದಸ್ಯನಾಗಿ ಮೃತನು ಅದರ ವಂತಿಗೆಗಳನ್ನು ಕೊಡುತ್ತಾನೆ. ಸದಸ್ಯನ ಮರಣದ ನಂತರ ಮೃತನ ವಿಧವೆಗೆ ಇಲ್ಲವೆ ಅವಲಂಬಿತರಿಗೆ ಸಂಸ್ಥೆಯು ಹಣವನ್ನು ವಾರ್ಷಿಕ ವೇತನ ಇಲ್ಲವೆ ಇತರ ರೂಪದಲ್ಲಿ ಕೊಡುತ್ತದೆ. ಈ ವ್ಯವಸ್ಥೆ ಮಾಡುವದೆಂದರೆ ಜೀವಮಾನದಲ್ಲಿ ಮೃತನು ತನ್ನ ಆಸ್ತಿಯ ವ್ಯಾಪ್ತಿಯನ್ನು ಕಡಿಮೆ ಮಾಡಿದಂತಾಗುವುದು ಮತ್ತು ಮರಣದ ನಂತರ ಲಾಭದಾಯಕ ಹಿತಸಂಬಂಧವನ್ನು ಹುಟ್ಟಿಸಿದಂತಾಗುವುದು.

(೨) ವಿಧವೆ ಇಲ್ಲವೆ ಮಕ್ಕಳು ಇವರ ಲಾಭಕ್ಕಾಗಿ ಪ್ರತ್ಯೇಕವಾಗಿ ಮಾಡಲ್ಪಟ್ಟ ಸೇವಾಸಂಸ್ಥೆಯಿಂದ ಬರುವ ಉಪಾಯನ (ಗ್ರಾಚುಟಿ, ಪ್ರಾವಿಡೆಂಟ ಫಂಡು) ಇಲ್ಲವೆ ವಿಮಾಹಣಯೋಜನೆ, ಇವು ಈ ಕಲಮಿನಲ್ಲಿ ಬರುವುವು. ಮರಣಾಂತರ ಬರುವ ಈ ಹಣಕ್ಕೆ ಮೃತನು ಪ್ರತ್ಯಕ್ಷ ವಂತಿಗೆ ಕೊಟ್ಟಿರಲಿಕ್ಕಿಲ್ಲ. ಆದರೆ ನೌಕರಿ ಮಾಡಿ ಸೇವೆ ಸಲ್ಲಿಸಿದ ಮೂಲಕ ಇವು ಒದಗಿ ಬರುವುವು.

ಈ ಎರಡೂ ಉದಾಹರಣೆಗಳಲ್ಲಿ ಮೃತನ ಆಸ್ತಿಯೆಂದು ಗಣಿಸಲ್ಪಟ್ಟವುಗಳ ಮೇಲೆ ವಾರಸಾಕರ ಹಾಕಲಾಗುವುದು.

ಈ ಕಲಮು ಅನ್ವಯಿಸಬೇಕಾದರೆ ಎರಡು ಲಕ್ಷಣಗಳು ಕಂಡು ಬರಬೇಕು. (೧) ಮೃತನಿಂದ ಒಬ್ಬನಿಂದಲೇ ಇಲ್ಲವೆ ಇನ್ನೊಬ್ಬರ ಜತೆಯಾಗಿ ಇಲ್ಲವೆ ಇನ್ನೊಬ್ಬರೊಡನೆ ಒಂದು ವ್ಯವಸ್ಥೆಯಿಂದ ವಾರ್ಷಿಕವೇತನ ಇಲ್ಲವೆ ಹಿತಸಂಬಂಧ ಉಂಟಾಗುವಂತೆ ಮಾಡಲ್ಪಟ್ಟಿರಬೇಕು. (೨) ಹೀಗೆ ಮಾಡಲ್ಪಡುವುದರಿಂದ ಮಾಡಿದವನ ಮರಣದ ನಂತರ ಲಾಭದಾಯಕ ಹಿತಸಂಬಂಧವು ಉಂಟಾಗಿರಬೇಕು ಇಲ್ಲವೆ ಒದಗಿಬರಬೇಕು.

ಮೊದಲನೆಯ ಕರಾರು ಪೂರೈಸಲು ಮೃತನೇ ಹಣವನ್ನು ಪ್ರತ್ಯಕ್ಷವಾಗಿ ಕೊಟ್ಟಿರುವ ಆವಶ್ಯಕತೆಯೇನಿಲ್ಲ. ಅವನಿಂದ ಹಣದ ವ್ಯವಸ್ಥೆ ಮಾಡಲ್ಪಟ್ಟಿದ್ದರೆ ಸಾಕು. ಈ ವ್ಯವಸ್ಥೆಯನ್ನು ಅವನು ಒಬ್ಬನೆ ಮಾಡಿರಲಿ ಇನ್ನೊಬ್ಬರ ಜತೆಗೂಡಿ ಮಾಡಿರಲಿ ಮೃತನು ಹಣದ ವ್ಯವಸ್ಥೆಯ ಮುಖ್ಯ ಮೂಲ ಉಗಮವಾಗಿದ್ದರೆ ಆಯಿತು. ಹಿತಸಂಬಂಧವನ್ನು ಕೊಂಡುಕೊಳ್ಳುವುದಕ್ಕೆ ಮೃತನು ಸತ್ವತಃ ನೆರವಾಗಿದ್ದರೆ ಸಾಕು. ಇತರ ಹಿತಸಂಬಂಧಗಳಲ್ಲಿ ವಿಮಾಪಾಲಿಸಿಯು ಬಂದರೆ ಹಿಂದಿನ ೧೪ನೆಯ ಕಲಮಿನ ಪ್ರಕಾರ ವಿಮಾಕಂತುಗಳನ್ನು ಕೊಟ್ಟ ಪ್ರಮಾಣದಲ್ಲಿಯ ಹಣಕ್ಕೆ ವಾರಸಾಕರ ಬೀಳುವುದಿಲ್ಲ. ಇಡಿ ವಿಮಾ ಪಾಲಿಸಿಯ ಹಣದ ಮೇಲೆ ವಾರಸಾಕರವು ಬೀಳುವುದು.

೨ ನೆಯ ಕರಾರಿಗಾಗಿ ಮೃತನ ಮರಣ ಸಮಯಕ್ಕೆ ಆ ಹಿತಸಂಬಂಧದಿಂದ ವಾರಸದಾರರಿಗೆ ಅವರು, ಪಶ್ಚಾತ್ ಜೀವಿತ್ವದ ಮೂಲಕವಾಗಿ ಇಲ್ಲವೆ ಬೇರೆ ರೀತಿಯಿಂದ ವಾರಸದಾರರು ಆಗಿರಲಿ, ಲಾಭದಾಯಕ ಹಿತಸಂಬಂಧವು ಉಂಟಾಗಿರಲೇಬೇಕು ಇಲ್ಲವೆ ಒದಗಿ ಬಂದಿರಬೇಬೇಕು. ವಾರಸದಾರರಿಗೆ ಎಷ್ಟು ಮಟ್ಟಿಗೆ ಮೃತನ ಮರಣದ ನಂತರ ಲಾಭದಾಯಕ ಹಿತಸಂಬಂಧ ಒಂದಿರುವುದೋ ಅಷ್ಟು ಮಟ್ಟಿಗೆ ಅದು ಕರಯೋಗ್ಯವಾಗುವುದು. ಆದುದರಿಂದ ಎಲ್ಲಿ ಮೃತನ ಮರಣದನಂತರ ವಾರಸದಾರರಿಗೆ ಲಾಭದಾಯಕ ಹಿತಸಂಬಂಧ ಒದಗಿ ಬಂದಿಲ್ಲ, ಅಲ್ಲಿ ಈ ಕಲಮಿನ ಪ್ರಕಾರ ಕರ ಬೀಳುವುದಿಲ್ಲ. ಈ ಕಲಮಿನಲ್ಲಿ ಬಳಸಲಾದ ಶಬ್ದಗಳು ಹಿತಸಂಬಂಧ "ಉಂಟಾಗಿರಬೇಕು." "ಒದಗಿ ಬಂದಿರಬೇಕು." ಎಂದು ಇದೆಯೆ ಹೊರತು "ಇಳಿದು ಬಂದಿರಬೇಕು." ಎಂದು ಇಲ್ಲವೆಂಬುದನ್ನು ಗಮನಿಸಬೇಕು. ಹಸ್ತಾಂತರದ ವಿಚಾರವಿಲ್ಲಿ ಇರದೆ ಉಂಟಾಗಿರುವ ಸಂದರ್ಭವಿದೆಯೆಂದು ತಿಳಿಯಬೇಕು. ಉಂಟಾಗಿರುವ ಆಸ್ತಿಯು ಇಲ್ಲವೆ ಹಿತಸಂಬಂಧವು ಮರಣ ಪೂರ್ವದಲ್ಲಿ ಅಸ್ತಿತ್ವದಲ್ಲಿ ಇರದೆ ಇರುವುದರಿಂದ ಹಸ್ತಾಂತರದ ಪ್ರಶ್ನೆಯು ಬರುವುದಿಲ್ಲ.

ವಾರಸಾಕರ ಆಕರಣೆ ಮಾಡುವಾಗ ವಾರಸದಾರರಿಗೆ ಒದಗಿ ಬಂದ ಲಾಭದಾಯಕ ಹಿತಸಂಬಂಧದ ಬೆಲೆಯು ಲಕ್ಷಿಸಲ್ಪಡುವುದು. ಈ ವಾರಸಾ ಕಾಯಿದೆಯ ಪ್ರಕಾರ ಸಾಮಾನ್ಯವಾಗಿ ಮೃತನ ಹಿತಸಂಬಂಧದ ಬೆಲೆಯ ಮೇಲೆ ಕರಹಾಕುವುದು ಕಂಡು ಬಂದರೂ ಈ ಕಲಮು ಆ ನಿಯಮಕ್ಕೆ ಅಪವಾದವೆಂದಾಗಿರುವುದು. ಇಲ್ಲಿ ಮೃತನ ಮರಣದಿಂದ ವಾರಸದಾರರಿಗೆ ಒದಗಿ ಬಂದ ಹಿತಸಂಬಂಧದ ಬೆಲೆಯನ್ನು ಲಕ್ಷಿಸಿ ಕರ ಹಾಕಲಾಗುವುದು. ಪಶ್ಚಾತ್ ಜೀವಿತ್ವದ ಮೂಲಕ ಒದಗಿ ಬರುವ ಇಲ್ಲವೆ ಉಂಟಾಗುವ ಲಾಭದಾಯಕ ಹಿತಸಂಬಂಧವನ್ನು ಬೆಲೆ ಕಟ್ಟುವಾಗ ವಾರಸದಾರರಿಗೆ ಮೃತನ ಮರಣದ ಪೂರ್ವದಲ್ಲಿ ವಾರ್ಷಿಕವೇತನದಲ್ಲಿ ಇಲ್ಲವೆ ಇತರ ಹಿತಸಂಬಂಧದಲ್ಲಿ ನಿರೀಕ್ಷಿತವಾದ ಹಿತಸಂಬಂಧವಿದ್ದಿತೆಂಬುದನ್ನು ಲೆಕ್ಕಕ್ಕೆ ತರಲಾಗದೆಂದು ಈ ಕಲಮಿನ ವಿವರಣೆಯು ಸ್ಪಷ್ಟಪಡಿಸುತ್ತದೆ.

**೧೬ ಮೃತನಿಂದ ಪಡೆದ ಆಸ್ತಿಯೊಳಗಿಂದ ಕೊಂಡುಕೊಳ್ಳಲಾದ ಇಲ್ಲವೆ ಕೊಳ್ಳುವ ವ್ಯವಸ್ಥೆ ಮಾಡಲಾದ ವಾರ್ಷಿಕವೇತನ ಇಲ್ಲವೆ ಇತರ ಹಿತಸಂಬಂಧ**

ಮೃತನಿಂದ ಆ ವಾರ್ಷಿಕವೇತನ ಇಲ್ಲವೆ ಇತರ ಹಿತಸಂಬಂಧಗಳ ಬಗ್ಗೆ ವ್ಯವಸ್ಥೆ ಮಾಡಲಾಗಿದ್ದಂತೆ ಮೃತನಿಂದ ಪಡೆದ ಯಾವುದೇ ಆಸ್ತಿಗೆ ಯಾವುದೇ ಕಾಲಕ್ಕೆ ಯಾರು ಹಕ್ಕುಳ್ಳವನಾಗಿರುವನೋ ಇಲ್ಲವೆ ಯಾವ ಉತ್ಪನ್ನದ ಉಗಮಗಳು ಯಾವುದೇ ಕಾಲಕ್ಕೆ ಮೃತನಿಂದ ಪಡೆದ ಆಸ್ತಿಯಲ್ಲಿ ಸಮಾವೇಶವಾಗಿದ್ದುವೊ ಯಾವುದೇ ವ್ಯಕ್ತಿಯಿಂದ ಇಡಿಯಾಗಿ ಇಲ್ಲವೆ ಭಾಗವಾಗಿ

ಕೊಂಡುಕೊಳ್ಳಲಾದ ಇಲ್ಲವೆ ಕೊಳ್ಳುವ ವ್ಯವಸ್ಥೆ ಮಾಡಲಾದ ಯಾವುದೇ ವಾರ್ಷಿಕವೇತನ ಇಲ್ಲವೆ ಇತರ ಹಿತಸಂಬಂಧದ ವಿಷಯವಾಗಿ ೧೫ ನೆಯ ಕಲಮು ಪರಿಣಾಮಕಾರಿಯಾಗುವುದು: ಇಲ್ಲವೆ ಮೃತನಿಂದ ಪಡೆದ ಎಲ್ಲ ಆಸ್ತಿಯು ಇಡಿಯಾಗಿ ಆ ವಾರ್ಷಿಕ ವೇತನ ಇಲ್ಲವೆ ಇತರ ಹಿತ ಸಂಬಂಧದ ವ್ಯವಸ್ಥೆಗಾಗಿ (ಪರ್ಯಾಪ್ತ) ಸಾಕಷ್ಟಾಗುವದಿಲ್ಲವೆಂದು ನಿಯಂತ್ರ ಕನಿಗೆ ಸಮಾಧಾನವಾಗುವಂತೆ ಸಿದ್ಧ ಮಾಡಲ್ಪಟ್ಟಿದ್ದರೆ, ಸಾಕಷ್ಟಾಗುವುದಿಲ್ಲ ವೆಂದು ಸಿದ್ಧಮಾಡಲ್ಪಟ್ಟ ಪ್ರಮಾಣದ ವ್ಯಾಪ್ತಿಯಷ್ಟು ಮೃತನಿಂದ ಅಂತಹ ವಾರ್ಷಿಕವೇತನ ಇಲ್ಲವೆ ಇತರ ಹಿತಸಂಬಂಧವು ಕಡಿಮೆ ಹಣದಷ್ಟು ವ್ಯವಸ್ಥೆ ಮಾಡಲಾಗಿದ್ದಂತೆ ಎಂದು ಆ ವಾರ್ಷಿಕವೇತನ ಇಲ್ಲವೆ ಹಿತಸಂಬಂಧದ ವಿಷಯವಾಗಿ ೧೫ ನೆಯ ಕಲಮು ಪರಿಣಾಮಕಾರಿಯಾಗುವುದು.

ಆದರೆ, ಈ ಮೊದಲು ಹೇಳಿದಂತಹ ಅಪರ್ಯಾಪ್ತವು ಉಂಟಾಗುವು ದೆಂಬುದನ್ನು ನಿಶ್ಚಿತಗೊಳಿಸುವ ಉದ್ದೇಶಕ್ಕಾಗಿ ಮತ್ತು ಅದರ ವ್ಯಾಪ್ತಿಯನ್ನು ನಿರ್ಣಯಿಸುವುದಕ್ಕಾಗಿ ಮೃತನಿಂದ ಪಡೆದ ಆಸ್ತಿಯೊಳಗಿಂದ, ಅದರ ಯಾವುದೇ ಭಾಗವು, ಯಾವುದರ ವಿನ್ಯಾಸವು ಇಲ್ಲವೆ ಅದು ಯಾವುದನ್ನು ಪ್ರತಿನಿಧಿಸುವುದು ಅದರ ವಿನ್ಯಾಸವು ವಾರ್ಷಿಕವೇತನ ಇಲ್ಲವೆ ಇತರ ಹಿತಸಂಬಂಧವನ್ನು ಕೊಂಡು ಕೊಳ್ಳುವುದನ್ನು ಇಲ್ಲವೆ ಕೊಳ್ಳುವ ವ್ಯವಸ್ಥೆಯನ್ನು ನಿರ್ದೇಶಿಸಿ, ಇಲ್ಲವೆ ಅದನ್ನು ಅನುಕೂಲಿಸುವುದಕ್ಕೆ ಇಲ್ಲವೆ ಸಾಧ್ಯವಾಗುವಂತೆ ಮಾಡುವುದಕ್ಕೆ, ಇಲ್ಲವೆ ಹೀಗೆ ಮಾಡುವದಕ್ಕಾಗಿ ಉಂಟಾದ ವೆಚ್ಚವನ್ನು ತುಂಬಿಕೊಳ್ಳುವುದಕ್ಕಾಗಿ ಮಾಡಿಲ್ಲವೆಂದು ನಿಯಂತ್ರಕನಿಗೆ ಸಮಾಧಾನವಾಗುವಂತೆ ಸಿದ್ಧಮಾಡ ಲ್ಪಟ್ಟಿರಬೇಕು.

(೨) ಈ ಕಲಮಿನಲ್ಲಿ ಈ ಕೆಳಗಿನ ಪದಪ್ರಯೋಗಗಳಿಗೆ ಅನುಕ್ರಮ ವಾಗಿ ಅವುಗಳಿಗೆ ಕೊಡಲಾದ ಈ ಅರ್ಥವಾಗುವುದು. ಹೇಗೆಂದರೆ:—

(ಅ) "ಮೃತನಿಂದ ಪಡೆದ ಆಸ್ತಿ" ಇದರ ಅರ್ಥವು ಮೃತನಿಂದ ತಾನೊಬ್ಬನಾಗಿಯೆ ಆಗಲಿ, ಇಲ್ಲವೆ ಇನ್ನೊಬ್ಬನ ಜತೆಗೂಡಿಯಾಗಲಿ ಇಲ್ಲವೆ ಇನ್ನೊಬ್ಬನೊಡನೆ ವ್ಯವಸ್ಥೆ ಮಾಡಿಕೊಂಡಾಗಲಿ, ಹಣದಿಂದ ಇಲ್ಲವೆ ಹಣದ ಪ್ರತಿ ಕಿಮ್ಮತ್ತಿನಿಂದಾಗಲಿ ತನ್ನ ಸ್ವಂತದ ಉಪಯೋಗ ಇಲ್ಲವೆ ಲಾಭಕ್ಕಾಗಿ ಪೂರ್ಣಪ್ರತಿ ಬೆಲೆ ಕೊಟ್ಟ ರೂಪವನ್ನು ಬಿಟ್ಟು ಬೇರೆ ರೀತಿಯಿಂದ ಮಾಡ ಲಾದ ವಿನ್ಯಾಸದ ವಿಷಯವಾಗಿರುವ ಆಸ್ತಿಯೆಂದು ಆಗುವುದು. ಇಲ್ಲವೆ ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ಮತ್ತು ಒಂದು ಇಲ್ಲವೆ ಹೆಚ್ಚು ಸಂಖ್ಯೆಯಲ್ಲಿ ಮಧ್ಯಂತರವಾಗಿ ಮಾಡಿದ ವಿನ್ಯಾಸದ ಸತ್ವದಮೂಲಕವಾಗಲಿ

ಮತ್ತು ಇಂತಹ ಮಧ್ಯಂತರ ವಿನ್ಯಾಸವು ಪೂರ್ಣ ಇಲ್ಲವೆ ಅಪೂರ್ಣ ಪ್ರತಿ ಬೆಲೆ ಕೊಟ್ಟು ಮಾಡಿದುದಾಗಿರಲಿ, ಅಂತಹ ವಿನ್ಯಾಸದ ವಿಷಯವಾಗಿರುವಂತಹ ಯಾವುದೇ ಆಸ್ತಿಯು ಪ್ರತಿನಿಧಿಸಿದ ಆಸ್ತಿಎಂದು ಅರ್ಥವಾಗುವುದು.

ಆದರೆ, ಮೊದಲು ಹೇಳಿದ ವಿನ್ಯಾಸವು ಹಣ ಇಲ್ಲವೆ ಹಣದ ಕಿಮ್ಮತ್ತಿನಿಂದ ಪೂರ್ಣ ಪ್ರತಿಬೆಲೆಗಾಗಿ ಮೃತನಿಗೆ ಅವನ ಸ್ವಂತದ ಉಪಯೋಗ ಇಲ್ಲವೆ ಲಾಭಕ್ಕಾಗಿ ಕೊಡಲ್ಪಟ್ಟಿರಬೇಕು. ಮತ್ತು ಆ ವಿನ್ಯಾಸವು ಸಂಬಂಧಾತ್ಮಕ ಕ್ರಿಯೆಗಳ ಭಾಗವಾಗಿರುವುದಿಲ್ಲವೆಂದು ನಿಯಂತ್ರಕನಿಗೆ ಸಮಾಧಾನವಾಗುವ ಹಾಗೆ ಸಿದ್ಧಮಾಡಲ್ಪಟ್ಟಿರಬೇಕು. ಆಗ ಆ ವಿನ್ಯಾಸವು ಈ ಕೆಳಗಿನವನ್ನು ಒಳಗೊಳ್ಳುವುದು :

(ಅ) ತಾನು ಒಬ್ಬನೆಯಾಗಲಿ, ಇಲ್ಲವೆ ಇನ್ನೊಬ್ಬರ ಜತೆಯಾಗಿಯಾಗಲಿ ಇಲ್ಲವೆ ಇನ್ನೊಬ್ಬರೊಡನೆ ಒಂದು ವ್ಯವಸ್ಥೆಯಿಂದಾಗಲಿ, ಹಣ ಇಲ್ಲವೆ ಹಣದ ಕಿಮ್ಮತ್ತಿನ ಪ್ರತಿಬೆಲೆಗಾಗಿ ಆಗಿರದೆ ಮೃತನಿಗೆ ಅವನ ಸ್ವಂತದ ಉಪಯೋಗ ಇಲ್ಲವೆ ಲಾಭಕ್ಕಾಗಿ ಕೊಡಲಾದ ಮೃತನಿಂದ ಮಾಡಿದ ವಿನ್ಯಾಸವು, ಇಲ್ಲವೆ,

(ಬ) ಮೃತನ ಆಸ್ತಿಯ ಬೆಲೆಯನ್ನು ಕಡಿಮೆ ಮಾಡುವುದಕ್ಕಾಗಿ ಕಾರ್ಯಕಾರಿಯಾಗುವಂತಹ ಬೇರೆ ಯಾವುದೇ ವ್ಯಕ್ತಿಯಿಂದ ಮಾಡಲಾದ ವಿನ್ಯಾಸವು,

ಆಗ ವಾರಸಾಕರವನ್ನು ಹಾಕಬೇಕೋ ಬಾರದೋ ಎಂದು ವಿಚಾರಿಸಲ್ಪಡುವಾಗ ಮೊದಲು ಹೇಳಲಾದ ವಿನ್ಯಾಸವು ಅದಕ್ಕೆ ಈ ಕಕ್ಷೆಯು ಅನ್ವಯಿಸದಿಲ್ಲವೆಂಬುವಂತೆ ಲೆಕ್ಕದಿಂದ ಬಿಡಲ್ಪಡಬೇಕು.

(ಬ) "ವಿನ್ಯಾಸ" ಶಬ್ದವು ಯಾವುದೇ ವಿಶ್ವಸ್ತನಿಧಿ, ಕರಾರುಪತ್ರ, ಒಪ್ಪಿಗೆಪತ್ರ ಇಲ್ಲವೆ ವ್ಯವಸ್ಥೆ ಇವುಗಳನ್ನು ಒಳಗೊಳ್ಳುವುದು; ಮತ್ತು

(ಕ) "ವಿಷಯವು" ಶಬ್ದವು ಯಾವುದೇ ವಿನ್ಯಾಸದ ಸಂಬಂಧವಾಗಿ ಯಾವುದೇ ವಾರ್ಷಿಕ ಇಲ್ಲವೆ ನಿಯತಕಾಲಿಕವಾಗಿ ವಿನ್ಯಾಸದನ್ವಯವಾಗಿ ಇಲ್ಲವೆ ಅದರ ಸತ್ವದ ಮೂಲಕ ಮಾಡಲಾದ ಸಂದಾಯ ಇಲ್ಲವೆ ಮಾಡಬೇಕಾಗಿದ್ದ ಸಂದಾಯ ಇವುಗಳನ್ನು ಒಳಗೊಳ್ಳುವುದು.

(೩) ಮೃತನ ಮರಣದ ಸಮಯಕ್ಕೆ ಇಳಿದು ಬರುವ ಆಸ್ತಿಯಲ್ಲಿ ಈ ಕಲಮಿನ ಸತ್ವದ ಮೂಲಕ ಒಳಗೊಳ್ಳಲಾದ ಯಾವುದೇ ಆಸ್ತಿಯಲ್ಲಿ ಹಿತಸಂಬಂಧವಿದ್ದಿತೆಂದು ೩ಳನೆಯ ಕಲಮಿನ ಉದ್ದೇಶಗಳಿಗಾಗಿ ಗಣಿಸಲ್ಪಡಲಾಗುವುದು.

**ವಿವೇಚನೆ:**

ವಾರ್ಷಿಕ ವೇತನ ಮತ್ತು ಇತರ ಹಿತಸಂಬಂಧಗಳು ಅವು ಮೃತನಿಂದ ಪ್ರತ್ಯಕ್ಷವಾಗಿ ವ್ಯವಸ್ಥೆ ಮಾಡಲ್ಪಡದಿದ್ದರೂ ಅವನಿಂದ ಪಡೆದ ಆಸ್ತಿಯಲ್ಲಿಂದ ಇಡಿಯಾಗಿ ಇಲ್ಲವೆ ಭಾಗವಾಗಿ ಸತ್ವತಃ ಒದಗಿ ಬಂದುವೆಂದು ಆಗಿರುವಂತಹಗಳನ್ನು ಕರಯೋಗ್ಯ ಮಾಡುವ ಉದ್ದೇಶದಿಂದ ಈ ಕಲಮು ರೂಪಿಸಲ್ಪಟ್ಟಿದೆ. ಈ ಕಲಮು ಹೇಗೆ ಕಾರ್ಯಕಾರಿಯಾಗುವುದೆಂಬುದನ್ನು ಈ ಉದಾಹರಣೆಯು ವಿಶದ ಮಾಡುವುದು :

ಮೃತನು ತನ್ನ ಮಕ್ಕಳಿಗೆ ೧೦,೦೦೦ ರೂಪಾಯಿಗಳನ್ನು ಕೊಡುವನು. ಆ ಮಕ್ಕಳು ಆ ಹಣದಿಂದ ಒಂದು ಕಂಪನಿಯಲ್ಲಿಯ ಪಾಲುಗಳನ್ನು ಕೊಳ್ಳುವರು. ಆ ಕಂಪನಿಯು ಮೃತನಿಗೆ ೧೦೦೦೦|– ರೂಪಾಯಿ ಸಾಲವಾಗಿ ಕೊಡುತ್ತದೆ. ಆ ಸಾಲದ ಮೇಲಿನ ಬಡ್ಡಿಯನ್ನು ಮೃತನ ಜೀವ ವಿಮೆಯ ಪಾಲಿಸಿಯ ಕಂತುಗಳನ್ನು ಕೊಡಲು ಉಪಯೋಗಿಸುತ್ತದೆ. ಆ ಪಾಲಿಸಿಯ ಹಣವು ಮೃತನಿಂದ ವ್ಯವಸ್ಥೆ ಮಾಡಲಾದುದೆಂದು ಈ ಕಲಮು ತಿಳಿಯುತ್ತದೆ.

೧೫ ನೆಯ ಕಲಮಿನಲ್ಲಿ ಯಾವುದೇ ವಾರ್ಷಿಕ ವೇತನ, ಇಲ್ಲವೆ ಇತರ ಹಿತಸಂಬಂಧವು ಮೃತನಿಂದ ಒಬ್ಬನಿಂದ ಇಲ್ಲವೆ ಇನ್ನೊಬ್ಬರ ಜತೆಯಾಗಿ ಇಲ್ಲವೆ ಇನ್ನೊಬ್ಬನೊಡನೆ ವ್ಯವಸ್ಥೆಯಿಂದ ಕೊಂಡುಕೊಳ್ಳಲ್ಪಟ್ಟಿದ್ದರೆ ಇಲ್ಲವೆ ಕೊಳ್ಳುವ ವ್ಯವಸ್ಥೆ ಮಾಡಲ್ಪಟ್ಟಿದ್ದರೆ ಅದು ಮೃತನ ಮರಣದ ಸಮಯಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು, ಎಂದು ಹೇಳಲಾಗಿದೆ. ಮೃತನು ಇನ್ನೊಬ್ಬರ ಕೈಯಲ್ಲಿ ಯಾವುದೇ ಕಟ್ಟುಕರಾರುಗಳಿಲ್ಲದೆ ಧನವನ್ನು ಇರಿಸಿ ಅದರಿಂದ ವಾರ್ಷಿಕ ವೇತನ ಇಲ್ಲವೆ ಇತರ ಹಿತಸಂಬಂಧವನ್ನು ಕೊಂಡುಕೊಳ್ಳುವ ವ್ಯವಸ್ಥೆ ಮಾಡಿದ್ದರೆ, ೧೫ ನೆಯ ಕಲಮಿನ ಪ್ರಕಾರ ಏನೂ ಮಾಡಲು ಬರುತ್ತಿದ್ದಿಲ್ಲ ಅದಕ್ಕಾಗಿ ೧೬ ನೆಯ ಕಲಮು ಬಂದಿದೆ. ಇದು ಮೇಲೆ ಸೂಚಿದಂತಹ ಒಳಹೊಡೆತಗಳನ್ನು ತಡೆಯುತ್ತದೆ.

೧೬ ನೆಯ ಕಲಮು ೧೫ ನೆಯ ಕಲಮಿನ ವ್ಯಾಪ್ತಿಯನ್ನು, ಹೆಚ್ಚಿಸುತ್ತದೆ. ೧೫ ನೆಯ ಕಲಮಿನಲ್ಲಿಯಂತೆ ೧೬ ನೆಯ ಕಲಮಿನಲ್ಲಿಯಾದರೂ ಮೃತನ ಮರಣದ ಮೂಲಕ ಲಾಭದಾಯಕ ಹಿತಸಂಬಂಧವು ಒದಗಿ ಬಂದಿರಬೇಕು ಇಲ್ಲವೆ ಉಂಟಾಗಿರಬೇಕು. ಇಂತಹ ಹಿತಸಂಬಂಧವನ್ನು ನಿರ್ಮಾಣಮಾಡಲು ಅಪ್ರತ್ಯಕ್ಷವಾಗಿಯಾದರೂ ಮೃತನಿಂದ ಆರ್ಥಿಕ ಸಹಾಯ ದೊರೆತ್ತಿದ್ದರೆ ಸಾಕು. ಈ ಕಲಮು ಬಹು ವ್ಯಾಪಕವಾಗಿದೆ. ಮೃತನಿಂದ ಪಡೆದ ಆಸ್ತಿಯು ವಾರ್ಷಿಕ ವೇತನವನ್ನು ಕೊಳ್ಳಲು ಪರ್ಯಾಪ್ತವಾಗುವುದಿಲ್ಲವೆಂದು ಸಿದ್ಧಮಾಡಿತೋರಿಸಿದರೆ, ಕೊರತೆಯೆಷ್ಟಾಗುವುದು ಎಂಬುದನ್ನು ನಿರ್ಧರಿಸ್ಸಿ ಆ ಕೊರತೆಯ ಪ್ರಮಾಣದ ಮೇಲಿಂದ ವಾರ್ಷಿಕ ವೇತನದಲ್ಲಿ ಎಷ್ಟು ಭಾಗ ಮರಣದ ಮೂಲಕ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು,

ಎಂಬುದನ್ನು ನಿರ್ಣಯಿಸಲಾಗುವುದು. ಈ ಬಗೆಯ ಕೊರತೆಯನ್ನು ನಿರ್ಧರಿಸು ವಾಗ, ವಾರ್ಷಿಕ ವೇತನ ಇಲ್ಲವೆ ಇತರ ಹಿತಸಂಬಂಧವನ್ನು ಕೊಂಡುಕೊಳ್ಳಲು ಮೃತನಿಂದ ಆ ಆಸ್ತಿಯು ವಿನ್ಯಾಸಮಾಡಲ್ಪಟ್ಟಿಲ್ಲವೆಂದು ನಿಯಂತ್ರಕನಿಗೆ ಸಮಾಧಾನ ವಾಗುವಂತೆ ತೋರಿಸಬೇಕಾಗುವುದು. ಆದ್ದರಿಂದ ವಾರ್ಷಿಕ ವೇತನ ಇಲ್ಲವೆ ಇತರ ಹಿತಸಂಬಂಧವನ್ನು ಕೊಂಡುಕೊಳ್ಳಲು ಮೃತನಿಂದ ಪಡೆದ ಆಸ್ತಿಯು ಪರ್ಯಾಪ್ತ ವಾಗಿದ್ದಿಲ್ಲವೆಂದು ಕರ ಕೊಡುವ ವ್ಯಕ್ತಿಯು ತೋರಬೇಕಾಗುವುದು. ಕರಪಾತ್ರತೆಯು ಎಷ್ಟು ಮಟ್ಟಿಗೆ ಕಡಿಮೆಯಾಗುವುದು ಎಂಬುದನ್ನು ತೋರುವುದು ಕರಕೊಡುವವನ ಹೊಣೆಯಾಗಿದೆ. ಆಸ್ತಿಯಲ್ಲಿ ಕೊರತೆ ಹೇಗೆ ಉಂಟಾಗಿರುವುದು ಎಂಬುದನ್ನು ತೋರಿಸಲು ಈ ಉದಾಹರಣೆಯು ಉಪಯುಕ್ತವಾಗುವುದು.

**ಉದಾಹರಣೆ:**

ಅ ನು ತನ್ನ ಸ್ವಂತದ ಲಾಭಕ್ಕಾಗಿ ಮೃತನ ಜೀವವಿಮೆಯೊಂದನ್ನು ೧೦೦೦೦೦ ರೂಪಾಯಿಗೆ ಮಾಡಿ ಇಟ್ಟಿದ್ದನು. ಈ ಜೀವವಿಮೆಯ ಪಾಲಿಸಿಯ ಮೇಲೆ ೫೦೦೦೦/- ವೆಚ್ಚಮಾಡಿದ್ದನು. ಮೃತನಿಂದ ಅ ನು ಪಡೆದ ಆಸ್ತಿಯ ವಿವರ ಹೀಗೆ ಅದೆ.

(೧) ಅ ನಿಗೆ ವಾಸಿಸಲು ಕೊಟ್ಟ ಒಂದು ಮನೆ.

(೨) ಅ ನಿಗೆ ೧೫೦೦೦/– ರೂಪಾಯಿಗಳನ್ನು ಯಾವ ಕಾರಣವನ್ನು ತೋರಿಸದೆ ಕೊಟ್ಟಿದೆ.

(೩) ಅ ನ ಹೆಂಡತಿಗೆ ೫೦೦೦/– ರೂಪಾಯಿಗಳನ್ನು ಯಾವ ಕಾರಣ ವನ್ನು ತೋರಿಸದೆ ಕೊಟ್ಟಿದೆ.

(೪) ಅ ನ ಮಗನ ಶಿಕ್ಷಣದ ವೆಚ್ಚಕ್ಕೆಂದು ೨೦,೦೦೦/– ರೂಪಾಯಿ ಕೊಟ್ಟಿದೆ. ಇದನ್ನು ಅ ನು ಜೀವವಿಮೆಯ ಪಾಲಿಸಿ ಕಂತುಗಳನ್ನು ಕೊಡು ವಾಗ ಕೊಟ್ಟಿದ್ದನು.

ಇಲ್ಲಿ ಅ ನು ಸಿದ್ಧಮಾಡಿ ತೋರಿಸಬೇಕಾದ ಸಂಗತಿಗಳು ಇಷ್ಟು. ಮನೆ ಯನ್ನು ಅ ನಿಗೆ ಕೇವಲ ವಾಸಮಾಡಲಿಕ್ಕೆ ಕೊಟ್ಟಿದ್ದನೆಂದು ತೋರಿದರೆ, ಆ ಮನೆಯನ್ನು ಲೆಕ್ಕಕ್ಕೆ ಹಿಡಿಯಲಾಗುವುದಿಲ್ಲ. ಇನ್ನುಳಿದ ೪೦೦೦೦ ರೂಪಾ ಯಿಯು ಮೃತನಿಂದ ಪಡೆದ ಆಸ್ತಿಯೆಂದು ಆಗುವುದು. ಅದರಿಂದ ೧೦೦೦೦ ರೂಪಾಯಿ ಕೊರತೆ ಬಿದ್ದಿತು. ಅ ನು ೫೦೦೦೦ ರೂ. ವೆಚ್ಚಮಾಡಿದ್ದು ಅದನ್ನೂ ಮೃತನಿಂದ ಪಡೆದಿದ್ದರೆ ೧,೦೦,೦೦೦/– ರೂಪಾಯಿಯೂ ಕರಪಾತ್ರ ವಾಗುತ್ತಿದ್ದಿತು. ಈಗ ೪೦೦೦೦ ರೂಪಾಯಿ ಮಾತ್ರ ಪಡೆದಿದ್ದಾನೆ. ೧೦೦೦೦ ರೂ. ಕೊರತೆಯ ಪ್ರಮಾಣದಿಂದ ಕರಪಾತ್ರವಾಗುವ ಹಣವು ಕೇವಲ

೮೦,೦೦೦/– ಆಗುವುದು. ಅ ನು ಪಡೆದ ೪೦೦೦೦/– ರೂಪಾಯಿಗಳು ಕೂಡ ವಿಮಾ ಪಾಲಿಸಿಯನ್ನು ಇಟ್ಟುಕೊಳ್ಳುವುದಕ್ಕೆ ವೆಚ್ಚಮಾಡಿಲ್ಲವೆಂದು ಸಿದ್ಧಮಾಡಿಕೊಡುವುದು ಅ ನ ಹೊಣೆಯು. ಅ ನು ನಿಯಂತ್ರಕನಿಗೆ ಸಮಾಧಾನವಾಗುವ ಹಾಗೆ ಸಿದ್ಧಮಾಡಿಕೊಟ್ಟರೆ ವಿಮಾಪಾಲಿಸಿಯು ಮೃತನಿಂದ ಪಡೆದ ಆಸ್ತಿಯ ಮೂಲಕ ಉಂಟಾಗಿಲ್ಲವೆಂದು ಕಂಡುಬರುವುದರಿಂದ ಕರ ಮುಕ್ತವಾಗುವುದು.

ಉಪಕಲಮು (೬) ರಲ್ಲಿ ಈ ಕಲಮಿನ ಅರ್ಥಕ್ಕಾಗಿಯೆ ಕೆಲ ಶಬ್ದಗಳ ಮತ್ತು ಪದ ಪ್ರಯೋಗಗಳ ಅರ್ಥವಿವರಣೆ ಮಾಡಿದೆ. ಅದನ್ನು ಗಮನಿಸಬೇಕು.

## ಕಂಪನಿಗಳಿಗೆ ಮಾಡಿದ ಹಸ್ತಾಂತರಗಳ ಸಂಬಂಧವಾಗಿ ವಿಶೇಷ ಕಲಮುಗಳು

### ೧೭ ನಿಯಂತ್ರಿತ ಕಂಪನಿಗೆ ಹಸ್ತಾಂತರಿಸಲಾದ ಆಸ್ತಿ

(೧) ಮೃತನು ಯಾವುದೇ ಆಸ್ತಿಯನ್ನು (ಮರಣದ ಮೂಲಕ ಮುಕ್ತಾಯವಾಗುವ ಹಿತಸಂಬಂಧವಲ್ಲದೆ ಇಲ್ಲವೆ ಧರ್ಮದರ್ಶಿಯೆಂದು ಪದ ಸಾಮರ್ಥ್ಯದ ಮೂಲಕ ಯಾವುದನ್ನು ಹಸ್ತಾಂತರಿಸಿದನೋ ಅದನ್ನು ಬಿಟ್ಟು) ಒಂದು ನಿಯಂತ್ರಿತ ಕಂಪನಿಗೆ ಹಸ್ತಾಂತರಿಸಿದಾಗ ಮತ್ತು ಆ ಕಂಪನಿಯಿಂದ ಮರಣದಲ್ಲಿ ಮುಕ್ತಾಯವಾಗುವ ಮೂರು ವರುಷಗಳಲ್ಲಿ ಮೃತನಿಗೆ ಯಾವುದೇ ಲಾಭವು ಒದಗಿ ಬರುವಾಗ ವಾರಸಾಕರದ ಉದ್ದೇಶಕ್ಕಾಗಿ ಕಂಪನಿಯ ಸೊತ್ತುಗಳು ಉಪಕಲಮು (೨) ರನುಸಾರವಾಗಿ ಮೃತನ ಮರಣದ ಮೂಲಕ ಇಳಿದು ಬರುವ ಆಸ್ತಿಯಲ್ಲಿ ಒಳಗೊಂಡಿವೆಯೆಂದು ಗಣಿಸಲ್ಪಡಲಾಗುವುದು.

(೨) ಕಂಪನಿಯ ಸೊತ್ತುಗಳು ಒಳಗೊಂಡಿವೆಯೆಂದು ಗಣಿಸಲ್ಪಡಲಾಗಿದೆಯೆಂದು ಈ ಮೊದಲೆ ಹೇಳಲಾದುದರ ವ್ಯಾಪ್ತಿಯು ಕಂಪನಿಯಿಂದ ಕಳೆದ ಮೂರು ಲೆಕ್ಕದ ವರುಷಗಳಲ್ಲಿ ಮೃತನಿಗೆ ಬಂದ ಲಾಭಗಳ ಮೊತ್ತವನ್ನು ಆ ವರುಷಗಳಲ್ಲಿಯ ಕಂಪನಿಯ ನಿಕ್ಕಿ ಆದಾಯದ ಮೊತ್ತಕ್ಕೆ ಹೋಲಿಸಿ ನಿರ್ಧರಿಸಲಾದ ಪ್ರಮಾಣದಷ್ಟು ಆಗುವುದು.

(ಅ) ಆದರೆ ಆ ಲೆಕ್ಕದ ವರುಷಗಳಲ್ಲಿ ಯಾವುದೇ ವರುಷ ಕಂಪನಿಯು ಹಾನಿಗೆ ಒಳಗಾಗಿದ್ದರೆ, ಆ ಕಂಪನಿಯ ನಿಕ್ಕಿ ಆದಾಯದ ಮೊತ್ತವನ್ನು ನಿಶ್ಚಿತಗೊಳಿಸುವಾಗ ಹಾನಿಯ ಮೊತ್ತವು ಕಳೆಯಲ್ಪಡಲಾಗುವುದು.

(ಬ) ಮೇಲೆ ಹೇಳಲಾದ ಲೆಕ್ಕದ ವರುಷಗಳಲ್ಲಿಯ ಕೊನೆಯ ವರುಷದಲ್ಲಿ ಇಲ್ಲವೆ ಕೊನೆಯ ವರುಷದ ಹಿಂದಿನ ವರುಷದಲ್ಲಿ ಕಂಪನಿಯು ಅಸ್ತಿತ್ವದಲ್ಲಿ ಬಂದಿರುವಾಗ ಈ ಉಪಕಲಮಿನಲ್ಲಿ ನಿರ್ದೇಶಿಸಲಾದ ಲೆಕ್ಕದ ವರುಷಗಳು ಎಂದರೆ ಆ ಕೊನೆಯ ವರುಷ ಇಲ್ಲವೆ ಎರಡು ವರುಷ ಎಂದು ಸಂದರ್ಭಾನುಸಾರವಾಗಿ ಅರ್ಥ ಹಚ್ಚಲ್ಪಡಲಾಗುವುದು.

(೩) ಮೃತನ ಮರಣದ ಮೂಲಕ ಇಳಿದು ಬರುವ ಆಸ್ತಿಯಲ್ಲಿ ಒಳಗೊಂಡಿವೆಯೆಂದು ಈ ಕಲಮಿನ ಸತ್ವದಿಂದ ಗಣಿಸಲ್ಪಡಲಾಗುವ ಕಂಪನಿಯ ಸೊತ್ತುಗಳಲ್ಲಿ ಕಂಪನಿಯು ಲೆಕ್ಕದ ವರುಷಗಳಲ್ಲಿಯ ಮೊದಲನೆಯ ವರುಷ ಮತ್ತು ಮೃತನ ಮರಣದ ಸಮಯ ಈ ನಡುವಣ ಕಾಲಾವಧಿಯಲ್ಲಿ ಯಾವುದೇ ಕಾಲಕ್ಕೆ ವಿನ್ಯಾಸ ಮಾಡಿದ ಇಲ್ಲವೆ ಹಂಚಿಕೊಟ್ಟ, ಯಾವುದೇ ಸೊತ್ತುಗಳು ಸಮಾವೇಶವಾಗಿರುವುವು.

(ಅ) ಅವು ಕಂಪನಿಯ ಪಾಲುಗಳಿಗೆ ಇಲ್ಲವೆ ಡಿಬೆಂಚರುಗಳಿಗೆ ಹೊಂದಿಕೊಂಡ ಹಕ್ಕುಗಳ ಪರಿಹಾರಕ್ಕೆ ಆಗಿರಲಿ, ಇಲ್ಲವೆ

(ಬ) ಈ ಕೆಳಗೆ ಹೇಳಿದುದನ್ನು ಹೊರ್ತುಪಡಿಸಿ ಬೇರೆ ರೀತಿಯಿಂದ ಆಗಿರಲಿ, ಅದು ಹೇಗೆಂದರೆ: ಕಂಪನಿಯು ತನ್ನ ಸ್ವಂತದ ಉಪಯೋಗ ಇಲ್ಲವೆ ಹಿತದ ಸಲುವಾಗಿ ಹಣ ಇಲ್ಲವೆ ಹಣದ ಕಿಮ್ಮತ್ತಿನ ಪ್ರತಿ ಬೆಲೆಗಾಗಿ ಮಾರಾಟದ ಕಂಪನಿಯಿಂದ ಪಡೆಯಲ್ಪಟ್ಟಿರಲಿ, ಇಲ್ಲವೆ ಯಾವುದೇ ಕಾಯಿದೆಯಿಂದ ಇಲ್ಲವೆ ಕಾಯಿದೆಯನ್ವಯವಾಗಿ ಹೇಳಲಾದ ಕರ, ಇಲ್ಲವೆ ತೆರಿಗೆ ಇಲ್ಲವೆ ಇತರ ಹೊಣೆಗಾರಿಕೆಗಳ ಭಾರ ಕಡಿಮೆ ಮಾಡಿಕೊಳ್ಳುವದಕ್ಕಾಗಿರಲಿ, ಇಲ್ಲವೆ ನೊಂದಪಕ್ಷದವರೊಡನೆ ಸಾಮೀಲಾಗದೆ, ಯಾವುದೇ ದಿವಾಣಿ ಅನ್ಯಾಯಕ್ಕಾಗಿ ಇರುವ ಹೊಣೆಗಾರಿಕೆ ಇಲ್ಲವೆ ದಂಡ ಇಲ್ಲವೆ ತಪ್ಪುದಂಡವನ್ನು ಕೊಡುವುದಕ್ಕಾಗಿ ಇರಲಿ, ಮರಣ ಕಾಲಕ್ಕೆ ನಡೆದ ಇಲ್ಲವೆ ಮರಣ ಪೂರ್ವದಲ್ಲಿ ಮುಗಿದ ಕಂಪನಿ ಮುಕ್ತಾಯದ ಕ್ರಿಯೆಗಳಲ್ಲಿ ವಿನ್ಯಾಸ ಮಾಡಿದ ಇಲ್ಲವೆ ಹಂಚಿಕೊಟ್ಟ ಸೊತ್ತುಗಳನ್ನು ಒಳಗೊಂಡ,

ಆದರೆ, ಯಾವುದೊಂದು ಲೆಕ್ಕದ ವರುಷದಲ್ಲಿ ಇಲ್ಲವೆ ಕಳೆದ ಲೆಕ್ಕದ ವರುಷದ ಕೊನೆ ಮತ್ತುಮೃತನ ಮರಣದ ಸಮಯದ ನಡುವಣ ಕಾಲಾವಧಿಯಲ್ಲಿ ಹೀಗೆ ಸಂದಾಯ ಮಾಡಿದ ಹಣದ ಮೊತ್ತವು ಆ ವರುಷದಲ್ಲಿ ಇಲ್ಲವೆ ಆ ಕಾಲಾವಧಿಯಲ್ಲಿ ಕಂಪನಿಯ ಆದಾಯದ ಮೊತ್ತವನ್ನು ಮೀರಿದ್ದಂತೆ ಯಾವುದರಿಂದ ಆದಾಯಕರವು ಕಡಿದುಕೊಳ್ಳಲ್ಪಡಲು ಯೋಗ್ಯ

ವಾಗಿದ್ದಿತೋ ಇಲ್ಲವೆ ಆದಾಯಕರ ಪಾತ್ರವಾಗಿದ್ದಿತೋ ಅಂತಹ ಹಣ ಸಂದಾಯದ ರೀತಿಯಲ್ಲಿ ವಿನ್ಯಾಸಮಾಡಿದ ಇಲ್ಲವೆ ಹಂಚಲಾದ ಸೊತ್ತುಗಳಿಗೆ ಈ ಉಪಕಲಮು ಅನ್ವಯಿಸುವುದಿಲ್ಲ.

(ಳ) (1) ನಿಯಂತ್ರಿತ ಕಂಪನಿ ಎಂದರೆ, ಈ ಕಾಯಿದೆಯ ಕಕ್ಷೆಗಳು ಯಾವಾಗಲೂ ಜಾರಿಯಲ್ಲಿದ್ದರೆ, ಯಾವದೇ ಪ್ರಾಸಂಗಿಕ ಸಮಯಕ್ಕೆ ಐದು ವ್ಯಕ್ತಿಗಳಕಿಂತ ಹೆಚ್ಚು ಆಗದಷ್ಟು ಜನರ ನಿಯಂತ್ರಣದಲ್ಲಿದ್ದ ಇಲ್ಲವೆ ನಿಯಂತ್ರಣದಲ್ಲಿದೆಯೆಂದು ಗಣಿಸಲ್ಪಡಲಾದ ಮತ್ತು ಕಂಪನಿಯು ಅಧೀನ ಕಂಪನಿಯಾಗಿರದ ಇಲ್ಲವೆ ಸಾರ್ವಜನಿಕರು ಸತ್ವತಃ ಹಿತಸಂಬಂಧವುಳ್ಳವರಾಗಿರುವ ಕಂಪನಿಯಾಗಿರದ ಯಾವುದೇ ಕಂಪನಿಯು.

**ವಿವರಣೆ:** ಈ ಉಪಕಲಮಿನ ಉದ್ದೇಶಗಳಿಗಾಗಿ—

(ಅ) ಅದರಲ್ಲಿಯ ಪಾಲುಗಳ ಲಾಭದಾಯಕ ಒಡೆತನದ ಕಾರಣದಿಂದ, ಆ ಕಂಪನಿಯ ನಿಯಂತ್ರಣವು, ಈ ಉಪಕಲಮು ಅನ್ವಯಿಸುವ ಕಂಪನಿಯು ಆಗಿರದೆ ಇರುವಂತಹ ಕಂಪನಿಯ ಕೈಯಲ್ಲಿದ್ದರೆ, ಇಲ್ಲವೆ ಈ ಮೊದಲು ಹೇಳಿದ ಕಕ್ಷೆಗಳು ಅನ್ವಯಿಸುವಂತಹ ಕಂಪನಿಯು ಆಗಿರದೆ ಇರುವಂತಹ ಎರಡು ಇಲ್ಲವೆ ಹೆಚ್ಚು ಕಂಪನಿಗಳ ಕೈಯಲ್ಲಿದ್ದರೆ; ಆ ಕಂಪನಿಯು ಅಧೀನ ಕಂಪನಿ ಯೆಂದು ಗಣಿಸಲ್ಪಡಲಾಗುವುದು;

(ಬ) ಆ ಕಂಪನಿಯ ಪಾಲುಗಳು ( ನಿಶ್ಚಿತ ದರದಲ್ಲಿ ಲಾಭಾಂಶಕ್ಕೆ ಬಾಧ್ಯವಾಗಿರುವ ಮತ್ತು ಮುಂದೆ ಬರುವ ಲಾಭದಲ್ಲಿ ಭಾಗಿಯಾಗಲು ಇರುವ ಹಕ್ಕು ಇದ್ದ ಇಲ್ಲವೆ ಇರುವ ಪಾಲುಗಳು ಆಗಿರದಂತಹ ಪಾಲುಗಳು ) ಇಪ್ಪತ್ತೈದು ಶಂತಾಂಶಕ್ಕೆ ಕಡಿಮೆಯಾಗಿರದಷ್ಟು ಮತಾಧಿಕಾರವನ್ನುಳ್ಳಂತಹವು ಯಾವ ನಿರ್ಬಂಧಗಳಿಲ್ಲದೆ ಸಾರ್ವಜನಿಕರಿಗೆ ಕೊಡಲಾಗಿದ್ದರೆ ಇಲ್ಲವೆ ಯಾವ ನಿರ್ಬಂಧಗಳಿಲ್ಲದೆ ಸಾರ್ವಜನಿಕರು ಪಡೆದುಕೊಂಡಿದ್ದರೆ, ಇಲ್ಲವೆ ವರುಷದ ಕೊನೆಗೆ ಇಲ್ಲವೆ ಕಂಪನಿಯ ಲೆಕ್ಕವು ಸಿದ್ಧಮಾಡಲ್ಪಡುವ ಬೇರೆ ಕಾಲಾವಧಿಯ ಕೊನೆಗೆ ಇಲ್ಲವೆ ಸಾರ್ವಜನಿಕರಿಂದ ಲಾಭದಾಯಕವಾಗಿ ಧಾರಣಮಾಡಲಾಗಿದ್ದರೆ, (ಈ ಉಪಕಲಮು ಅನ್ವಯಿಸುವಂತಹ ಕಂಪನಿಯನ್ನು ಒಳಗೊಳ್ಳದೆ ಇದ್ದ ಸಾರ್ವಜನಿಕರು ) ಮತ್ತು ಇಂತಹ ಪಾಲುಗಳು ಇಂತಹ ವರುಷದಲ್ಲಿ ಇಲ್ಲವೆ ಬೇರೆ ಕಾಲಾವಧಿಯಲ್ಲಿ ಸ್ಟಾಕ ಎಕ್ಸ್‌ಚೇಂಜ ( ಪಾಲು ವಿನಿಮಯ ) ದ ವ್ಯವಹಾರದ ವಿಷಯವಾಗಿದ್ದರೆ ಇಲ್ಲವೆ ಆ ಪಾಲುಗಳು ಧಾರಕರಿಂದ ಉಳಿದ ಸಾರ್ವಜನಿಕರಿಗೆ ಅನಿರ್ಬಂಧವಾಗಿ ಹಸ್ತಾಂತರಿಸುವಂತಹವು ನಿಜವಾಗಿಯೂ

ಆಗಿದ್ದರೆ, ಆ ಕಂಪನಿಯು ಸಾರ್ವಜನಿಕರು ಸತ್ವತಃ ಹಿತಸಂಬಂಧವುಳ್ಳವ ರಾಗಿದ್ದಂತಹ ಕಂಪನಿ ಯೆಂದು ಗಣಿಸಲ್ಪಡಲಾಗುವುದು.

(ii)(ಅ)ಯಾವುದೇ ಐದು ಇಲ್ಲವೆ ಕಡಿಮೆ ವ್ಯಕ್ತಿಗಳು ಕೂಡಿಕೊಂಡು ಆ ಕಂಪನಿಯ ವ್ಯವಹಾರಗಳ ಮೇಲೆ ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷವಾಗಿ ನಿಯಂತ್ರಣ ವಹಿಸಿದ್ದರೆ ಇಲ್ಲವೆ ವಹಿಸುವ ಸಾಮರ್ಥ್ಯವಿದ್ದರೆ, ಇಲ್ಲವ ಪಡೆದುಕೊಳ್ಳಲು ಹಕ್ಕುಳ್ಳವರಾಗಿದ್ದರೆ ಮತ್ತು ಮುಖ್ಯವಾಗಿ ಆದರೂ ಈ ಮೊದಲಿನ ಶಬ್ದಗಳ ಸಾಮಾನ್ಯತೆಗೆ ವ್ಯತ್ಯಯ ಬರದಂತೆ, ಯಾವುದೇ ಐದು ಇಲ್ಲವೆ ಕಡಿಮೆ ವ್ಯಕ್ತಿಗಳು ಕೂಡಿಕೊಂಡು ಆ ಕಂಪನಿಯ ಮತಾಧಿಕಾರದ ಇಲ್ಲವೆ ಪಾಲಿನ ಬಂಡವಾಳದ ಬಹು ಭಾಗವನ್ನು ಸ್ವಾಧೀನದಲ್ಲಿಟ್ಟುಕೊಂಡಿ ದ್ದರೆ ಇಲ್ಲವೆ ಪಡೆಯಲು ಹಕ್ಕುಳ್ಳವರಾಗಿದ್ದರೆ, ಇಲ್ಲವೆ,

(ಬ) ಯಾವುದೇ ಐದು ಇಲ್ಲವೆ ಕಡಿಮೆ ವ್ಯಕ್ತಿಗಳು ಕೂಡಿಕೊಂಡು ಆ ಕಂಪನಿಯು ಬಹಿರಂಗಕ್ಕೆ ಕೊಟ್ಟ ಪಾಲು ಬಂಡವಾಳದ ಬಹುಭಾಗ ವನ್ನು ಸ್ವಾಧೀನದಲ್ಲಿಟ್ಟಿಕೊಂಡಿದ್ದರೆ, ಇಲ್ಲವೆ ಪಡೆದುಕೊಳ್ಳಲು ಹಕ್ಕುಳ್ಳವ ರಾಗಿದ್ದರೆ, ಇಲ್ಲವೆ ಬಂಡವಾಳದ ಇಂತಹ ಭಾಗವನ್ನು ಅಂದರೆ ಆ ಕಂಪನಿಯ ಆದಾಯವೆಲ್ಲವನ್ನು ಸದಸ್ಯರಲ್ಲಿ ನಿಜವಾಗಿಯೂ ಹಂಚಿದರೆ, ಹಂಚಿದ ಹಣ ದಲ್ಲಿಯ ಬಹುಭಾಗವನ್ನು ಪಡೆದುಕೊಳ್ಳಲು ಹಕ್ಕುಳ್ಳವರಾಗುವಷ್ಟು ಭಾಗವನ್ನು ಸ್ವಾಧೀನದಲ್ಲಿಟ್ಟುಕೊಂಡಿದ್ದರೆ ಇಲ್ಲವೆ ಪಡೆಯಲು ಹಕ್ಕುಳ್ಳವ ರಾಗಿದ್ದರೆ, ಇಲ್ಲವೆ,

(ಕ) (i) ಈ ಉಪಕಲಮು ಅನ್ವಯಿಸುವಂತಹ ಕಂಪನಿಯು ಅದು ಆಗಿದೆಯೆಂದು ಗೃಹೀತ ಹಿಡಿದರೆ: ಇಲ್ಲವೆ,

(ii) ಆ ಕಂಪನಿಯು ಮತ್ತು ಬೇರೆ ಯಾವುದೇ ಕಂಪನಿ ಇಲ್ಲವೆ ಕಂಪನಿ ಗಳು ಈ ಉಪಕಲಮು ಅನ್ವಯಿಸುವಂತಹ ಕಂಪನಿಗಳು ಆಗಿವೆಯೆಂದು ಗೃಹೀತ ಹಿಡಿದರೆ ಆ ಕಂಪನಿಯ ಆದಾಯದ (ಮೇಲೆ ಹೇಳಿದ ಉಪ ಕಲಮಿನ ಉದ್ದೇಶಗಳಿಗಾಗಿ ಯಾವುದೇ ಆದಾಯವು ಅದಕ್ಕೆ ಗುರುತು ಮಾಡಿ ಕೊಡಲಾಗಿದ್ದರೆ ಇಲ್ಲವೆ ಮೇಲಿನವುಗಳಲ್ಲಿ ಯಾವುದೇ ಲಕ್ಷ್ಯವನ್ನು ಗಮನಿಸಿ ಗುರುತು ಮಾಡಿಕೊಡಲಾಗಿದ್ದರೆ ಅದನ್ನು ಒಳಗೊಂಡು) ಅರ್ಧಕ್ಕಿಂತ ಹೆಚ್ಚು ಭಾಗವು ಆ ಉದ್ದೇಶಗಳಿಗಾಗಿ ಐದು ವ್ಯಕ್ತಿಗಳಕಿಂತ ಹೆಚ್ಚು ಆಗದಷ್ಟು ಜನ ರಲ್ಲಿ ಹಂಚಿ ಭಾಗ ಮಾಡಿಕೊಡಲಾಗಿದ್ದರೆ,

ಐದು ವ್ಯಕ್ತಿಗಳಕಿಂತ ಹೆಚ್ಚು ಜನರ ನಿಯಂತ್ರಣದಲ್ಲಿ ಒಂದು ಕಂಪ ನಿಯ ಇಲ್ಲವೆಂದು ಗಣಿಸಲ್ಪಡಲಾಗುವುದು.

(iii) ಒಂದು ಕಂಪನಿಯು ಐದು ವ್ಯಕ್ತಿಗಳಿಕಿಂತ ಹೆಚ್ಚು ಆಗದಷ್ಟು ಜನರ ನಿಯಂತ್ರಣದಲ್ಲಿ ಇದೆಯೊ ಎಂಬುದನ್ನು ನಿರ್ಣಯಿಸುವದಾದಲ್ಲಿ ವ್ಯಕ್ತಿಗಳು ಒಬ್ಬರೊಬ್ಬರು ಸಂಬಂಧಿಕರಾಗಿರದೆ, ವ್ಯಕ್ತಿಗಳು ಅಧಿಕಾರಕ್ಕೆ ನಾಮಕರಣ ಮಾಡಲ್ಪಟ್ಟವರು ನಾಮಕರಣ ಮಾಡಿದ ವ್ಯಕ್ತಿಯೊಡಗೂಡಿದ್ದರೆ, ಪಾಲುಗಾರಿಕೆಯಲ್ಲಿ ವ್ಯಕ್ತಿಗಳು ಕೂಡಿದ್ದರೆ, ಯಾವುದೇ ವಿಶ್ವಸ್ತನಿಧಿಯಲ್ಲಿಯ ವಿಷಯವಾಗಿದ್ದ ಯಾವುದೇ ಪಾಲುಗಳಲ್ಲಿ ಇಲ್ಲವೆ ಹೊಣೆಗಾರಿಕೆಗಳಲ್ಲಿ ಹಿತಸಂಬಂಧವುಳ್ಳವರಾಗಿದ್ದರೆ ಇಲ್ಲವೆ ಮೃತನ ಆಸ್ತಿಯ ಭಾಗದಲ್ಲಿ ಆಸಕ್ತಿಯುಳ್ಳವರಾಗಿದ್ದರೆ, ಆ ವ್ಯಕ್ತಿಗಳು ಕ್ರಮವಾಗಿ ಒಂದೇ ವ್ಯಕ್ತಿಯೆಂದು ತಿಳಿಯಲ್ಪಡಲಾಗುವುದು.

**ವಿವರಣೆ:** ಈ ವಾಕ್ಯಾವಳಿಯ ಉದ್ದೇಶಗಳಿಗಾಗಿ,—

(ಅ) "ಸಂಬಂಧಿಕ" ಎಂಬ ಪದಪ್ರಯೋಗವು ಗಂಡ, ಹೆಂಡತಿ, ಪೂರ್ವಜ, ಅನುಸಂತತಿ, ಬಂಧು ಇಲ್ಲವೆ ಭಗಿನಿ ಎಂದು ಅರ್ಥವಾಗುತ್ತದೆ.

(ಬ) ಅವನು ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ಆ ಇನ್ನೊಬ್ಬ ವ್ಯಕ್ತಿಯ ಪರವಾಗಿ ಇಲ್ಲವೆ ಆ ವ್ಯಕ್ತಿಯ ನಿರ್ದೇಶನದಂತೆ ಇಲ್ಲವೆ ಅವನ ಪರವಾಗಿ ಯಾವುದೇ ಹಕ್ಕು ಇಲ್ಲವೆ ಅಧಿಕಾರ, ಯಾವುದು ಈ ಉಪಕಲಮಿನ ಯಾವುದೇ ಕಕ್ಷೆಗಳ ಸತ್ವದಿಂದ ಒಂದು ಕಂಪನಿಯು ಐದಕ್ಕಿಂತ ಹೆಚ್ಚು ವ್ಯಕ್ತಿಗಳು ಆಗದೆ ಇರುವ ಜನರ ನಿಯಂತ್ರಣದಲ್ಲಿ ಇರುವುದೋ ಹೇಗೆ ಎಂಬುದನ್ನು ನಿರ್ಧರಿಸಲು ಮುಖ್ಯವಾಗಿ ಸಹಾಯಕ ವಾಗುವುದೋ ಆ ಹಕ್ಕು ಇಲ್ಲವೆ ಅಧಿಕಾರನ್ನು ಸ್ವಾಧೀನದಲ್ಲಿಟ್ಟುಕೊಂಡಿದ್ದರೆ ಇಲ್ಲವೆ ನಿರ್ವಹಿಸಲು ಅಗತ್ಯವಾಗುತ್ತಿದ್ದರೆ, ಒಬ್ಬ ವ್ಯಕ್ತಿಯು ಇನ್ನೊಬ್ಬ ವ್ಯಕ್ತಿಯಿಂದ ಅಧಿಕಾರಕ್ಕೆ ನಾಮಕರಣ ಮಾಡಲ್ಪಟ್ಟವನು ಎಂದು ಗಣಿಸಲ್ಪಡಲಾಗುವುದು.

(iv) ಯಾವುದೇ ಐದು ಇಲ್ಲವೆ ಕಡಿಮೆ ವ್ಯಕ್ತಿಗಳು, ಆ ಕಂಪನಿಯು ಮುಕ್ತಾಯ ಮಾಡಲ್ಪಟ್ಟರೆ, ಆ ಕಂಪನಿಯ ಸೊತ್ತುಗಳಲ್ಲಿಯ ಯಾವುದು ಕಂಪನಿಯ ಸದಸ್ಯರಲ್ಲಿ ಇಲ್ಲವೆ ಸಾಲದ ಒಡೆಯರಲ್ಲಿ ವಿತರಣಮಾಡಲು ಲಭ್ಯವಾಗುವುದೋ ಅದರಲ್ಲಿಯ ಅರ್ಧಕ್ಕಿಂತ ಹೆಚ್ಚು ಭಾಗಕ್ಕೆ ಸದಸ್ಯರೆಂಬ ಇಲ್ಲವೆ ಸಾಲದ ಒಡೆಯರೆಂದು ಬಾಧ್ಯಸ್ಥರಾಗುತ್ತಿದ್ದರೆ, ಹಣತೊಡಗಿಸಿದ ಆ ಕಂಪನಿಯು ಐದಕ್ಕಿಂತ ಹೆಚ್ಚು ವ್ಯಕ್ತಿಗಳು ಆಗದ ಜನರ ನಿಯಂತ್ರಣದಲ್ಲಿದೆಯೆಂದು ಗಣಿಸಲ್ಪಡಲಾಗುವುದು.

(v) ವಾಕ್ಯಾವಳಿ (i) ರಲ್ಲಿ ಏನೆ ಹೇಳಲಾಗಿದ್ದರೂ ಆ ವಾಕ್ಯಾವಳಿಯ ಉದ್ದೇಶಗಳಿಗಾಗಿ ಐದಕ್ಕಿಂತ ಹೆಚ್ಚು ಆಗದಷ್ಟು ವ್ಯಕ್ತಿಗಳ

ನಿಯಂತ್ರಣದಲ್ಲಿದೆಯೆಂದು ಗಣಿಸಲ್ಪಡಲಾಗಿದ್ದಂತಹ ಕಂಪನಿಯು ವ್ಯಾಖ್ಯಾವಳಿ (ii) ರಲ್ಲಿಯ ಉಪವಾಕ್ಯಾವಳಿ (ಅ) (ಬ) ಇಲ್ಲವೆ (ಕ) ದಲ್ಲಿ ಹೇಳಲಾದ ವ್ಯಕ್ತಿಗಳನ್ನು ಒಳಗೊಳ್ಳುವುದರಿಂದಲೇ ಮಾತ್ರ ಐದಕ್ಕಿಂತ ಹೆಚ್ಚು ಆಗದಷ್ಟು ವ್ಯಕ್ತಿಗಳ ನಿಯಂತ್ರಣದಲ್ಲಿದೆಯೆಂದು ಗಣಿಸಲ್ಪಡಲಾಗದೆ ಇದ್ದರೆ, ಇಲ್ಲವೆ ವಾಕ್ಯಾವಳಿ (iv) ರಲ್ಲಿ ಹೇಳಲಾದ ಕಂಪನಿಗೆ ಮೇಲೆ ಹೇಳಿದ ವಾಕ್ಯಾವಳಿ (೧) ರ ಕಕ್ಷೆಗಳು ಅನ್ವಯಿಸದಿದ್ದಲ್ಲಿ ಮತ್ತು ಅದು ಯಾವುದೇ ವ್ಯಕ್ತಿಯಿಂದ ಅಧಿಕಾರಕ್ಕೆ ನಾಮಕರಣ ಮಾಡದೆ ಇದ್ದುದಾಗಿದ್ದರೆ, ಆ ಕಂಪನಿಯು ಅಧೀನ ಕಂಪನಿಯೆಂದು ಗಣಿಸಲ್ಪಡಲಾಗುವುದಿಲ್ಲ.

(vi) ಈ ಉಪಕಲಮಿನಲ್ಲಿ ಬಂದ "ಪ್ರಾಸಂಗಿಕ ಸಮಯ" ಎಂಬ ಪದಪ್ರಯೋಗವು ಮೃತನ ಮರಣದ ಸಮಯಕ್ಕೆ ಮುಕ್ತಾಯವಾಗುವ ಕಾಲಾವಧಿಯಲ್ಲಿಯ ಯಾವುದೇ ಸಮಯವು ಎಂದು ಮತ್ತು ವಿನ್ಯಾಸದ, ಹಸ್ತಾಂತರದ ಇಲ್ಲವೆ ಇತರ ವ್ಯವಹಾರದ ಇಲ್ಲವೆ ಈ ಕಾಯಿದೆಯ ಉದ್ದೇಶಗಳಿಗಾಗಿ ಪ್ರಾಸಂಗಿಕವಾದ ತಾರೀಖಿಗೆ ಮೊದಲಾಗುವ ಸಮಯವು ಇಲ್ಲವೆ ಆ ವಿನ್ಯಾಸವು, ಹಸ್ತಾಂತರವು, ಇಲ್ಲವೆ ಇತರ ವ್ಯವಹಾರವು ಇಲ್ಲವೆ ಘಟನೆಯು ಸಂಬಂಧಾತ್ಮಕ ಕ್ರಿಯೆಗಳಲ್ಲಿ ಒಂದಾಗಿದ್ದರೆ, ಆ ಕ್ರಿಯೆಗಳಲ್ಲಿ ಅತಿ ಮೊದಲಿನ ಕ್ರಿಯೆಯ ತಾರೀಖಿನ ಸಮಯವು ಎಂದು ಅರ್ಥವಾಗುತ್ತದೆ.

(೫) ಈ ಕಲಮಿನ ಸತ್ವದಿಂದ ಮೃತನ ಮರಣದ ಮೂಲಕ ಇಳಿದು ಬರುವ ಆಸ್ತಿಯಲ್ಲಿ ಸಮಾವೇಶ ಮಾಡಲ್ಪಟ್ಟಿದೆಯೆಂದು ಗಣಿಸಲ್ಪಡಲಾಗುವ ಆಸ್ತಿಯಲ್ಲಿ ಹಿತಸಂಬಂಧವಿದ್ದಿತೆಂದು ೩೪ ನೆಯ ಕಲಮಿನ ಉದ್ದೇಶಗಳಿಗಾಗಿ ಗಣಿಸಲ್ಪಡಲಾಗುವುದು.

**ವಿವೇಚನೆ:**

ಕಂಪನಿಯು ಒಂದು ಶಾಸನಿಕ ಘಟಕವಾಗಿರುವುದು. ಅದು ವಸ್ತುನಿಷ್ಠ ಸಂಘಟನೆಯಾಗಿರುವುದು. ಕಂಪನಿಗೆ ಮರಣವೆಂಬುದು ಇಲ್ಲ. ಆದ್ದರಿಂದ ವಾರಸಾ ಕರ ತಪ್ಪಿಸಿಕೊಳ್ಳಲು ವ್ಯಕ್ತಿಯು ಕಂಪನಿಯನ್ನು ಉಪಯೋಗಿಸಿಕೊಳ್ಳಬಹುದಾಗಿದೆ. ೧೭ ನೆಯ ಕಲಮು ಅದನ್ನು ತಡೆಯುವುದು.

ಅ ನು ಒಂದು ಕಂಪನಿಯನ್ನು ರೂಪಿಸುವನು. ಅದರಲ್ಲಿಯ ಪಾಲುಗಳಿಗಾಗಿ ತನ್ನ ಸೊತ್ತುಗಳನ್ನು ಹಸ್ತಾಂತರಿಸುವನು. ಆ ಕಂಪನಿಯಲ್ಲಿ ತಾನು ಸಂಚಾಲಕ ನಿರ್ದೇಶಕನೆಂದು ನೇಮಕಮಾಡಿಕೊಳ್ಳುವನು. ಈ ನೇಮಕವು ಜೀವಮಾನದವರೆಗಿನ ನೇಮಕವೆಂದು ಮಾಡಿಕೊಂಡು ಕಂಪನಿಯ ಆದಾಯದಲ್ಲಿಯ ಬಹುಭಾಗವನ್ನು

ತನ್ನ ಸಂಬಳವೆಂದು ಪಡೆಯುವನು. ನಂತರ ಆ ಕಂಪನಿಯ ಪಾಲುಗಳನ್ನು ತನ್ನ ಮಕ್ಕಳಿಗೆ ಹಸ್ತಾಂತರಿಸುವನು. ಕಾಯಿದೆಯ ಪ್ರಕಾರ ದಾನಕ್ಕೆ ಹಾಕಲಾದ ಕಾಲನಿರ್ಬಂಧವನ್ನು ದಾಟಿ ಅ ನು ಬದುಕಿದ್ದರೆ, ವಾರಸಾಕರವು ಆ ದಾನಕ್ಕೆ ತಗಲು ವುದಿಲ್ಲ. ಕಂಪನಿಗೆ ಹಸ್ತಾಂತರಿಸಿದ ಸೊತ್ತುಗಳೂ ಕರಪಾತ್ರವಾಗುವುದಿಲ್ಲ. ಏಕೆಂದರೆ ಕಂಪನಿಯು ಅದಕ್ಕೆ ಪೂರ್ಣ ಪ್ರತಿಬೆಲೆ ಕೊಟ್ಟಿದೆ. ಅ ನು ಸಂಚಾಲಕ–ನಿರ್ದೇಶಕ ನೆಂದು ಇರಿಸಿಕೊಂಡ ಅಧಿಕಾರವನ್ನು ಪಾಲುಗಳ ದಾನಕ್ಕೆ ಸಂಬಂಧಿಸಲು ಬರುವು ದಿಲ್ಲ. ಆದ್ದರಿಂದ ೧೦ ನೆಯ ಕಲಮು ಹತ್ತುವುದಿಲ್ಲ. ನಿರ್ದೇಶಕನೆಂದು ಕೆಲಸ ಮಾಡುವುದರ ಮುಕ್ತಾಯದಿಂದ ಯಾವ ಹೊಣೆಗಾರಿಕೆ ಉಂಟಾಗದು. ಆದ್ದ ರಿಂದ ಅನು ತನ್ನ ಆಸ್ತಿಯನ್ನು ಕಂಪನಿಯ ಮುಖಾಂತರ ತನ್ನ ವಾರಸದಾರರಿಗೆ ಹಸ್ತಾಂತರಿಸಿದರೂ ಸಂಬಳದ ರೀತಿಯಲ್ಲಿ ತನ್ನ ಜೀವಮಾನದಲ್ಲಿ ಹಿತಸಂಬಂಧವನ್ನು ಕಾಯ್ದಿರಿಸಿಕೊಂಡರೂ ವಾರಸಾಕರದ ಹೊಣೆಯನ್ನು ತಪ್ಪಿಸಲು ಬರುವುದು. ಈ ರೀತಿಯಿಂದ ಕರವನ್ನು ತಪ್ಪಿಸುವುದನ್ನು ತಡೆಯುವುದೇ ೧೭ನೆಯ ಕಲಮಿನ ಉದ್ದೇಶ ವಾಗಿದೆ. ಈ ಕಲಮಿನ ಲಕ್ಷಣಗಳು ಹೀಗಿವೆ:

(೧) ಮೃತನಿಂದ ಒಂದು ಕಂಪನಿಗೆ ಅವನ ಸೊತ್ತು ಹಸ್ತಾಂತರಿಸಲ್ಪಟ್ಟಿರ ಬೇಕು. ಆ ಕಂಪನಿಯ ನಿಯಂತ್ರಣವು ಐದು ಇಲ್ಲವೆ ಅದಕ್ಕೂ ಕಡಿಮೆ ವ್ಯಕ್ತಿಗಳ ಕೈಯಲ್ಲಿರಬೇಕು.

(೨) ಮೃತನು ತನ್ನ ಮರಣಪೂರ್ವದಲ್ಲಿ ಮೂರು ವರುಷದಲ್ಲಿ ಆ ಕಂಪನಿ ಯಿಂದ ಲಾಭವನ್ನು ಸ್ವೀಕರಿಸಿರಬೇಕು. ಇಲ್ಲವೆ ಸ್ವೀಕರಿಸಲು ಅಧಿಕಾರವಿರಬೇಕು.

(೩) ಮೃತನ ಮರಣದ ಪೂರ್ವದಲ್ಲಿ ಮೂರು ವರುಷದಲ್ಲಿ ಮೃತನಿಗೆ ಒದಗಿ ಬಂದ ಒಟ್ಟು ಲಾಭದ ಮೊತ್ತವು ಆ ಮೂರು ವರುಷಗಳಲ್ಲಿ ಕಂಪನಿಗೆ ಆದ ಆದಾ ಯಕ್ಕೆ ಯಾವ ಪ್ರಮಾಣವನ್ನು ತೋರುವುದೋ ಆ ಪ್ರಮಾಣದಲ್ಲಿ ಕಂಪನಿಯ ಸೊತ್ತುಗಳ ಮೇಲೆ ಕರದ ಭಾರವು ಬೀಳುವುದು.

(೪) ಆದರೆ, ಮೃತನು ತಾನೇ ವ್ಯವಸ್ಥೆ ಮಾಡಿರದೆ ಇದ್ದ ವಿಶ್ವಸ್ತನಿಧಿಯ ಧರ್ಮದರ್ಶಿಯ ಪದಸಾಮರ್ಥ್ಯದಿಂದ ಹಸ್ತಾಂತರ ಮಾಡಿದ ಆಸ್ತಿಗೆ ಈ ಕಲಮು ಅನ್ವಯಿಸುವದಿಲ್ಲ.

ಒಂದು ಕಂಪನಿಯ ಅಸ್ತಿತ್ವದಿಂದ ಲಾಭ ಪಡೆಯಬೇಕೆಂದ ವ್ಯಕ್ತಿಗೆ ಆ ಕಂಪ ನಿಯ ವ್ಯವಹಾರಗಳ ಮೇಲೆ ನಿಯಂತ್ರಣವಿರಬೇಕಾಗುವುದು. ನಿಯಂತ್ರಿತ ಕಂಪನಿ ಗಳಿಗೆ ಹಸ್ತಾಂತರ ಮಾಡಿದ ಸೊತ್ತುಗಳ ಬಗ್ಗೆ ಮಾತ್ರ ಈ ಕಲಮು ಇದೆ. ಕಲಮು ೨ ಉಪಕಲಮು (೩) ರಲ್ಲಿ ಕಂಪನಿಯ ವ್ಯಾಖ್ಯೆ ಮಾಡುವಾಗ ಕಂಪನಿಯು ಎಲ್ಲಿಯೇ ಸಂಸ್ಥಾಪಿಸಲ್ಪಟ್ಟಿರಲಿ, ಎಂದು ಹೇಳಿದುದರಿಂದ ವಾರಸಾಕರ ಕ್ಷೇತ್ರದಾಚೆಯಲ್ಲಿ

ಯಾವದೂ ಕಂಪನಿಯು ಸಂಸ್ಥಾಪಿಸಲ್ಪಟ್ಟಿದ್ದರೂ ಆ ಕಂಪನಿಯ ವ್ಯವಹಾರಗಳು ಮೃತನ ನಿಯಂತ್ರಣದಲ್ಲಿದ್ದು ಅದಕ್ಕೆ ತನ್ನ ಸೊತ್ತುಗಳನ್ನು ಹಸ್ತಾಂತರಿಸಿದ್ದರೆ ಅವೂ ಕರಯೋಗ್ಯವಾಗುವುವು.

೧೭ ನೆಯ ಕಲಮಿನ (೪)ರಲ್ಲಿ ನಿಯಂತ್ರಿತ ಕಂಪನಿಯ ಬಗ್ಗೆ ಹೇಳಿದೆ. ಅದನ್ನು ವಿಂಗಡಿಸಿ ನೋಡಿದರೆ ಕೆಲ ಮಾತುಗಳು ಎದ್ದು ಕಾಣುವುವು. (೧) ಆ ಕಂಪನಿಯು ನಿಯಂತ್ರಿತ ಕಂಪನಿಯಾಗಬೇಕಾದರೆ ಅದು ಆ ಪ್ರಾಸಂಗಿಕ ಸಮಯದಲ್ಲಿ ಐದು ಇಲ್ಲವೆ ಅದಕ್ಕೂ ಕಡಿಮೆ ವ್ಯಕ್ತಿಗಳ ನಿಯಂತ್ರಣದಲ್ಲಿರಬೇಕು. (೨) ಕಂಪನಿಯು ಆಧೀನ ಕಂಪನಿಯಾಗಿರಬಾರದು. (೩) ಆ ಕಂಪನಿಯಲ್ಲಿ ಸಾರ್ವಜನಿಕರು ಸತ್ವತಃ ಹಿತಸಂಬಂಧವುಳ್ಳವರಾಗಿರಬಾರದು.

ಆಧೀನ ಕಂಪನಿಯೆಂದರೆ ಎಂತಹದು ಎಂಬುದನ್ನು ಈ ಕಲಮಿನ ಉಪಕಲಮು ೪ (i) ದಲ್ಲಿಯ ವಿವರಣೆ (ಅ) ದಲ್ಲಿ ಹೇಳಲಾಗಿದೆ. ಸಾರ್ವಜನಿಕರ ಹಿತಸಂಬಂಧವಿದ್ದ ಕಂಪನಿಯೆಂದರೆ ಎಂತಹದು ಎಂಬುದನ್ನು ಉಪಕಲಮು ೪ (i) ದಲ್ಲಿಯ ವಿವರಣೆ (ಬ) ದಲ್ಲಿ ಹೇಳಿದೆ.

**ಉದಾಹರಣೆ:**– (೧) ಅ ಕಂಪನಿಯು **ಬ** ಮತ್ತು ಕ ಕಂಪನಿಯ ನಿಯಂತ್ರಣದಲ್ಲಿದೆ. **ಬ** ಮತ್ತು ಕ ಕಂಪನಿಗಳಲ್ಲಿ ಯಾವುದೂ ನಿಯಂತ್ರಿತ **ಕಂಪನಿ** ಅಲ್ಲ. **ಅ** ಕಂಪನಿಯ ಆಧೀನ ಕಂಪನಿಯು.

(೨) **ಅ** ಕಂಪನಿಯಲ್ಲಿ ಸಾರ್ವಜನಿಕರು ಕಂಪನಿಯ ಮತಾಧಿಕಾರದಲ್ಲಿ ಕನಿಷ್ಠ ೨೫ ಶತಾಂಶದಷ್ಟು ಪಡೆದವರು ಇರುತ್ತಾರೆ. ಆ ಕಂಪನಿಯ ಪಾಲುಗಳು ಅನಿರ್ಬಂಧವಾಗಿ ಹಸ್ತಾಂತರಿಸಲು ಯೋಗ್ಯವಾದಂತಹವು ಇವೆ. ಹೀಗಿದ್ದರೆ **ಅ** **ಕಂಪನಿಯು** ಸಾರ್ವಜನಿಕರು ಸತ್ವತಃ ಹಿತಸಂಬಂಧವನ್ನು ಪಡೆದ **ಕಂಪನಿಯು** ಆಗುತ್ತದೆ.

ಆಧೀನ ಕಂಪನಿಯು ಆಗಿರದ ಮತ್ತು ಸಾರ್ವಜನಿಕರು ಹಿತಸಂಬಂಧವನ್ನು ಪಡೆದ ಕಂಪನಿಯು ಆಗಿರದ ನಿಯಂತ್ರಿತ ಕಂಪನಿಯು ಆಗಿದ್ದರೆ, ನಿಯಂತ್ರಿತ ಕಂಪನಿಯ ಸೊತ್ತುಗಳು ಮರಣದ ಮೂಲಕ ಇಳಿದು ಬರುವುವೆಂದು ಗಣಿಸಲ್ಪಡಲಾಗುವುದು. ಹೀಗೆ ಸೊತ್ತುಗಳು ಕರಪಾತ್ರವಾಗಬೇಕಾದರೆ, ಮೃತನು ತನ್ನ ಯಾವುದೇ ಆಸ್ತಿಯನ್ನು ನಿಯಂತ್ರಿತ ಕಂಪನಿಗೆ ಹಸ್ತಾಂತರ ಮಾಡಬೇಕು ಮೃತನಿಗೆ ಆ ನಿಯಂತ್ರಿತ ಕಂಪನಿಯಿಂದ ಮೃತನ ಮರಣದ ಪೂರ್ವದಲ್ಲಿ ಮೂರು ವರುಷ ಲಾಭವು ಒದಗಿ ಬಂದಿರಬೇಕು. ಕಂಪನಿಯ ಸೊತ್ತುಗಳಲ್ಲಿ ಎಷ್ಟು ಭಾಗ ಕರಪಾತ್ರವಾಗುವುದು ಎಂಬುವಕ್ಕೆ ಒಂದು ಸೂತ್ರಕ್ರಮವಿದೆ.

(ಕೊನೆಯ ಮೂರು ಲೆಕ್ಕದ ವರ್ಷಗಳಲ್ಲಿ ಮೃತನಿಗೆ ಒದಗಿಬಂದಲಾಭ) / (ಕೊನೆಯ ಮೂರು ಲೆಕ್ಕದ ವರ್ಷಗಳಲ್ಲಿ ಕಂಪನಿಯ ನಿಕ್ಕಿ ಆದಾಯ) × ಮೃತನ ಮರಣದ ತಾರೀಖಿಗೆ ಕಂಪನಿಯ ಸೊತ್ತುಗಳ ನಿಕ್ಕಿ ಬೆಲೆ

ಈ ಸೂತ್ರಕ್ರಮವನ್ನು ಹಚ್ಚಿದರೆ ಈ ಕೆಳಗಿನಂತೆ ಉದಾಹರಣೆ ಕಂಡುಬರುವುದು.

ಒಂದು ನಿಯಂತ್ರಿತ ಕಂಪನಿಯಿದೆ. ಅದರ ಪಾಲುಗಳಲ್ಲಿ ಮೃತನು ೧೦೦೦೦೦/- ರೂಪಾಯಿ ತೊಡಗಿಸಿದ್ದಾನೆ. ಆ ಕಂಪನಿಯ ಒಟ್ಟು ಪಾಲು ಬಂಡವಾಳವು ೧೨೫೦೦೦/– ರೂಪಾಯಿ ಇದೆ. ಮೃತನ ಮರಣದ ಸಮಯಕ್ಕೆ ಕಂಪನಿಯ ಸೊತ್ತುಗಳ ಬೆಲೆಯು ೧೨೬೦೦೦/– ರೂಪಾಯಿ ಆಗಿದೆ. ಕೊನೆಯ ಮೂರು ಲೆಕ್ಕದ ವರುಷಗಳಲ್ಲಿ ಕಂಪನಿಯ ನಿಕ್ಕಿ ಆದಾಯವು ೮೦೦೦೦/– ರೂಪಾಯಿ ಆಗಿದೆ. ಆ ಕೊನೆಯ ಮೂರು ಲೆಕ್ಕದ ವರುಷಗಳಲ್ಲಿ ಮೃತನು ಕಂಪನಿಯಿಂದ ೪೫೦೦೦/– ರೂಪಾಯಿಯಷ್ಟು ಲಾಭ ಪಡೆದಿರುತ್ತಾನೆ. ಮೃತನ ಮರಣದ ಸಮಯಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವ ಕಂಪನಿಯ ಸೊತ್ತುಗಳ ಪ್ರಮಾಣವು ಮೇಲಿನ ಸೂತ್ರಕ್ರಮದ ಪ್ರಕಾರ ಇಷ್ಟಾಗುವುದು.

೪೫೦೦೦/೮೦೦೦೦ × ೧೨೬೦೦೦ = ೯೯೦೦೦/=

ಹೀಗೆ ಲೆಕ್ಕ ಮಾಡುವಾಗ ಇನ್ನೊಂದು ಸಂಗತಿಯನ್ನು ಗಮನಿಸಬೇಕೆಂದು ೧೨ ನೆಯ ಕಲಮಿನ ಉಪಕಲಮು (೨) ಹೇಳುವುದು. ಕಂಪನಿಯು ಅಸ್ತಿತ್ವದಲ್ಲಿ ಬಂದು ಮೂರು ವರುಷವಾಗಿರದಿದ್ದರೆ ಎಷ್ಟು ವರುಷ ಅಸ್ತಿತ್ವದಲ್ಲಿರುವುದೋ ಅಷ್ಟು ವರುಷದ ನಿಕ್ಕಿ ಆದಾಯ. ಮತ್ತು ಆ ಕಾಲಾವಧಿಯಲ್ಲಿ ಯಾವುದೊಂದು ವರುಷ ಕಂಪನಿಗೆ ಹಾನಿಯಾಗಿದ್ದರೆ ಆ ಹಾನಿಯ ಮೊತ್ತವನ್ನು ನಿಕ್ಕಿ ಆದಾಯದಲ್ಲಿ ಕಳೆದು ಲೆಕ್ಕ ಮಾಡಬೇಕು. ಮುಖ್ಯಕಾರಣವೇನಂದರೆ ಮೃತನ ಜೀವನದ ಕೊನೆಯ ಮೂರು ವರುಷಗಳಲ್ಲಿ ನಡೆದ ಸಂಗತಿಗಳೇ ಈ ಕಲಮಿನ ಪ್ರಕಾರ ಲಕ್ಷ್ಯಯೋಗ್ಯವಾದವುಗಳು.

ಲೆಕ್ಕದ ವರುಷವೆಂದರೇನು ? ಇದನ್ನು ೧೯೫೬ ರ ವಾರಸಾಕರ (ನಿಯಂತ್ರಿತ ಕಂಪನಿ) ಕಾಯಿದೆಯ **ನಿಯಮ ೧೪** ರಲ್ಲಿ ಸ್ಪಷ್ಟಪಡಿಸಲಾಗಿದೆ. ಲೆಕ್ಕದ ವರುಷವನ್ನು ನಿರ್ಣಯಿಸುವಾಗ ಮೃತನ ಮರಣದ ತಾರೀಖು ಮುಖ್ಯವಾಗುವುದು. ಮರಣ ಹೊಂದಿದ ತಾರೀಖಿನ ಹಿಂದೆ ಎಂದು ಲೆಕ್ಕದ ವರುಷವು ಕೊನೆಗೊಳ್ಳುವುದೋ ಅದು ಒಂದು ವರುಷ. ಅನಂತರ ಹಿಂದೆ ಮತ್ತೆ ಎರಡು ವರುಷಗಳನ್ನು ಎಣಿಸಬೇಕು. ಮೃತನು ೧೯೫೪ ಜನೆವರಿ ೧೫ಕ್ಕೆ ಮರಣಹೊಂದಿದ್ದಾನೆಂದು ತಿಳಿಯುವಾ. ಮೃತನ ಜೀವಮಾನದ ಕೊನೆಯ ಹನ್ನೆರಡು ತಿಂಗಳು ಎಂದರೆ ೧೯೫೩ ಜನವರಿ ೧೫ ರ ವರೆಗೆ. ಈ ಹನ್ನೆರಡು ತಿಂಗಳಲ್ಲಿ ಕಂಪನಿಯ ಲೆಕ್ಕದ ವರುಷವು ಎಂದಿಗೆ ಮುಕ್ತಾಯವಾಗುವುದು ಎಂಬುದನ್ನು ನೋಡಬೇಕು. ಕಂಪನಿಯ ಲೆಕ್ಕದ ವರುಷವು ೧೯೫೩ ರ

ಡಿಸೆಂಬರ ೩೧ ಕ್ಕೆ ಮುಗಿಯುತ್ತಿದ್ದರೆ ಅಂದಿನಿಂದ ಹಿಂದೆ ಮೂರು ವರುಷಗಳು ಕೊನೆಯ ಲೆಕ್ಕದ ಮೂರು ವರುಷಗಳು ಆಗುವುವು. ಹೀಗೆ ಸ್ಪಷ್ಟವಾಗಿ ಲೆಕ್ಕದ ವರುಷವನ್ನು ಕಂಡು ಹಿಡಿಯಲು ಬಾರದಿದ್ದರೆ ನಿಯಂತ್ರಕನು ನಿರ್ಣಯಿಸುವ ಹಾಗೆ ಮೃತನ ಜೀವಮಾನದ ಕೊನೆಯ ಹನ್ನೆರಡು ತಿಂಗಳಲ್ಲಿ ಯಾವ ತಾರೀಖು ಗೊತ್ತು ಪಡಿಸಲ್ಪಡುವುದೋ ಅಲ್ಲಿಂದ ಮೂರು ಲೆಕ್ಕದ ವರುಷ ಎಂದು ತಿಳಿಯಬೇಕು.

ಮೃತನಿಗೆ ಲಾಭವನ್ನು ಹೇಗೆ ನಿರ್ಧರಿಸುವುದು ? **ನಿಯಮ ೫** ಈ ಬಗ್ಗೆ ಹೇಳುವುದು. ಕಂಪನಿಯ ಯಾವುದೇ ಆದಾಯ, ಕಂಪನಿಯಿಂದ ಪಡೆದ ನಿಯತ ಕಾಲಿಕ ಸಂದಾಯ, ಕಂಪನಿಯ ಭೂಮಿ–ಆಸ್ತಿಯ ಉಪಭೋಗ; ಅದಕ್ಕೆ ಮೃತನು ಬಾಧ್ಯಸ್ಥನಿರಲಿ ಇಲ್ಲವೆ ಮೃತನು ಅಧಿಕಾರ ಪಡೆದಿರಲಿ ಮುಂತಾಗಿ.

ಕಂಪನಿಗೆ ಆದ ನಿಕ್ಕಿ ಆದಾಯ ಇಲ್ಲವೆ ಹಾನಿಯನ್ನು ನಿರ್ಧರಿಸಲು **ನಿಯಮ ೯** ನೆರವಾಗುವುದು. ಕಂಪನಿಯ ಸೊತ್ತುಗಳ ಬೆಲೆಯನ್ನು ನಿರ್ಧರಿಸಲು **ನಿಯಮ ೧೦** ಸಹಾಯಕವಾಗುವುದು.

**೧೮ ಹಸ್ತಾಂತರ ಮಾಡಿದವನ ಮರಣ ಸಂಭವಿಸಿದ ಕೂಡಲೆ ನಿಯಂತ್ರಕನಿಗೆ ಮಾಹಿತಿ ಕೊಡುವುದು ಕಂಪನಿಯ ಮತ್ತು ಕಂಪನಿಯ ಅಧಿಕಾರಿಗಳ ಕರ್ತವ್ಯ.**

(೧) ಎಲ್ಲಿ ಮೃತನು ಒಂದು ನಿಯಂತ್ರಿಕ ಕಂಪನಿಗೆ ಆಸ್ತಿಯ ಹಸ್ತಾಂತರವನ್ನು ಮಾಡಿರುವನು ಅಲ್ಲಿ ಮೃತನ ಮರಣ ಸಂಭವಿಸಿದ ದಿನದಿಂದ ನಾಲ್ವತ್ತೈದು ದಿವಸಗಳ ಒಳಗೆ ಮರಣ ಸಂಭವಿಸಿದ ವಿಷಯವನ್ನು, ಮೃತನು ಕಂಪನಿಗೆ ಆಸ್ತಿಯ ಹಸ್ತಾಂತರವನ್ನು ಮಾಡಿದ ಸಂಗತಿಯನ್ನು, ಮತ್ತು ಕಂಪನಿಯಿಂದ ಮೃತನಿಗೆ ಲಾಭವು ಒದಗಿ ಬಂದಿದೆಯೆಂಬ ಸಂಗತಿಯನ್ನು ನಿಯಂತ್ರಕನಿಗೆ ತಿಳಿಸಲು ಕಂಪನಿಯು ಬದ್ಧವಾಗುವುದು. ಮತ್ತು ಆ ತಾರೀಖಿಗೆ ಕಂಪನಿಯ ಮುಖ್ಯ ಅಧಿಕಾರಿಯಾಗಿದ್ದ ಪ್ರತಿಯೊಬ್ಬ ವ್ಯಕ್ತಿಯು ಇಲ್ಲವೆ ಆ ಕಂಪನಿಯು ಆ ತಾರೀಖಿಗೆ ಮುಕ್ತಾಯವಾಗಿದ್ದರೆ ಮತ್ತು ಮುರಿದಿದ್ದರೆ ಯಾವುದೇ ಕಾಲಕ್ಕೆ ಕಂಪನಿಯ ಮುಖ್ಯ ಅಧಿಕಾರಿಯಾಗಿದ್ದ ಮತ್ತು ಈ ಕಲಮಿನನ್ವಯವಾಗಿ ಮಾಹಿತಿ ಕೊಡಲು ಕರೆಯಲ್ಪಟ್ಟವನು, ಒಂದು ವೇಳೆ ಅವನಿಗೆ ಗೊತ್ತಿರದಿದ್ದರೆ, ಇಲ್ಲವೆ ಕಂಪನಿಯಿಂದ ಇಲ್ಲವೆ ಬೇರೆ ವ್ಯಕ್ತಿಯಿಂದ ಮೇಲ್ಕಾಣಿಸಿದ ಮಾಹಿತಿಯು ನಿಯಂತ್ರಕನಿಗೆ ಕೊಡಲ್ಪಟ್ಟಿದೆಯೆಂದು ನಂಬಲು ಸಬಲವಾದ ಯೋಗ್ಯ ಕಾರಣಗಳು ಇರದಿದ್ದರೆ, ಈ ಮೊದಲು ಹೇಳಲಾದ ಸಂಗತಿಗಳ ಸಂಬಂಧವಾಗಿ ತನ್ನ ತಿಳಿವಳಿಕೆಯಲ್ಲಿದ್ದುದನ್ನು ಮಾಹಿತಿ ಕೊಡಲು ಬದ್ಧನಾಗುವನು.

(೨) ಕಂಪನಿಯಾಗಲಿ ಇಲ್ಲವೆ ಈ ಮೊದಲಿನ ಉಪಕಲಮಿನ ಸತ್ವದ ಪ್ರಕಾರ ನಿಯಂತ್ರಕನಿಗೆ ಮಾಹಿತಿ ಕೊಡಲು ಮೇಲಿನಂತೆ ಬದ್ಧನಾದ ಯಾವುದೇ ಅಂತಹ ವ್ಯಕ್ತಿಯು ಆ ಹೊಣೆಯನ್ನು ನಿರ್ವಹಿಸಲು ತಪ್ಪಿದರೆ, ನಿಯಂತ್ರಕನು ಆ ತಪ್ಪಿತಸ್ಥನ ಮೇಲೆ ಒಂದು ಸಾವಿರ ರೂಪಾಯಿಗಳಿಗೆ ಮೀರದಷ್ಟು ದಂಡವನ್ನು ಹೇರಬಹುದು.

**ವಿವರಣೆ:** ಈ ಕಲಮಿನ ಉದ್ದೇಶಗಳಿಗಾಗಿ "ಮುಖ್ಯ ಅಧಿಕಾರಿ" ಎಂದರೆ, ಮ್ಯಾನೇಜರ, ಮ್ಯಾನೇಜಿಂಗ ಏಜಂಟ್ಸ, ಇಲ್ಲವೆ ಕಾರ್ಯದರ್ಶಿ, ಮತ್ತು ಆ ಶಬ್ದವು, ಈ ಕಲಮಿನನ್ವಯವಾಗಿ ನಿಯಂತ್ರಕನು ಅವನನ್ನು ಮುಖ್ಯ ಅಧಿಕಾರಿಯೆಂದು ಗಣಿಸಿ ನೋಟೀಸು ಕೊಡಲ್ಪಟ್ಟ ಕಂಪನಿಗೆ ಸಂಬಂಧಪಟ್ಟ ಯಾವುದೇ ವ್ಯಕ್ತಿಯನ್ನು ಒಳಗೊಳ್ಳುವುದು.

**ವಿವೇಚನೆ:**

ಈ ಕಲಮು ಕಂಪನಿಯ ಇಲ್ಲವೆ ಕಂಪನಿಯ ಮುಖ್ಯ ಅಧಿಕಾರಗಳಮೇಲೆ ನಿಯಂತ್ರಕನಿಗೆ ಮಾಹಿತಿ ಕೊಡುವ ಹೊಣೆಯನ್ನು ಹೊರಿಸುತ್ತದೆ. ನಿಯಂತ್ರಿತ ಕಂಪನಿಗೆ ಮೃತನು ಮಾಡಿದ ಆಸ್ತಿಯ ಹಸ್ತಾಂತರ, ಕಂಪನಿಯಿಂದ ಪಡೆದ ಲಾಭ, ಮೃತನ ಮರಣದ ತಾರೀಖು ಮುಂತಾದವುಗಳನ್ನು ನಿಯಂತ್ರಕನಿಗೆ ತಿಳಿಸುವ ಹೊಣೆಯು ಕಂಪನಿಯದು ಇಲ್ಲವೆ ಕಂಪನಿಯ ಮುಖ್ಯ ಅಧಿಕಾರಿಯದು. ಒಂದು ವೇಳೆ ಮಾಹಿತಿಯನ್ನು ಕಂಪನಿಯು ಮೃತನ ಮರಣದ ದಿನದಿಂದ ೪೫ ದಿವಸಗಳಲ್ಲಿ ನಿಯಂತ್ರಕನಿಗೆ ಸಲ್ಲಿಸದಿದ್ದರೆ ನಿಯಂತ್ರಕನು ೧೦೦೦ ರೂಪಾಯಿಗಳ ವರೆಗೆ ದಂಡವನ್ನು ವಿಧಿಸಬಹುದು ಎಂದು ಹೇಳಲಾಗಿದೆ.

**೧೯ ೧೭ ನೆಯ ಕಲಮಿನನ್ವಯವಾಗಿ ವಾರಸಾಕರದ ಆಕರಣೆ ಮತ್ತು ವಸೂಲಿ**

(೧) ೧೭ ನೆಯ ಕಲಮಿನ ಸತ್ವದ ಪ್ರಕಾರ ಮೃತನ ಮರಣದ ಮೂಲಕ ಕೊಡಬೇಕಾಗುವ ವಾರಸಾಕರದ ಬಗ್ಗೆ ಲೆಕ್ಕ ಒಪ್ಪಿಸಲು ಈ ಕೆಳಗಿನ ವ್ಯಕ್ತಿಗಳು ಬದ್ಧರಾಗುವರು. ಅವರು ಯಾರೆಂದರೆ:—

(ಅ) ಕಂಪನಿ

(ಬ) ಕಂಪನಿಯಿಂದ ಪ್ರತ್ಯಕ್ಷವಾಗಿ ಇಲ್ಲವೆ ಬೇರೆ ರೀತಿಯಿಂದ (ತನ್ನ ಸ್ವಂತದ ಉಪಭೋಗಕ್ಕೆ ಇಲ್ಲವೆ ಲಾಭಕ್ಕೆ ಕಂಪನಿಯಿಂದ ಪಡೆದ ಇಲ್ಲವೆ ಹಣದ ಕಿಮ್ಮತ್ತಿನ ಪೂರ್ಣ ಪ್ರತಿ ಬೆಲೆಯಾಗಿ ಸದ್ಭಾವದಿಂದ

ಕೊಂಡವನನ್ನು ಬಿಟ್ಟು) ಕಂಪನಿಗೆ ಇದ್ದ ಯಾವುದೇ ಸೊತ್ತುಗಳನ್ನು, ಬಂಡವಾಳವಾಗಿರಲಿ ಇಲ್ಲವೆ ಆದಾಯವಾಗಿರಲಿ, ಮರಣಕಾಲಕ್ಕೆ ಇಲ್ಲವೆ ಬೇರೆ ಯಾವುದೇ ಕಾಲಕ್ಕೆ ಪಡೆದ ಇಲ್ಲವೆ ವಿನ್ಯಾಸಮಾಡಿದ ಬೇರೆ ಯಾವುದೇ ವ್ಯಕ್ತಿಯು.

(ಕ) ಸೊತ್ತುಗಳ ವಿತರಣದ ಕಾಲಕ್ಕೆ ಕಂಪನಿಯ ಸೊತ್ತುಗಳ ವಿತರಣೆಯಲ್ಲಿ ಯಾವನು ಸ್ವೀಕರಿಸುವನೋ ಅಂತಹ ಯಾವದೇ ವ್ಯಕ್ತಿ,

ಆದರೆ, (i) ವಾಕ್ಯಾವಳಿ (ಬ) ದ ಸತ್ವದಿಂದ, ಆ ಸೊತ್ತುಗಳ ಬೆಲೆಯ ಕಿಂತ ಹೆಚ್ಚಾಗಿರುವುದಕ್ಕೆ ಕೊಡಬೇಕಾಗಿರುವ ಯಾವುದೇ ಸೊತ್ತುಗಳ ಸಂಬಂಧವಾಗಿ ಆ ವ್ಯಕ್ತಿಯು ಲೆಕ್ಕವನ್ನು ಒಪ್ಪಿಸಲು ಬದ್ಧನಾಗಿರಬಾರದು; ಇಲ್ಲವೆ,

(ii) ವಾಕ್ಯಾವಳಿ (ಕ) ಧ ಸತ್ವದಿಂದ ಕಂಪನಿಯ ಸೊತ್ತುಗಳ ಮುಖ್ಯ ಬೆಲೆಗೆ ೧೭ ನೆಯ ಕಲಮಿನ ಪ್ರಕಾರವಾಗಿ, ವಿತರಣ ಮಾಡಲ್ಪಟ್ಟ ಸೊತ್ತುಗಳ ಬೆಲೆಗೆ ಆಗುವ ಪ್ರಮಾಣದಂತೆ, ಯಾವ ಸೊತ್ತುಗಳಿಗೆ ಇಡಿ ಮತ್ತು ಕರ ಯೋಗ್ಯ ಭಾಗಗಳು ಇವುಗಳ ಪ್ರಮಾಣ ವಾಗುವುದೋ ಅಂತಹ ಸೊತ್ತುಗಳ ಬಗ್ಗೆ ಲೆಕ್ಕ ಒಪ್ಪಿಸಲು ಬದ್ಧನಾಗಿರಬಾರದು.

**ವಿವರಣೆ:** ಈ ಉಪಕಲಮಿನ ಉದ್ದೇಶಗಳಿಗಾಗಿ, "ವಿತರಣ ಮಾಡಿದ ಸೊತ್ತುಗಳು" ಮತ್ತು "ಮರಣದ ಸಮಯಕ್ಕೆ ಇಳಿದು ಬರುವ ಕಂಪನಿಯ ಸೊತ್ತುಗಳು" ಈ ಪದ ಪ್ರಯೋಗಗಳು ವಿತರಣ ಕಾಲದಲ್ಲಿ ಮೃತನಿಂದ ಸ್ವೀಕರಿಸಲಾದ ಕಂಪನಿಯ ಯಾವುದೇ ವಿತರಣ ಮಾಡಿದ ಸೊತ್ತುಗಳನ್ನು ಒಳಗೊಳ್ಳುವುದಿಲ್ಲ; ಮತ್ತು ಯಾವನು ಯಾವುದೇ ವಿತರಣ ಮಾಡಿತ ಸೊತ್ತುಗಳನ್ನು ಸ್ವೀಕರಿಸಿರುವನೋ ಆ ವ್ಯಕ್ತಿಯು ಮೃತನಕಿಂತ ಮೊದಲು ಮರಣ ಹೊಂದಿದರೆ, (ಕ) ವಾಕ್ಯಾವಳಿಯ ಸತ್ವದ ಪ್ರಕಾರ ಅವನು ಲೆಕ್ಕ ಒಪ್ಪಿಸಲು ಯೋಗ್ಯವಾದ ವ್ಯಕ್ತಿಯೆಂದು ಗಣಿಸಲ್ಪಡಲಾಗುವುದು.

(೨) ಹಿಂದಿನ ಉಪಕಲಮಿನ ಇಲ್ಲವೆ ಈ ಉಪಕಲಮಿನ ಸತ್ವದ ಪ್ರಕಾರ ಯಾವುದೇ ಕರಕ್ಕಾಗಿ ಲೆಕ್ಕ ಒಪ್ಪಿಸಲು ಯೋಗ್ಯವಾಗಿರುವ ಕಂಪನಿಯು ಈ ಕಾಯಿದೆಯು ವ್ಯಾಪಿಸಿದ ಕ್ಷೇತ್ರದ ಹೊರಗೆ ಸಂಸ್ಥಾಪಿಸಲ್ಪಟ್ಟಿದ್ದರೆ, ಮರಣದ ಕಾಲಕ್ಕೆ ಯಾವನು ಆ ಕಂಪನಿಯ ಸದಸ್ಯರಾಗಿರುವನೋ ಅಂತಹ ಪ್ರತಿಯೊಬ್ಬ ವ್ಯಕ್ತಿಯೂ ಆ ಕಂಪನಿಯಲ್ಲಿಯ ತನ್ನ ಹಿತಸಂಬಂಧದ ಬೆಲೆಗೆ ಪ್ರಮಾಣವಾಗಿರುವ ಕರ ಯೋಗ್ಯವಾಗಿರುವ ಭಾಗದ ಬಗ್ಗೆ ಲೆಕ್ಕ ಒಪ್ಪಿಸಲು ಬಾಧ್ಯನಾಗುವನು.

(೩) ಈ ಕಲಮಿನ ಸತ್ವದ ಪ್ರಕಾರ ಯಾವುದೇ ಕರಕ್ಕೆ ಲೆಕ್ಕ ಒಪ್ಪಿಸಲು ಬಾಧ್ಯನಾಗಿರುವ ವ್ಯಕ್ತಿಗೆ ಕರವನ್ನು ಆಕರಿಸವ ಮತ್ತು ಸಲ್ಲಿಸುವ ಉದ್ದೇಶಕ್ಕಾಗಿ ಲೆಕ್ಕ ಒಪ್ಪಿಸುವ ಪಕ್ಷಕಾರರಿಗೆ ಇರುವ ಎಲ್ಲ ಅಧಿಕಾರಿಗಳು ಉಂಟಾಗುವುವು.

(೪) ಕಂಪನಿಯು ಮುಕ್ತಾಯ ಮಾಡಲ್ಪಟ್ಟಿರುವಾಗ ೧೯೧೩ ರ ಇಂಡಿಯನ್ ಕಂಪನೀಜ ಆ್ಯಕ್ಟ (೧೯೧೩ ರ vii) ದ ೨೩೦ ನೆಯ ಕಲಮಿನ ಉಪಕಲಮು (೧) ಆ ಉಪಕಲಮಿನ ವಾಕ್ಯಾವಳಿ (ಅ) ದಲ್ಲಿ ಸಮಾವೇಶ ಮಾಡಲ್ಪಟ್ಟಿದ್ದಂತೆ ಪರಿಣಾಮಕಾರಿಯಾಗುವುದು: ಈ ಕಾಯಿದೆಯ ೧೬ ನೆಯ ಕಲಮಿನ ಮತ್ತು ೧೯೧೩ ರ ಇಂಡಿಯನ್ ಕಂಪನೀಜ ಆ್ಯಕ್ಟದ ೧೨೫ ನೆಯ ಕಲಮಿನ ಸತ್ವದ ಪ್ರಕಾರ ಮರಣ ಸಮಯಕ್ಕೆ ಇಳಿದು ಬರುವ ಕಂಪನಿಯ ಸೊತ್ತುಗಳ ವಿಷಯವಾಗಿ ಕೊಡ ಬೇಕಾಗುವ ಯಾವುದೇ ಕರಕ್ಕೆ ಮಾಡಲಾದ ನಿರ್ದೇಶನವು ಅದರನುಸಾರವಾಗಿ ಪರಿಣಾಮಕಾರಿಯಾಗುವುದು.

(೫) ೧೭ ನೆಯ ಕಲಮಿನ ಸತ್ವದ ಪ್ರಕಾರ ಮೃತನ ಮರಣದ ಸಮಯಕ್ಕೆ ಕೊಡಬೇಕಾದ ಕರವು ಮರಣ ಸಮಯಕ್ಕೆ ಇಲ್ಲವೆ ನಂತರ ಯಾವುದೇ ಕಾಲಕ್ಕೆ ಕಂಪನಿಗೆ ಇರುವ ಸೊತ್ತುಗಳ ಮೇಲೆ ಪ್ರವಾಹಿ ಆಶ್ವಾಸನ ರೂಪದಲ್ಲಿ ಪ್ರಥಮ ಭಾರವಾಗುವುದು. ಮತ್ತು ಉಪಕಲಮು (೧) ರ ವಾಕ್ಯಾವಳಿ (ಕ) ದ ಸತ್ವದ ಪ್ರಕಾರ ಕರದ ಯಾವುದೇ ಭಾಗಕ್ಕೆ ಯಾವುದೇ ವ್ಯಕ್ತಿಯು ವಿತರಣ ಮಾಡಿದ ಸೊತ್ತುಗಳ ವಿಷಯವಾಗಿ ಲೆಕ್ಕ ಒಪ್ಪಿಸಲು ಬಾಧ್ಯನಾಗಿರುವನೋ ಆ ಭಾಗವು ಆ ಸೊತ್ತುಗಳ ಮೇಲೆ ಪ್ರಥಮ ಭಾರವಾಗುವುದು.

ಆದರೆ, ನೋಟೀಸು ಇಲ್ಲದೆಯ ಮೂಲ್ಯಸಹಿತ ಪ್ರತಿ ಬೆಲೆಗೆ ಸದ್ಭಾವದಿಂದ ಕೊಂಡವನ ವಿರುದ್ಧವಾಗಿ ಯಾವುದೇ ಆಸ್ತಿಯ ಮೇಲೆ ಕರಭಾರ ಹೇರುವಂತೆ ಈ ಉಪಕಲಮಿನಲ್ಲಿಯ ಯಾವುದೂ ಕಾರ್ಯಕಾರಿಯಾಗದು.

(೬) ಎಲ್ಲಿ ಯಾವುದೇ ಕರವು

(ಅ) ಉಪಕಲಮು (೧) ವಾಕ್ಯಾವಳಿ (ಕ)ದ ಸತ್ವದ ಪ್ರಕಾರವಾಗಿ ಮಾತ್ರ ಯಾವುದಕ್ಕಾಗಿ ಲೆಕ್ಕ ಒಪ್ಪಿಸಲು ಬಾಧ್ಯನಾಗಿರುವನೋ ಆ ವ್ಯಕ್ತಿಯಿಂದ ಕೊಡಲ್ಪಟ್ಟಿದ್ದರೆ. ಇಲ್ಲವೆ

(ಬ) ಉಪಕಲಮು(೫)ರ ಸತ್ವದ ಪ್ರಕಾರ ಕರಭಾರ ಹಾಕಲ್ಪಟ್ಟ ವಿತರಣ ಮಾಡಿದ ಯಾವುದೇ ಸೊತ್ತುಗಳೊಳಗಿಂದ ಎತ್ತುವಳಿ ಮಾಡಿದ್ದರೆ,

ಆ ವ್ಯಕ್ತಿಯು ಇಲ್ಲವೆ ಸಂದರ್ಭಾನುಸಾರವಾಗಿ ಆ ಸೊತ್ತುಗಳಿಗೆ ಹಕ್ಕುದಾರನಾಗಿರುವ ವ್ಯಕ್ತಿಯು (ಈ ಉಪಕಲಮು ಬಿಟ್ಟು ಬೇರೆಯಾಗಿ, ಪರಿಹಾರಕ್ಕೆ ಇಲ್ಲವೆ ವಂತಿಗೆಗಾಗಿ ಅವನಿಗೆ ಇರುವ ಯಾವುದೇ ಹಕ್ಕಿಗೆ ವ್ಯತ್ಯಯ

ಬರೆದಂತೆ) ಈ ಮೊದಲು ಹೇಳಿದಂತೆ ಕೊಡಲಾದ ಇಲ್ಲವೆ ಎತ್ತುವಳಿ ಮಾಡ ಲಾದ ಕರದ ಹಣವನ್ನು ಮೇಲೆ ಹೇಳಿದ ವಾಕ್ಯಾವಳಿ (ಕ) ದ ಸತ್ವದ ಪ್ರಕಾರ ವಾಗಿ ಅಲ್ಲದೆ ಬೇರೆಯಾಗಿ ಲೆಕ್ಕ ಒಪ್ಪಿಸಲು ಬಾಧ್ಯನಾಗಿರುವ ಯಾವುದೇ ವ್ಯಕ್ತಿಯಿಂದ ಮರಳಿ ಪಡೆಯಬಹುದು.

(೨) ಮೃತನ ಮರಣದ ಕಾಲಕ್ಕೆ ಕಂಪನಿಗೆ ಇದ್ದ ಸೊತ್ತುಗಳ ಮೇಲೆ ಕರಭಾರ ಹಾಕಿದ ಯಾವುದೇ ಹಣಕ್ಕೆ ಇಲ್ಲವೆ ಆ ಸೊತ್ತುಗಳಲ್ಲಿಯ ಯಾವುದೇ ಹಿತಸಂಬಂಧಕ್ಕೆ ತಾನು ಹಕ್ಕುದಾರನು ಇರುವನೆಂಬ ಕಾರಣಕ್ಕಾಗಿ ಮಾತ್ರ ಯಾವುದೇ ವ್ಯಕ್ತಿಯಿಂದ ಕಂಪನಿಯು ಆ ಮೊದಲು ಕೊಟ್ಟ ಕರದ ಯಾವುದೇ ಭಾಗವು ಮರಳಿ ಪಡೆಯಲು ಯೋಗ್ಯವಾಗುವುದಿಲ್ಲ.

(೮) ೧೭ ನೆಯ ಕಲಮಿನ ಸತ್ವದ ಪ್ರಕಾರ ಕೊಡಬೇಕಾಗಿರುವ ಕರದ ಸಂಬಂಧವಾಗಿ ೫೩ ನೆಯ ಕಲಮಿನ ಉಪಕಲಮು (೧) ಮತ್ತು (೩) ಗಳ ಕಕ್ಷೆಗಳು ಪರಿಣಾಮಕಾರಿಯಾಗುವುದಿಲ್ಲ.

**ವಿವೇಚನೆ:**

ನಿಯಂತ್ರಿತ ಕಂಪನಿಗೆ ಹಸ್ತಾಂತರ ಮಾಡಿದ ಆಸ್ತಿಯ ಮೇಲೆ ಮೃತನ ಮರ ಣದ ಮೂಲಕ ಯಾರು ಕರ ಕೊಡಲು ಲೆಕ್ಕ ಒಪ್ಪಿಸಬೇಕು ಎಂಬ ವ್ಯಕ್ತಿಗಳ ಬಗ್ಗೆ ಈ ಕಲಮು ಹೇಳುವುದು. ಕರ ಕೊಡುವುದಕ್ಕಾಗಿ ಅವರಿಗೆ ಯಾವ ಯಾವ ಅಧಿಕಾರ ಗಳು ದಯಪಾಲಿಸಲ್ಪಟ್ಟಿರುವುವು ಎಂಬುದನ್ನು ಹೇಳುವುದು.

ಕಂಪನಿಯು ಲೆಕ್ಕ ಒಪ್ಪಿಸಬೇಕು; ಮರಣದ ಕಾಲಕ್ಕೆ ಇಲ್ಲವೆ ತದನಂತರ ಕಂಪನಿಯಿಂದ ಅದರ ಸೊತ್ತುಗಳನ್ನು ಯಾರು ಸ್ವೀಕರಿಸುವರೋ ಅವರು ಲೆಕ್ಕ ಒಪ್ಪಿಸ ಬೇಕು. ಆದರೆ ಸದ್ಭಾವದಿಂದ ಮಾರಲಿಕ್ಕೆ ಪ್ರತಿಬೆಲೆಯ ಹಣಕೊಟ್ಟು ತೆಗೆದು ಕೊಂಡವನು ಈ ಬಗೆಯಾಗಿ ಲೆಕ್ಕ ಒಪ್ಪಿಸಲು ಬಾಧ್ಯನಲ್ಲ. ಕಂಪನಿಯು ತನ್ನ ಸೊತ್ತುಗಳನ್ನು ವಿತರಣ ಮಾಡಿದರೆ ಹಾಗೆ ವಿತರಣೆ ಮಾಡಿದ ಸೊತ್ತುಗಳನ್ನು ಸ್ವೀಕರಿ ಸಿದ ವ್ಯಕ್ತಿಯು ಲೆಕ್ಕ ಒಪ್ಪಿಸಬೇಕು. ಕಂಪನಿಯು ಈ ಕಾಯಿದೆಯು ವ್ಯಾಪಿಸಿದ ಕ್ಷೇತ್ರದ ಹೊರಗೆ ಸಂಸ್ಥಾಪಿಸಲ್ಪಟ್ಟಿದ್ದರೆ, ಮರಣಕಾಲದಲ್ಲಿ ಆ ಕಂಪನಿಯ ಸದಸ್ಯ ನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯು ಲೆಕ್ಕವನ್ನು ಒಪ್ಪಿಸಲು ಬಾಧ್ಯನು.

ಈ ಕಾಯಿದೆಯ ಬೇರೆ ಕಲಮುಗಳಲ್ಲಿ ದಯಪಾಲಿಸಲಾದ ಎಲ್ಲ ಅಧಿಕಾರ ಗಳನ್ನು ಕರಕೊಡಲು ಲೆಕ್ಕ ಒಪ್ಪಿಸಲು ಬಾಧ್ಯರಾದವರಿಗೆ ಕೊಡಲಾಗಿರುವುದು.

ಕಂಪನಿಯು ಮುಕ್ತಾಯ ಮಾಡಲ್ಪಟ್ಟರೆ, ಇಂಡಿಯನ್ ಕಂಪನಿ ಕಾಯಿದೆಯ ೨೩೦ ನೆಯ ಕಲಮಿನ ಉಪಕಲಮು ೧೨ (ಅ) ಅನ್ವಯಿಸುವುದು. ಅದರ ಪ್ರಕಾರ

ಸರಕಾರಕ್ಕೆ ಕೊಡಬೇಕಾದ ಕಂದಾಯ, ಕರ, ತೆರಿಗೆಗಳು ಉಳಿದ ಸಾಹುಕಾರರ ಹಕ್ಕಿನಕಿಂತ ಪ್ರಾಥಮಿಕತೆ ಪಡೆಯುವವು. ಇಂಡಿಯನ್ ಕಂಪನಿ ಕಾಯಿದೆಯ ೧೯೯ ನೆಯ ಕಲಮಿನ ಪ್ರಕಾರ ಇಂತಹ ಕರ ತೆರಿಗೆಗಳು ಸಾಹುಕಾರರ ಡಿಬೆಂಚರ ಗಳಿಗಿಂತಲೂ ಪ್ರಾಥಮಿಕತೆಯನ್ನು ಪಡೆವುವು. ಅದರಂತೆ ಈ ವಾರಸಾಕರ ಕಾಯಿದೆಯ ಪ್ರಕಾರ ವಾರಸಾಕರವು ಕೂಡ ಉಳಿದ ಸಾಲಗಳಕಿಂತಲೂ ಪ್ರಾಥಮಿಕತೆಯನ್ನು ಪಡೆವುದು.

**೨೦ ನಿಯಂತ್ರಿತ ಕಂಪನಿಗಳ ವಿಷಯವಾಗಿ ಸಾಮಾನ್ಯವಾಗಿ ನಿಯಮಗಳನ್ನು ಮಾಡಲು ಅಧಿಕಾರ**

ಬೋರ್ಡು ನಿಯಮಗಳನ್ನು

(ಅ) ೧೬ ನೆಯ ಕಲಮಿನ ಅರ್ಥದಲ್ಲಿ ನಿಯಂತ್ರಿತ ಕಂಪನಿಗೆ ಹಸ್ತಾಂತರ ಮಾಡಲಾಗಿದೆಯೆಂದು ಗಣಿಸಲ್ಪಡಲಾಗುವ ವಿನ್ಯಾಸದ ಇಲ್ಲವೆ ಕ್ರಿಯೆಗಳ ವರ್ಗಗಳನ್ನು ಗೊತ್ತು ಮಾಡುವುದಕ್ಕೆ;

(ಬ) ಇಂತಹ ಯಾವುದೇ ನಿಯಂತ್ರಿತ ಕಂಪನಿಯಿಂದ ಮೃತನಿಗೆ ಲಾಭಗಳು ಒದಗಿ ಬಂದಿರುವದೆಂದು ಎಣಿಸಲಾಗುವ ವಿಷಯಗಳನ್ನು ಗೊತ್ತುಮಾಡುವದಕ್ಕೆ, ಅವುಗಳ ಹಣವನ್ನು ಯಾವರೀತಿಯಲ್ಲಿ ನಿರ್ಧರಿಸಬೇಕೆಂಬುದನ್ನು ಗೊತ್ತುಮಾಡುವುದಕ್ಕೆ, ಮತ್ತು ಯಾವ ಕಾಲಕ್ಕೆ ಒದಗಿ ಬಂದುವು ಎಂಬುದನ್ನು ತಿಳಿಯುವುದನ್ನು ಗೊತ್ತುಮಾಡುವುದಕ್ಕೆ;

(ಕ) ಇಂತಹ ಯಾವುದೇ ಕಂಪನಿಯ ಸೊತ್ತುಗಳ ಬೆಲೆ ಮತ್ತು ನಿಕ್ಕಿ ಆದಾಯವನ್ನು ನಿರ್ಧರಿಸಲು ರೀತಿಯನ್ನು ಗೊತ್ತುಮಾಡುವದಕ್ಕೆ;

(ಡ) ಇಂತಹ ಯಾವುದೇ ಕಂಪನಿಯ ಲೆಕ್ಕದ ವರುಷವನ್ನು ಗುರುತಿಸಲು ರೀತಿಯನ್ನು ಗೊತ್ತುಮಾಡುವುದಕ್ಕೆ;

(ಇ) ಮೃತನ ಮರಣದ ಕಾಲಕ್ಕೆ ಇಂತಹ ಕಂಪನಿಯ ಪಾಲುಗಳು ಮತ್ತು ಡಿಬೆಂಚರುಗಳು ಇವುಗಳನ್ನು ವಾರಸಾಕರಕ್ಕಾಗಿ ಹೇಗೆ ಬೆಲೆ ಕಟ್ಟಬೇಕೆಂಬ ರೀತಿಯನ್ನು ಗೊತ್ತುಮಾಡುವುದಕ್ಕೆ;

(ಫ) ಇಂತಹ ಯಾವುದೇ ಕಂಪನಿಗೆ ಮೃತನಿಂದ ಹಸ್ತಾಂತರಿಸಲಾದ ಆಸ್ತಿಯ ಬೆಲೆಗೆ ಸಂಬಂಧಪಟ್ಟು ನೋಲ್ಮಿತಿಯನ್ನು ಗೊತ್ತುಮಾಡಲು ಮತ್ತು ಕರಭಾರದ ಪುನರಾಕರಣೆಯನ್ನು ಎಲ್ಲಿ ಇಂತಹ ಯಾವುದೇ ಕಂಪನಿಯ ಎರಡೂ ಸೊತ್ತುಗಳ ಇಲ್ಲವೆ ಅವುಗಳ ಪ್ರಮಾಣಿತ ಭಾಗವನ್ನು

ಬೇರೆ ರೀತಿಯಿಂದ ಕರವು ಕೊಡಲು ಯೋಗ್ಯವಾಗಿರುವುದೋ ಅಲ್ಲಿ ತಡೆಯುವದಕ್ಕೆ ಮತ್ತು ಇಂತಹ ಯಾವುದೇ ಕಂಪನಿಯಲ್ಲಿ ಮೃತನು ಪಾಲುಗಳನ್ನು ಮತ್ತು ಡಿಬೆಂಚರುಗಳನ್ನು ಧಾರಣಮಾಡುವುದನ್ನು ತಡೆಯುವದಕ್ಕೆ;

(ಗ) ಇಂತಹ ಯಾವುದೇ ಕಂಪನಿಯ ಹೆಸರಿನಲ್ಲಿ ಮಾಡಲಾದ ಹಸ್ತಾಂತರಗಳು ಪೂರ್ಣ ಪ್ರತಿಬೆಲೆಗಾಗಿ ಸದ್ಭಾವದಿಂದ ಮಾಡಲಾದ ಹಸ್ತಾಂತರಗಳೆಂದು ಗಣಿಸಲ್ಪಡುವುದಕ್ಕೆ ಯಾವ ಕರಾರುಗಳು ಅವಶ್ಯವೋ ಮತ್ತು ಎಷ್ಟು ವ್ಯಾಪ್ತಿ ಅವಶ್ಯವೋ ಅದನ್ನು ಗೊತ್ತುಮಾಡುವುದಕ್ಕೆ; ಮತ್ತು

(ಹ) ಇಂತಹ ಯಾವುದೇ ಕಂಪನಿಯ ವ್ಯವಸ್ಥೆಯಿಂದ ಸಾಮಾನ್ಯವಾಗಿ ವಾರಸಾಕರವನ್ನು ತಪ್ಪಿಸುವುದನ್ನು ತಡೆಯುವ ಉದ್ದೇಶಕ್ಕೆ, ಮಾಡಬಹುದು.

(೨) ಈ ಕಲಮಿನನ್ವಯವಾಗಿ ಮಾಡಲಾದ ಎಲ್ಲ ನಿಯಮಗಳು ಅವುಗಳ ಕೊನೆಯ ಪ್ರಕಟನೆಯ ದಿನಾಂಕದಕಿಂತ ಮೊದಲು ಹದಿನೈದು ದಿನಗಳಿಗೆ ಕಡಿಮೆ ಇಲ್ಲದಷ್ಟು ಮೊದಲು ಲೋಕಸಭೆಯಲ್ಲಿ ಮಂಡಿಸಲ್ಪಟ್ಟಿರಬೇಕು.

**ವಿವೇಚನೆ:**

ಈ ಕಲಮಿನ ಸಹಾಯದಿಂದ ಬೋರ್ಡಿಗೆ ಕಾಲಕಾಲಕ್ಕೆ ನಿಯಮಗಳನ್ನು ಮಾಡಲು ಅಧಿಕಾರ ಕೊಡಲಾಗಿದೆ. ವಾರಸಾಕರವನ್ನು ತಪ್ಪಿಸಲು ಮಾಡಿದ ಹವಣಿಕೆಗಳನ್ನು ಕಂಡು ಹಿಡಿದು ಅವುಗಳನ್ನು ತಡೆಗಟ್ಟಲು ನಿಯಮಗಳು ಅವಶ್ಯವಿವೆ. ಈಗಾಗಲೇ ನಿಯಮಗಳು ಮಾಡಲ್ಪಟ್ಟಿವೆ. ಈ ಭಾಗದಲ್ಲಿ ಅಲ್ಲಲ್ಲಿ ತುಸ ಹೇಳಲಾಗಿದೆ. ನಿಯಮಗಳ ಹೆಚ್ಚಿನ ವಿವರಗಳನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

❖❖❖❖❖❖❖❖

# ಭಾಗ ಮೂರು

## ವಾರಸಾಕರ ಭಾರಕ್ಕಾಗಿ ಅಪವಾದಗಳು

**೨೧ ಪರದೇಶದ ಆಸ್ತಿ**

(೧) ಮೃತನ ಮರಣದ ಸಮಯಕ್ಕೆ ಇಳಿದು ಬರುವ ಆಸ್ತಿಯಲ್ಲಿ—

(ಅ) ಈ ಕಾಯಿದೆಯು ವ್ಯಾಪಿಸಿದ ಕ್ಷೇತ್ರದ ಹೊರಗೆ ಇರುವ ಸ್ಥಾವರ ಆಸ್ತಿಯು,

(ಬ) ಈ ಕಾಯಿದೆಯು ವ್ಯಾಪಿಸಿದ ಕ್ಷೇತ್ರದ ಹೊರಗೆ ಮರಣ ಸಮಯಕ್ಕೆ ಇರುವ ಜಂಗಮ ಆಸ್ತಿಯು,

(i) ನಿವೇಶಿತವಾದ ಇಲ್ಲವೆ ಅನಿವೇಶಿತವಾದ ಯಾವುದೇ ಆಸ್ತಿಯ ಸಂದರ್ಭದಲ್ಲಿ ಮೃತನು ಮರಣ ಸಮಯಕ್ಕೆ ಮೇಲೆ ಹೇಳಿದ ಪ್ರದೇಶಗಳಲ್ಲಿ ದೇಶವಾಸಿಯಾಗಿರದಿದ್ದರೆ; ಇಲ್ಲವೆ,

(ii) ನಿವೇಶಿತವಾದ ಆಸ್ತಿಯು ಇದ್ದ ಸಂದರ್ಭದಲ್ಲಿ ಯಾವುದಕ್ಕೆ ಮೃತನು ಜೀವನಮಾನದ ಒಕ್ಕಲು ಆಗಿದ್ದರೆ ನಿವೇಶನ ಮಾಡಿದವನು ಮೇಲೆ ಹೇಳಿದ ಪ್ರದೇಶಗಳಲ್ಲಿ ನಿವೇಶನವಾದ ತಾರೀಖಿಗೆ ದೇಶವಾಸಿಯಾಗಿರದಿದ್ದರೆ;

ಸಮಾವೇಶವಾಗಲಾರದು.

(೨) ಈ ಕಲಮಿನ ಉದ್ದೇಶಗಳಿಗಾಗಿ ಬೇರೆ ಬೇರೆ ವರ್ಗಗಳ ಸೊತ್ತುಗಳ ಸ್ವಭಾವ ಮತ್ತು ಸ್ಥಳ ನಿರ್ಧರಿಸುವ ರೀತಿಗಳನ್ನು ಕ್ರಮವಾಗಿಸಲು ಬೋರ್ಡು ನಿಯಮಗಳನ್ನು ಮಾಡಬಹುದು.

**ವಿವೇಚನೆ:**

ಪರದೇಶದಲ್ಲಿಯ ಆಸ್ತಿಯು ವಾರಸಾಕರ ಯೋಗ್ಯವಾಗಿದೆಯೋ ಇಲ್ಲವೋ ಎಂಬುದನ್ನು ಈ ಕಲಮು ಹೇಳುವುದು. ಆ ಆಸ್ತಿಯು ಎಲ್ಲಿದೆ? ಅದು ಸ್ಥಾವರವೋ ಜಂಗಮವೋ? ಮೃತನ ವಾಸಪ್ರದೇಶವು ಯಾವುದು? ನಿವೇಶಿತ ಆಸ್ತಿಯಾಗಿದ್ದರೆ ನಿವೇಶನ ಮಾಡಿದವನ ವಾಸಪ್ರದೇಶವು ನಿವೇಶನ ಮಾಡಿದ ಕಾಲಕ್ಕೆ ಯಾವುದಾಗಿದ್ದಿತು? ಈ ಪ್ರಶ್ನೆಗಳಿಗೆ ಬರುವ ಉತ್ತರಗಳ ಮೇಲೆ ಕರಪಾತ್ರತೆ ಇಲ್ಲವೆ ಕರಮುಕ್ತತೆಯು ಅವಲಂಬಿಸಿರುವುದು. ಭಾರತದ ಹೊರಗೆ ಇರುವ ಸ್ಥಾವರ

ಆಸ್ತಿಯ ಮೇಲೆ ವಾರಸಾಕರ ಹಾಕಲಾಗದು. ಜಂಗಮ ಆಸ್ತಿಯು ಭಾರತದ ಹೊರಗೆ ಇದ್ದರೆ, ಮೃತನು ಮರಣ ಕಾಲಕ್ಕೆ ಭಾರತದ ದೇಶವಾಸಿಯಾಗಿರದಿದ್ದರೆ, ವಾರಸಾಕರ ಹಾಕಲಾಗದು. ಒಂದು ವೇಳೆ ಮೃತನು ಜೀವಮಾನದ ಒಕ್ಕಲು ಆಗಿದ್ದರೆ, ನಿವೇಶನ ಮಾಡಿದ ತಾರೀಖಿಗೆ ನಿವೇಶನ ಮಾಡಿದವನು ಭಾರತದ ದೇಶವಾಸಿಯಾಗಿದ್ದರೆ ಆ ಜಂಗಮ ಆಸ್ತಿಯು ಕರಪಾತ್ರವಾಗುವುದು.

ಸ್ಥಾವರ ಆಸ್ತಿ ಎಂಬ ಹೆಸರು ಭೌತಿಕವಾಗಿ ಅದು ಎಲ್ಲಿ ಇರುತ್ತದೆಯೊ ಅದೇ ಅದರ ಸ್ಥಳವೆಂಬುದನ್ನು ಸೂಚಿಸುವುದು. ಜಂಗಮ ಆಸ್ತಿಯ ಸ್ಥಳವನ್ನು ಅವುಗಳು ಇದ್ದಲ್ಲಿ ಎಂದು ತಿಳಿಯಬೇಕು. ಒಂದು ವೇಳೆ ಅವು ಮೃತನ ಮರಣದ ಸಮಯಕ್ಕೆ ಸಂಚಾರದಲ್ಲಿದ್ದರೆ, ಅವು ಮುಟ್ಟಬೇಕಾದ ಸ್ಥಳವೇ ಅವುಗಳ ಸ್ಥಳವೆಂದು ಗಣಿಸಲ್ಪಡಲಾಗುವುದು. ಒಮ್ಮೆ ಒಂದು ಆಸ್ತಿಯು ಇದ್ದ ಸ್ಥಳವು ನಿರ್ಣಯಿತವಾದ ಮೇಲೆ ಅದು ಸ್ಥಾವರವೊ ಜಂಗಮವೋ ಎಂಬುದನ್ನು ಆ ದೇಶದ ಕಾಯಿದೆಯು ನಿರ್ಣಯಿಸುವುದು. ಮೃತನ ದೇಶವಾಸವನ್ನು ನಿರ್ಣಯಿಸಲು ಈ ಕಾಯಿದೆಯ ಕಲಮು ೩೨ (೧)(ಡ)ನೆರವಾಗುವುದು. ಈ ಕಲಮಿಗೆ ದೇಶವಾಸದ ಪ್ರಶ್ನೆಯು ಬಹು ಮುಖ್ಯವಾದುದು ಆಗಿದೆ.

ಮೃತನ ಮರಣದ ಕಾಲಕ್ಕೆ ಇಳಿದು ಬರುವ ಆಸ್ತಿಯಲ್ಲಿ, ಮೃತನು ಕರಪಾತ್ರವಾದ ಪ್ರದೇಶದಲ್ಲಿ ದೇಶವಾಸಿಯಾಗಿದ್ದರೆ, ಆ ಪ್ರದೇಶದಲ್ಲಿಯ ಸ್ಥಾವರ ಆಸ್ತಿ, ಎಲ್ಲಿ ಬೇಕಾದಲ್ಲಿ ಇದ್ದರೂ ಆ ಜಂಗಮ ಆಸ್ತಿ, ಸಮಾವೇಶವಾಗುವುವು. ಮೃತನು ಮರಣದ ಕಾಲಕ್ಕೆ ಕರಪಾತ್ರವಾದ ಪ್ರದೇಶದಲ್ಲಿ ದೇಶವಾಸಿಯಾಗಿರದಿದ್ದರೆ, ಕರಪಾತ್ರವಾದ ಪ್ರದೇಶದಲ್ಲಿಯ ಸ್ಥಾವರ ಆಸ್ತಿ, ಜಂಗಮ ಆಸ್ತಿಗಳು ಸಮಾವೇಶವಾಗುವುವು. ಜಂಗಮ ಆಸ್ತಿಯು ನಿವೇಶಿತವಾದುದುದಾಗಿದ್ದರೆ, ಮತ್ತು ಮೃತನು ಜೀವಮಾನದ ಒಕ್ಕಲು ಆಗಿದ್ದರೆ, ನಿವೇಶನ ಮಾಡಿದ ತಾರೀಖಿಗೆ ನಿವೇಶನ ಮಾಡಿದವನು ಕರಪಾತ್ರವಾಗುವ ಪ್ರದೇಶದಲ್ಲಿ ದೇಶವಾಸಿಯಾಗಿದ್ದರೆ ಆ ಜಂಗಮ ಆಸ್ತಿಯು ಕರಪಾತ್ರವಾಗುವುದು.

ಆಸ್ತಿಯ ಸ್ವಭಾವ ಮತ್ತು ಸ್ಥಳ ನಿರ್ಧಾರ ಮಾಡಲು ಈ ಕಲಮಿನನ್ವಯವಾಗಿ ನಿಯಮಗಳನ್ನು ಮಾಡಲು ಬೋರ್ಡಿಗೆ ಅಧಿಕಾರ ಕೊಡಲಾಗಿದೆ. ಬೋರ್ಡು ಈ ನಿಯಮಗಳನ್ನು ಮಾಡಿದೆ. ಅವುಗಳ ಸಾರ ಸಂಗ್ರಹವನ್ನು ಈ ಪುಸ್ತಕದ ಕೊನೆಗೆ ಪರಿಶಿಷ್ಠದಲ್ಲಿ ಕೊಡಲಾಗಿದೆ. ಸ್ಥಾವರ ಜಂಗಮ ಆಸ್ತಿಯನ್ನು ನಿರ್ಣಯಿಸಲು **ನಿಯಮ ೯** ಉಪಯೋಗವಾಗುವುದು. **ನಿಯಮ ೧೦** ಜಂಗಮ ಆಸ್ತಿಯ ಸ್ಥಳ ನಿರ್ಣಯಿಸಲು ನೆರವಾಗುವುದು. **ನಿಯಮ ೧೧** ಸ್ಥಾವರ ಆಸ್ತಿಯ ಸ್ಥಳ ನಿರ್ಣಯಿಸುವುದಕ್ಕೆ ಸಹಾಯಕವಾಗುವುದು.

೨೨. ಮೃತನು ಧರ್ಮದರ್ಶಿಯೆಂದು ಧಾರಣ ಮಾಡಿದ ಆಸ್ತಿ

ಮೃತನಿಂದ ಮಾಡಲ್ಪಡದೆ ಇದ್ದ ವಿನ್ಯಾಸದನ್ವಯವಾಗಿ ಇನ್ನೊಬ್ಬ ವ್ಯಕ್ತಿಯ ಸಲುವಾಗಿ ಮೃತನಿಂದ ಧರ್ಮದರ್ಶಿಎಂದು ಧಾರಣಮಾಡಲ್ಪಟ್ಟ ಆಸ್ತಿಯು ಇಲ್ಲವೆ ಮೃತನಿಂದ ಮಾಡಲ್ಪಟ್ಟ ವಿನ್ಯಾಸದನ್ವಯವಾಗಿ, (ಮೂಲದ ವಿನ್ಯಾಸದ ಸತ್ವದ ಪ್ರಕಾರ ಇಲ್ಲವೆ, ಮೂಲದಲ್ಲಿ ಮೃತನಿಂದ ಕಾಯಿದಿರಿಸಿ ಕೊಂಡ ಯಾವುದೇ ಲಾಭದ ಬಗ್ಗೆ ನಂತರ ಹಕ್ಕುಬಿಟ್ಟುಕೊಟ್ಟದ್ದರಿಂದ ಇಲ್ಲವೆ ಬೇರೆ ರೀತಿಯಿಂದ ) ಆಸ್ತಿಯ ಸ್ವಾಧೀನತೆ ಮತ್ತು ಉಪಭೋಗವು ಲಾಭ ಗ್ರಾಹಿಯಿಂದ ಸದ್ಭಾವದಿಂದ ಮೃತನ ಮರಣ ಪೂರ್ವದಲ್ಲಿ ಕನಿಷ್ಠ ಎರಡು ವರುಷಗಳ ವರೆಗಾದರೂ ವಹಿಸಿಕೊಳ್ಳಲ್ಪಟ್ಟಿದ್ದು ಮತ್ತು ತದನಂತರ ಮೃತ ನನ್ನು ಸಂಪೂರ್ಣ ಹೊರತು ಪಡಿಸಿ ಇಟ್ಟುಕೊಂಡಿದ್ದರೆ, ಇಲ್ಲವೆ .ಕರಾರುಪತ್ರ ಇಲ್ಲವೆ ಬೇರೆ ರೀತಿಯಿಂದ ಯಾವುದೇ ಲಾಭವನ್ನು ಹಾಗೆ ಇಟ್ಟುಕೊಂಡಿದ್ದರೆ ಆಗ ಆ ಆಸ್ತಿಯು ಮೃತನ ಮರಣದ ಕಾಲಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗದು.

ಆದರೆ, ಮೃತನಿಂದ ಏಕಮೇವ ಧರ್ಮದರ್ಶಿಯೆಂದು ಮೃತನೇ ಮಾಡಿದ ವಿನ್ಯಾಸದನ್ವಯವಾಗಿ ಇನ್ನೊಬ್ಬರಿಗಾಗಿ ಧಾರಣಮಾಡಿದ ಆಸ್ತಿಯು ಇರುವ ಸಂದರ್ಭದಲ್ಲಿ ಆ ಕಾಲಾವಧಿಯು ಐದು ವರುಷವೆಂದಾಗುವುದು.

**ವಿವೇಚನೆ :**

ಮೃತನು ವಿನ್ಯಾಸ ಮಾಡದೇ ಇದ್ದ ಆಸ್ತಿಯನ್ನು ಮೃತನು ಇನ್ನೊಬ್ಬರಿಗಾಗಿ ಧರ್ಮದರ್ಶಿಯೆಂದು ಧಾರಣ ಮಾಡಿದ್ದರೆ ಆ ಆಸ್ತಿಯು ವಾರಸಾಕರ ಮುಕ್ತವಾಗಿರುವುದು. ಒಂದು ವೇಳೆ ಮೃತನು ತಾನೇ ವಿನ್ಯಾಸ ಮಾಡಿ, ಆ ಆಸ್ತಿಗೆ ತಾನು ಇನ್ನೊಬ್ಬನ ಸಲುವಾಗಿ ಧರ್ಮದರ್ಶಿಯೆಂದು ಆದ್ದರೆ, ಆ ಆಸ್ತಿಯ ಸ್ವಾಧೀನತೆ ಮತ್ತು ಉಪ ಭೋಗವು ಮೂಲ ವಿನ್ಯಾಸದ ಇಲ್ಲವೆ ಹಕ್ಕುಬಿಟ್ಟುಕೊಡುವಿಕೆಯಿಂದ ಲಾಭ ಗ್ರಾಹಿಯು ಮೃತನನ್ನು ಸಂಪೂರ್ಣ ಹೊರತು ಪಡಿಸಿ ಮೃತನ ಮರಣದ ಪೂರ್ವದಲ್ಲಿ ಕನಿಷ್ಠ ಎರಡು ವರುಷಗಳ ವರೆಗಾದರೂ ನಿರ್ವಹಿಸಲ್ಪಟ್ಟಿದ್ದರೆಯೂ ಆ ಆಸ್ತಿಯು ಕರಮುಕ್ತವಾಗುವುದು. ಎಲ್ಲಿ ಮೃತನು ಏಕಮೇವ ಧರ್ಮದರ್ಶಿಯಾಗುವನು ಅಲ್ಲಿ ಎರಡು ವರುಷಗಳ ಕಾಲಾವಧಿಯ ಬದಲು ಐದು ವರುಷಗಳ ಕಾಲಾವಧಿಯ ವರೆಗೆ ಮೃತನನ್ನು ಹೊರತು ಪಡಿಸಿ ಲಾಭಗ್ರಾಹಿಯು ಆಸ್ತಿಯ ಸ್ವಾಧೀನತೆ ಮತ್ತು ಉಪ ಭೋಗವನ್ನು ವಹಿಸಿಕೊಂಡಿರಬೇಕು. ಇನ್ನೊಬ್ಬನು ವಿನ್ಯಾಸ ಮಾಡಿದ ಆಸ್ತಿಗೆ ಧರ್ಮದರ್ಶಿಯೆಂದು ಮೃತನು ಆಗಿದ್ದರೆ ಆ ಆಸ್ತಿಯು ಕರಮುಕ್ತವಾಗುವುದು. ತಾನೇ ವಿನ್ಯಾಸ ಮಾಡಿದ್ದರೆ, ಇಲ್ಲವೆ ಹಕ್ಕುಬಿಟ್ಟುಕೊಟ್ಟಿದ್ದರೆ ಮೃತನ ಮರಣ

ಪೂರ್ವದಲ್ಲಿ ೨ ವರುಷ ಇಲ್ಲವೆ ಏಕಮೇವ ಧರ್ಮದರ್ಶಿಯಾಗಿದ್ದರೆ ಐದು ವರುಷದ್ದೊಳೆ ವರೆಗಾದರೂ ಮೃತನಿಗೂ ಆ ಆಸ್ತಿಗೂ ಯಾವ ವೈಯಕ್ತಿಕ ಹಿತಸಂಬಂಧವಿರಬಾರದು. ಅಂದರೆ ಆ ಆಸ್ತಿಯು ಕರಮುಕ್ತವಾಗುವುದು ಎಂದು ಈ ಕಲಮು ಹೇಳುತ್ತದೆ.

**೨೩ ಸ್ವಾಧೀನತೆಯಲ್ಲಿಯ ಹಿತಸಂಬಂಧವೆಂದು ಆಗುವುದಕ್ಕೆ ಮುಂಚೆ ರದ್ದಾದ ಹಿತಸಂಬಂಧ**

ನಿವೇಶಿತವಾದ ಆಸ್ತಿಯ ಸಂದರ್ಭದಲ್ಲಿ ಆ ನಿವೇಶನದನ್ವಯವಾಗಿ ಯಾವುದೇ ವ್ಯಕ್ತಿಯ ಹಿತಸಂಬಂಧವು ರದ್ದಾದರೆ, ಇಲ್ಲವೆ ಸ್ವಾಧೀನತೆಯಲ್ಲಿಯ ಹಿತಸಂಬಂಧವೆಂದು ಆಗುವುದಕ್ಕೆ ಮುಂಚಿತವಾಗಿಯೆ ಮರಣದ ಕಾರಣದಿಂದ ಹಿತಸಂಬಂಧವು ಮುಕ್ತಾಯವಾದರೆ, ಮತ್ತು ನಿವೇಶನದನ್ವಯವಾಗಿ ಒಂದು ಇಲ್ಲವೆ ಹೆಚ್ಚು ನಿರ್ಬಂಧಮಿತಿಗಳು ಉಳಿದುಕೊಂಡರೆ, ಆ ಹಿತಸಂಬಂಧವು ರದ್ದಾಯಿತು, ಇಲ್ಲವೆ ಮುಕ್ತಾಯವಾಯಿತು, ಎಂಬ ಕಾರಣಕ್ಕಾಗಿ ಮಾತ್ರ ಅವನ ಮರಣದ ಮೂಲಕ ಆಸ್ತಿಯು ಇಳಿದು ಬರುವುದೆಂದು ಗಣಿಸಲ್ಪಡಲಾಗದು.

**ನಿವರಣೆ : ೧** ಎಲ್ಲಿ ಒಂದು ಆಸ್ತಿಯು ಒಬ್ಬ ವ್ಯಕ್ತಿಯಿಂದ ತಾನಾಗಿಯೆ ಜೀವಮಾನದ ವರೆಗೆ ನಿವೇಶಿತ ಮಾಡಲ್ಪಟ್ಟಿರುವುದು ಮತ್ತು ಅವನ ಮರಣದ ನಂತರ ಬೇರೊಬ್ಬನಿಗೆ ಹೋಗಬೇಕೆಂದು ನಿವೇಶಿತ ಮಾಡಲ್ಪಟ್ಟಿರುವುದು, ಮತ್ತು ನಂತರ ಮೂಲದಲ್ಲಿ ನಿವೇಶನ ಮಾಡಿದವನಿಗೆ ಕೊನೆಯಲ್ಲಿ ಪೂರ್ಣ ಹಿತಸಂಬಂಧವು ಇಲ್ಲವೆ ವಿನ್ಯಾಸದ ಪೂರ್ಣಾಧಿಕಾರವು ಮರಳಿ ಬರಬೇಕೆಂದು ಮಾಡಲಾಗಿರುವುದೋ ಅಲ್ಲಿ ನಿವೇಶನ ಮಾಡಿದವನು ಜೀವಮಾನದ ಒಕ್ಕಲು ಎಂದು ಸ್ವಾಧೀನತೆಯುಳ್ಳವನು ಇರುವನೆಂದು ಮತ್ತು ಇನ್ನೊಬ್ಬನ ಮರಣದ ಮೂಲಕ ಇಡಿ ಆಸ್ತಿ ಇವನಿಗೆ ಮರಳಿ ಬರುವುದೆಂಬ ಇಲ್ಲವೆ ಅದರ ವಿನ್ಯಾಸದ ಪೂರ್ಣಾಧಿಕಾರ ಬರುವುದೆಂಬ ಕಾರಣಕ್ಕಾಗಿ ಮಾತ್ರ ಆ ಇನ್ನೊಬ್ಬನ ಮರಣದ ಮೂಲಕ ಆ ಆಸ್ತಿಯು ನಿವೇಶನ ಮಾಡಿದವನಿಗೆ ಇಳಿದು ಬರುವುದೆಂದು ಗಣಿಸಲ್ಪಡಲಾಗದು.

**ನಿವರಣೆ: ೨**

ನಿವೇಶಿತವಾದ ಆಸ್ತಿಯಲ್ಲಿಯ ಒಬ್ಬ ವ್ಯಕ್ತಿಯ ಹಿತಸಂಬಂಧವು ಮೃತ್ಯುಲೇಖ ಮಾಡಿದವನ ಇಲ್ಲವೆ ಮಾಡದವನ ಆಸ್ತಿಯಲ್ಲಿ ಶೇಷಭೋಗದಲ್ಲಿಯ ಇಲ್ಲವೆ ಅದರ ಭಾಗದಲ್ಲಿಯ ಹಿತಸಂಬಂಧವುಳ್ಳದ್ದಾಗಿದ್ದರೆ, ಮತ್ತು ಆ ಆಸ್ತಿಯು ಆ ವ್ಯಕ್ತಿಯ ಮರಣದ ಪರ್ಯಂತವಾಗಿ ಅವನ ಆಡಳಿತೆಯಲ್ಲಿದ್ದರೆ,

ಆ ಶೇಷಭೋಗದಲ್ಲಿಯ ಇಲ್ಲವೆ ಅದರ ಭಾಗದಲ್ಲಿಯ ಆ ವ್ಯಕ್ತಿಯ ಹಿತಸಂಬಂಧವು ಮೃತ್ಯುಲೇಖ ಮಾಡಿದವನ ಇಲ್ಲವೆ ಮಾಡದವನ ಮರಣದ ನಂತರ ತಾತ್ಕಾಲಿಕವಾಗಿ ಶೇಷಭೋಗವು ನಿಶ್ಚಿತಗೊಳಿಸಲ್ಪಟ್ಟಿದ್ದರೆ, ಆ ಶೇಷಭೋಗದಿಂದ ಇಲ್ಲವೆ ಅದರ ಭಾಗದಿಂದ ಬಂದ ಆದಾಯವು ಆ ಹಿತಸಂಬಂಧಕ್ಕೆ ಹೊಂದಿಸಲ್ಪಡಬಹುದಾಗಿದ್ದಂತೆ ಆ ತಾರೀಖಿಗೆ ಸ್ವಾಧೀನತೆಯಲ್ಲಿಯ ಹಿತಸಂಬಂಧವೆಂದು ಗಣಿಸಲ್ಪಡಲಾಗುವುದು.

**ವಿವೇಚನೆ:**

ಸ್ವಾಧೀನತೆಯಲ್ಲಿಯ ಹಿತಸಂಬಂಧವೆಂದು ಆಗುವ ಮೊದಲೆ ಅವನ ಮರಣದ ಕಾರಣದಿಂದ ಒಬ್ಬ ವ್ಯಕ್ತಿಯ ಹಿತಸಂಬಂಧವು ರದ್ದಾಗುವದು. ಮತ್ತು ನಿವೇಶನದನ್ವಯವಾಗಿ ನಂತರದ ನಿರ್ಬಂಧಗಳು ಜಾರಿಯಲ್ಲಿ ಉಳಿಯುವುವು. ಹೀಗೆ ಆದಾಗ ಮರಣದ ಮೂಲಕ ಹಿತಸಂಬಂಧವು ಇಳಿದು ಬರುವುದಿಲ್ಲ. ಇಳಿದು ಬರುವುದೆಂದೂ ಗಣಿಸಲ್ಪಡಲಾಗುವುದಿಲ್ಲ. ಭಾವೀಜೀವನದ ಹಿತಸಂಬಂಧ ಇಲ್ಲವೆ ಅವಲಂಬಕ ಹಿತಸಂಬಂಧಗಳಿಗೆ ಇದು ಅನ್ವಯಿಸುವುದು.

ಅವಲಂಬಕ ಹಿತಸಂಬಂಧಕ್ಕೆ ಬಾಧ್ಯನಾಗಿರುವ ಲಾಭಗ್ರಾಹಿಯು ಆ ಆದಾಯದಿಂದ ಪೋಷಿಸಲ್ಪಡುವನೆಂಬ ಕಾರಣದಿಂದ ಸ್ವಾಧೀನತೆಯಲ್ಲಿ ಹಿತಸಂಬಂಧವುಳ್ಳವನೆಂದು ತಿಳಿಯಲ್ಪಡಲಾಗದು.

ಈ ಕಲಮಿನನ್ವಯವಾಗಿ ಕರಮುಕ್ತತೆ ಪಡೆಯಬೇಕಾದರೆ ಈ ಕರಾರುಗಳು ಪೂರೈಸಲ್ಪಡಬೇಕು.

(೧) ನಿವೇಶಿತ ಆಸ್ತಿಯಲ್ಲಿಯ ಹಿತಸಂಬಂಧವು ಅದು ಆಗಿರಬೇಕು.

(೨) ಸ್ವಾಧೀನತೆಯಲ್ಲಿಯ ಹಿತಸಂಬಂಧವೆಂದಾಗುವದಕ್ಕೆ ಮುಂಚಿತವಾಗಿಯೆ ಆ ವ್ಯಕ್ತಿಯ ಮರಣದ ಮೂಲಕ ಅದು ಅಪೂರ್ಣವಾಗಿರಬೇಕು.

(೩) ಮೃತ ವ್ಯಕ್ತಿಯ ಹಿತಸಂಬಂಧದ ನಂತರ ನಿರ್ಬಂಧಗಳು ಅಸ್ತಿತ್ವದಲ್ಲಿದ್ದು ಮುಂದರಿಯಬೇಕು.

ಈ ಮೂರು ಕರಾರುಗಳು ಪೂರೈಸಲ್ಪಟ್ಟರೆ, ಹಿತಸಂಬಂಧವು ರದ್ದಾಯಿತು ಇಲ್ಲವೆ ಮುಕ್ತಾಯವಾಯಿತು ಎಂಬ ಕಾರಣಕ್ಕಾಗಿ ಮಾತ್ರ ಮೃತನ ಮರಣದ ಮೂಲಕ ಆ ಆಸ್ತಿಯು ಇಳಿದು ಬರುವದೆಂದು ಗಣಿಸಲ್ಪಡಲಾಗದು. ಮೊದಲನೆಯ ಕರಾರಿನಲ್ಲಿ ಎರಡು ವಿಷಯಗಳು; ಒಂದು, ಆಸ್ತಿಯು ನಿವೇಶಿತವಾದುದು ಇರಬೇಕು; ಮತ್ತೊಂದು ಮೃತನು ಆ ಆಸ್ತಿಯಲ್ಲಿ ಹಿತಸಂಬಂಧ ಪಡೆದಿರಬೇಕು. ಎರಡನೆಯ ಕರಾರಿನ ಪ್ರಕಾರ ಮೃತನ ಹಿತಸಂಬಂಧವು ಅಪೂರ್ಣವಾಗಿರಬೇಕು. ಅಪೂರ್ಣತೆಗೆ

ಮರಣವು ಕಾರಣವಾಗಿರಬೇಕು. ಇದು ಸ್ವಾಧೀನತೆಯಲ್ಲಿ ಹಿತಸಂಬಂಧ ಪಡೆಯುವ ಮುಂಚೆ ಆಗಿರಬೇಕು: ಉದಾಹರಣೆ: ಒಂದು ಆಸ್ತಿಯು ಅ ನಿಗೆ ಜೀವಮಾನದ ವರೆಗೆ ಉಪಭೋಗಕ್ಕೆ ವಿಶ್ವಸ್ತ ನಿಧಿಯಾಗಿ ನಿವೇಶಿತವಾಗಿದ್ದಿತು. ಇದರಂಕಿತವಾಗಿ ಆಸ್ತಿಯು ಬ ನಿಗೆ ಅವನ ಜೀವಮಾನದ ವರೆಗೆ ಕೊಡಲ್ಪಟ್ಟಿತ್ತು. ಅ ನು ಜೀವಂತನಾಗಿರುವಾಗಲೆ ಬ ನು ಮರಣಹೊಂದುತ್ತಾನೆ. ಬ ನ ಮರಣದ ಮೂಲಕ ಅವನ ಹಿತಸಂಬಂಧವು ಅಪೂರ್ಣವಾಗುವುದು. ಅವನಿಗೆ ಸ್ವಾಧೀನತೆಯಲ್ಲಿ ಹಿತಸಂಬಂಧ ಉಂಟಾಗುವದಿಲ್ಲ. ಆದ್ದರಿಂದ ಬನ ಮರಣದ ಮೂಲಕ ಯಾವ ಆಸ್ತಿಯೂ ಇಳಿದು ಬರುವುದಿಲ್ಲ. ಅದಕ್ಕಾಗಿ ಹಾಗೆ ಅಪೂರ್ಣವಾದ ಹಿತಸಂಬಂಧವು ಕರಪಾತ್ರವಾಗುವುದಿಲ್ಲ. ಮೂರನೆಯ ಕರಾರಿನ ಪ್ರಕಾರ ನಿವೇಶನ ಮಾಡಿದ ಆಸ್ತಿಯಲ್ಲಿ ಮೃತ ವ್ಯಕ್ತಿಯ ಹಿತಸಂಬಂಧಕ್ಕೆ ನಿರ್ಬಂಧಗಳು ಉಳಿದು ಮುಂದರಿಯಬೇಕು.

**ಉದಾಹರಣೆ:** ಒಂದು ಆಸ್ತಿಯು ಅನಿಗೆ ಜೀವಮಾನದ ವರೆಗೆ, ನಂತರ ಬನಿಗೆ ಅವನ ಜೀವಮಾನದವರೆಗೆ, ನಂತರ ಕನಿಗೆ ಪೂರ್ಣವಾಗಿ ಹೋಗಬೇಕೆಂದು ನಿವೇಶಿತ ಮಾಡಲ್ಪಟ್ಟಿರುವುದು. ಅನು ಜೀವಂತವಾಗಿರುವಾಗ ಬನು ಮರಣಹೊಂದಿದರೆ, ಬನ ಹಿತಸಂಬಂಧವು ಪೂರ್ಣವಾಗಲೇ ಇಲ್ಲ. ಆದರೆ ಕನ ಹಿತಸಂಬಂಧವು ಉಳಿದು ಮುಂದರಿಯಿತು. ಬ ನ ಮರಣದ ಮೂಲಕ ಆ ಆಸ್ತಿಯು ಇಳಿದು ಬರಲಿಲ್ಲ; ಅದಕ್ಕಾಗಿ ಅದು ಕರಮುಕ್ತವಾಗಿರುವುದು.

**೨೪ ವಿನ್ಯಾಸ ಮಾಡಿದ ವ್ಯಕ್ತಿಗೆ ಮರಳುವ ಆಸ್ತಿಯು**

(೧) ವಿನ್ಯಾಸ ಮಾಡಿದ ವ್ಯಕ್ತಿಯಲ್ಲದ ಬೇರೆ ಯಾವುದೇ ಆಸ್ತಿಯಲ್ಲಿಯ ಹಿತಸಂಬಂಧವು ವಿನ್ಯಾಸದ ಮೂಲಕ ಅಂತಹ ವ್ಯಕ್ತಿಯ ಜೀವಮಾನದ ವರೆಗೆ ಇಲ್ಲವೆ ಅವನ ಮರಣಕ್ಕೆ ಮುಕ್ತಾಯವಾಗುವಂತೆ, ದಯಪಾಲಿಸಲ್ಪಟ್ಟರೆ ಶೇಷಭೋಗವನ್ನು ವಿನ್ಯಾಸ ಮಾಡಿದ ವ್ಯಕ್ತಿಗೆ ಪೂರ್ಣವಾಗಿ ಬರುವಂತೆ ದಯಪಾಲಿಸಲ್ಪಟ್ಟಿರುವಾಗ ಮತ್ತು ಇಂತಹ ವ್ಯಕ್ತಿಯು ಹಿತಸಂಬಂಧದ ಸ್ವಾಧೀನತೆಯಲ್ಲಿ ಬಂದಾಗ ಮತ್ತು ತದನಂತರ ಸ್ವಾಧೀನತೆಯನ್ನು ಇರಿಸಿಕೊಂಡಾಗ ಆಗ ಇಂತಹ ವ್ಯಕ್ತಿಯು ಮರಣದ ಮೂಲಕ, ವಿನ್ಯಾಸ ಮಾಡಿದ ವ್ಯಕ್ತಿಯ ಜೀವಮಾನದಲ್ಲಿ ಮರಳಿ ಅವನಿಗೆ ಬರಬೇಕೆಂಬ ಕಾರಣಕ್ಕಾಗಿ ಮಾತ್ರ ಆ ಆಸ್ತಿಯು ಇಳಿದು ಬರುವುದೆಂದು ಗಣಿಸಲ್ಪಡಲಾಗುವುದಿಲ್ಲ.

(೨) ಉಪಕಲಮು (೧) ರಲ್ಲಿ ಹೇಳಲಾದಂತೆ ಯಾವುದೇ ಆಸ್ತಿಯ ವಿನ್ಯಾಸದ ಮೂಲಕ ಯಾವುದೇ ಇಂತಹ ಹಿತಸಂಬಂಧವು ಇಬ್ಬರು ಇಲ್ಲವೆ ಹೆಚ್ಚು ವ್ಯಕ್ತಿಗಳಿಗೆ ಜತೆಯಾಗಿ ಇಲ್ಲವೆ ಪ್ರತ್ಯೇಕವಾಗಿ ಇಲ್ಲವೆ ಒಬ್ಬರಾದಮೇಲೆ ಒಬ್ಬರಿಗೆದಯಪಾಲಿಸಲ್ಪಟ್ಟಿರುವಾಗ ಒಬ್ಬನೇ ವ್ಯಕ್ತಿಗೆ ದಯಪಾಲಿಸಲ್ಪಟ್ಟಿರುವ

ಹಾಗೆ ಉಪಕಲಮು (೧) ಅನ್ವಯಿಸುವುದು. ಆದರೆ ಇಂತಹ ವ್ಯಕ್ತಿಯು ಇಲ್ಲವೆ ವ್ಯಕ್ತಿಗಳು ಮೇಲೆ ಹೇಳಿದ ಜೀವಮಾನದ ಇಲ್ಲವೆ ಮುಕ್ತಾಯವಾಗುವ ಹಿತಸಂಬಂಧವನ್ನು ವಿನ್ಯಾಸದ ಸಮಯದಕಿಂತ ಮೊದಲು ಯಾವುದೇ ಕಾಲಕ್ಕೆ ಮೇಲೆ ಹೇಳಿದ ಆಸ್ತಿಯನ್ನು ವಿನ್ಯಾಸ ಮಾಡಲು ಅವನೇ ಇಲ್ಲವೆ ಅವರೇ ಸಮರ್ಥರಾಗಿದ್ದರೆ, ಉಪಕಲಮು (೧) ಅನ್ವಯಿಸುವುದಿಲ್ಲ.

**ವಿವೇಚನೆ:**

ಒಂದು ಆಸ್ತಿಯನ್ನು **ಅ**ನು ನಿವೇಶನ ಮಾಡುತ್ತಾನೆ. ಆ ಆಸ್ತಿಯು **ಬ**ನ ಜೀವಮಾನದ ವರೆಗೆ **ಬ**ನಿಗೆ ಇದ್ದು ಮರಳಿ ತನಗೆ **ಅ**ನಿಗ ಬರಬೇಕೆಂದು ವ್ಯವಸ್ಥೆ ಮಾಡಿರುತ್ತಾನೆ. ಇದಲ್ಲದೆ ಬೇರೆ ಯಾವ ಹಿತಸಂಬಂಧವೂ ನಿರ್ಮಿಸಲ್ಪಟ್ಟಿರುವುದಿಲ್ಲ. ಇಂತಹ ಪ್ರಸಂಗದಲ್ಲಿ **ಅ**ನಕಿಂತ ಮೊದಲೇ **ಬ**ನು ಮರಣ ಹೊಂದಿದರೆ, ಆಸ್ತಿಯು ಮರಳಿ **ಅ**ನಿಗೆ ಬರುವುದು. ಆದರೂ **ಬ**ನ ಮರಣದ ಮೂಲಕ ಕರ ಬೀಳುವುದಿಲ್ಲ. ಅಂತಹ ಆಸ್ತಿಯು ಕರಮುಕ್ತವಿರುವುದು.

ಈ ಕಲಮಿನಲ್ಲಿಯ ಅಪವಾದಕ್ಕೆ ಉದಾಹರಣೆ: **ಬ** ನು **ಅ** ನಿಗೆ ಆಸ್ತಿಯನ್ನು ಕೊಡುವನು. **ಅ** ನು ಅದನ್ನು **ಬ** ನಿಗೆ ಜೀವಮಾನದ ವರೆಗೆ ಉಪಭೋಗಿಸಲು ನಿವೇಶನ ಮಾಡುವನು. ನಂತರ ಅದು ತನಗೆ (**ಅ** ನಿಗೆ) ಮರಳಿ ಬರಬೇಕೆಂದು ವ್ಯವಸ್ಥೆ ಮಾಡಿರುವನು. **ಬ** ನ ಮರಣದ ಮೂಲಕ ಕರ ಕೊಡಬೇಕಾಗುವುದು. ಏಕೆಂದರೆ ನಿವೇಶನ ಮಾಡುವುದಕ್ಕಿಂತ ಮೊದಲು ಆ ಆಸ್ತಿಯನ್ನು ವಿನ್ಯಾಸ ಮಾಡಲು **ಬ** ನು ಸಮರ್ಥನು.

ಈ ಕಲಮು ಅನ್ವಯಿಸಬೇಕಾದರೆ ಈ ಕರಾರುಗಳು ಪೂರೈಸಲ್ಪಡಬೇಕು: (೧) ಆಸ್ತಿಯ ವಿನ್ಯಾಸ ಮಾಡಿದವನು ಇನ್ನೊಬ್ಬನಿಗೆ ಅವನ ಜೀವಮಾನದ ವರೆಗೆ ಇಲ್ಲವೆ ಮರಣಕ್ಕೆ ಮುಕ್ತಾಯವಾಗುವಂತೆ ಹಿತಸಂಬಂಧವನ್ನು ದಯಪಾಲಿಸಿರಬೇಕು. (೨) ಈ ಜೀವಮಾನದ ಹಿತಸಂಬಂಧದ ಅಂಕಿತವಾಗಿ ಆ ವಿನ್ಯಾಸವು ಮರಳಿ ವಿನ್ಯಾಸ ಮಾಡಿದವನಿಗೆ ಪೂರ್ಣವಾಗಿ ಬರುವಂತಿರಬೇಕು. (೩) ಹೀಗೆ ವಿನ್ಯಾಸ ಮಾಡಲ್ಪಟ್ಟ ಆಸ್ತಿಯಲ್ಲಿಯ ಹಿತಸಂಬಂಧದ ಸ್ವಾಧೀನತೆಯನ್ನು ಜೀವಮಾನದ ಒಕ್ಕಲು ಪಡೆದಿರಬೇಕು ಮತ್ತು ಸ್ವಾಧೀನತೆಯನ್ನು ಇಟ್ಟುಕೊಂಡಿರಬೇಕು. (೪) ಹಾಗೆ ಸ್ವಾಧೀನತೆ ಪಡೆದ ವ್ಯಕ್ತಿಯು ಮರಣದ ನಂತರ ಜೀವಂತವಾಗಿರುವ ಮೂಲ ವಿನ್ಯಾಸ ಮಾಡಿದವನಿಗೆ ಆಸ್ತಿಯು ಮರಳಿ ಬಂದಿರಬೇಕು. (೫) ಜೀವಮಾನದ ಒಕ್ಕಲು ಅಧಿಕಾರ ಪಡೆದ ವ್ಯಕ್ತಿಯು ಆಸ್ತಿಯ ವಿನ್ಯಾಸದಕಿಂತ ಮೊದಲು ಆ ಆಸ್ತಿಯ ವಿನ್ಯಾಸ ಮಾಡಲು ಸಮರ್ಥನಾಗಿರಬಾರದು.

೨೫ ದಂಪತಿಗಳಲ್ಲಿ ಒಬ್ಬರ ಮರಣದಿಂದ ಪಡೆದ ನಿವೇಶಿತ ಆಸ್ತಿಯ ಆದಾಯ

ಒಬ್ಬರೆ ಇಲ್ಲವೆ ಇನ್ನೊಬ್ಬರೊಡನೆ ಜತೆಯಾಗಿ, ಗಂಡ ಇಲ್ಲವೆ ಹೆಂಡತಿಯು ಈ ಕಾಯಿದೆಯು ಪ್ರಾರಂಭವಾಗುವುದಕ್ಕೆ ಮುಂಚಿತವಾಗಿ ಪರಿಣಾಮಕಾರಿ ಯಾದ ವಿನ್ಯಾಸದನ್ವಯವಾಗಿ ಇನ್ನೊಬ್ಬರಿಂದ ನಿವೇಶನ ಮಾಡಲ್ಪಟ್ಟ ಯಾವುದೇ ಆಸ್ತಿಯ ಆದಾಯಕ್ಕೆ ಬಾಧ್ಯಸ್ಥರಾಗಿರುವಾಗ ಮತ್ತು ಅವನ ಇಲ್ಲವ ಅವಳ ಮರಣದ ನಂತರ ಜೀವಂತ ಉಳಿದವರು ಇಂತಹ ಜೀವಂತ ಉಳಿದವರ ಆ ಆಸ್ತಿಯ ( ಆ ಆಸ್ತಿಯೇ ಅಲ್ಲವೆಂದು ಪ್ರತ್ಯೇಕವಾಗಿ ತೋರುವ ) ಆದಾ ಯಕ್ಕೆ ಬಾಧ್ಯರಾಗುವಾಗ, ಹಾಗೆ ಜೀವಂತ ಉಳಿದವರು ಮರಣ ಹೊಂದುವ ತನಕ ಆ ಆಸ್ತಿಯ ವಿಷಯವಾಗಿ ವಾರಸಾಕರ ಕೊಡಬೇಕಾಗಿರುವುದಿಲ್ಲ.

**ವಿವೇಚನೆ :**

ಈ ಕಲಮಿನನ್ವಯವಾಗಿ ಕರ ಮುಕ್ತತೆಯನ್ನು ಪಡೆಯಬೇಕಾದರೆ ಈ ಕೆಳ ಗಿನ ಲಕ್ಷಣಗಳು ಇರಬೇಕು : (೧) ಗಂಡ ಇಲ್ಲವೆ ಹೆಂಡತಿ ಇವರಲ್ಲಿ ಯಾರೊಬ್ಬರು ನಿವೇಶನ ಮಾಡಿದ ಯಾವುದೇ ಆಸ್ತಿಯ ಆದಾಯಕ್ಕೆ ಗಂಡ ಇಲ್ಲವೆ ಹೆಂಡತಿಯು ಒಬ್ಬರೆ ಇಲ್ಲವೆ ಇನ್ನೊಬ್ಬರೊಡನೆ ಜತೆಯಾಗಿ ಬಾಧ್ಯರಾಗಿರಬೇಕು.

(೨) ಆ ನಿವೇಶನವು ಈ ಕಾಯಿದೆಯು ಪ್ರಾರಂಭವಾಗುವುದಕ್ಕಿಂತ ಮೊದಲು ಪರಿಣಮಿಸಿರಬೇಕು.

(೩) ನಿವೇಶನ ಮಾಡಿದವರು ದಂಪತಿಗಳಲ್ಲಿ ಇನ್ನೊಬ್ಬರ ಮರಣದ ನಂತರ ಜೀವಿಸಿರಬೇಕು. ಮತ್ತು

(೪) ದಂಪತಿಗಳಲ್ಲಿ ಇನ್ನೊಬ್ಬರ ಮರಣದ ನಂತರವೇ ಆ ಆದಾಯಕ್ಕೆ ನಿವೇಶನ ಮಾಡಿದವರು ಬಾಧ್ಯರಾಗಿರಬೇಕು.

ಈ ಕಲಮಿಗೆ ಮಹತ್ವವಾದುದು ನಿವೇಶನವು ಪರಿಣಮಿಸಿದ ತಾರೀಖು. ಏಕೆಂದರೆ ಅದು ಈ ಕಾಯಿದೆಯು ಪ್ರಾರಂಭವಾಗುವುದಕ್ಕೆ ಮೊದಲು ಅಂದರೆ ೧೫–೧೦–೧೯೫೩ ರ ಕಿಂತ ಮೊದಲು ನಿವೇಶನವು ಪರಿಣಮಿಸಬೇಕು.

**ಉದಾಹರಣೆ:**

ಅ ಮತ್ತು ಬ ಇವರು ಗಂಡ ಹೆಂಡಿರು. ಅ ನು ೧೫–೧೦–೫೩ ರ ಕಿಂತ ಮೊದಲು ಮಾಡಿದ ನಿವೇಶನದನ್ವಯವಾಗಿ ಆದಾಯವನ್ನು ಬ ಳಿಗೆ ಕೊಡಮಾಡಿದನು. ಆ ಆದಾಯವು ಸರಕಾರಿ ಆಶ್ವಾಸನ ಪತ್ರದಿಂದ ಬರುವಂತಹದು. ಈ ಆಶ್ವಾಸನ ಪತ್ರ

ಗಳು ಇಬ್ಬರ ಹೆಸರಿನಲ್ಲಿದ್ದು ಒಬ್ಬರು ಮರಣ ಹೊಂದಿದರೆ ಜೀವಂತ ಉಳಿದವರಿಗೆ ಎಲ್ಲ ಆಸ್ತಿಯೂ ಹೋಗಬೇಕೆಂದು ವ್ಯವಸ್ಥೆ ಮಾಡಲಾಗಿದ್ದಿತು. ಹೀಗಿರುವಾಗ **ಬ** ಳು **ಅ** ನ ಕಿಂತ ಮೊದಲು ಮರಣ ಹೊಂದಿದರೆ, ಅವಳ ಮರಣದ ಮೂಲಕ **ಅ** ನು ಆ ಆದಾಯಕ್ಕೆ ಬಾಧ್ಯನಾಗುತ್ತಿದ್ದರೆ, ಆ ಆಸ್ತಿಯ ಮೇಲೆ ವಾರಸಾಕರ ಕೊಡಬೇಕಾಗಿಲ್ಲ. ಆದರೆ **ಅ** ನು ಮೊದಲು ಮರಣ ಹೊಂದಿದರೆ, **ಬ** ಳು ಆ ಆಸ್ತಿಯ ಆದಾಯಕ್ಕೆ ಪಶ್ಚಾತ್ ಜೀವಿತ್ವದ ಮೂಲಕ ಬಾಧ್ಯಳಾಗುತ್ತಿದ್ದರೆ, ಕರವನ್ನು ಕೊಡಬೇಕಾಗುವುದು.

**೨೬ ಹಣದ ರೂಪದಲ್ಲಿ ಪೂರ್ಣ ಇಲ್ಲವೆ ಅಪೂರ್ಣ ಪ್ರತಿ ಬೆಲೆಗಾಗಿ ಸದ್ಭಾವದಿಂದ ಕೊಂಡ ಕಾರಣಕ್ಕಾಗಿ ಇಳಿದು ಬಂದ ಆಸ್ತಿಯು**

(೧) ಕಲಮು ೨೭ ಮತ್ತು ಕಲಮು ೪೬ ಇವುಗಳ ಕಕ್ಷೆಗಳಂಕಿತವಾಗಿ, ಯಾವ ವ್ಯಕ್ತಿಯ ವಿನ್ಯಾಸದನ್ವಯವಾಗಿ ಆಸ್ತಿಯು ಇಳಿದು ಬರುವುದೋ ಆ ವ್ಯಕ್ತಿಯಿಂದ ಸದ್ಭಾವದಿಂದ ಕೊಂಡುಕೊಳ್ಳಲ್ಪಟ್ಟಿದೆಯೆಂಬ ಕಾರಣಕ್ಕಾಗಿ ಮಾತ್ರ ಮೃತನ ಮರಣದ ಮೂಲಕ ಇಳಿದು ಬರುವ ಆಸ್ತಿಯ ವಿಷಯವಾಗಿ ವಾರಸಾಕರ ಕೊಡಬೇಕಾಗಿಲ್ಲ; ಯಾವುದೇ ಜೀವಮಾನದ ಗೇಣಿಯ ಮೂಲಕ ಪುನರಾವರ್ತನವಾಗಿ ಬರುವ ಸ್ವಾಧೀನತೆಯಲ್ಲಿ ಬರುವ ಆಸ್ತಿಯ ವಿಷಯವಾಗಿ, ಯಾವುದೇ ಜೀವಮಾನದ ವಾರ್ಷಿಕವೇತನಗಳ ಮುಕ್ತಾಯದ ಮೂಲಕವಾಗಿರುವ ಆಸ್ತಿಯ ವಿಷಯವಾಗಿ ಎಲ್ಲಿ ಇಂತಹ ಕೊಂಡುಕೊಳ್ಳುವಿಕೆ, ಇಲ್ಲವೆ ದಯಪಾಲಿಸಲಾದ ಇಂತಹ ಗೇಣಿ ಇಲ್ಲವೆ ವಾರ್ಷಿಕವೇತನವು ಪೂರ್ಣ ಪ್ರತಿಬೆಲೆಗಾಗಿ ಮಾರಲಿಕ್ಕೆ ಕೊಟ್ಟವನಿಗೆ ಇಲ್ಲವೆ ದಯಪಾಲಿಸಿದವನಿಗೆ ಅವನ ಉಪಯೋಗಕ್ಕೆ ಇಲ್ಲವೆ ಲಾಭಕ್ಕೆ ಇಲ್ಲವೆ ಗೇಣಿಯ ಸಂದರ್ಭದಲ್ಲಿ ದಯಪಾಲಿಸಿದವನು ಯಾವನಿಗಾಗಿ ಧರ್ಮದರ್ಶಿಯಾಗಿರುವನೋ ಅಂತಹ ಯಾವುದೇ ವ್ಯಕ್ತಿಯ ಉಪಯೋಗಕ್ಕೆ ಇಲ್ಲವೆ ಲಾಭಕ್ಕೆ ಹಣ ಇಲ್ಲವೆ ಹಣದ ಕಿಮ್ಮತ್ತಿನ ರೂಪದಲ್ಲಿ ಕೊಡಲಾಗಿದ್ದರೆ, ವಾರಸಾಕರ ಕೊಡಬೇಕಾಗಿಲ್ಲ.

(೨) ಎಲ್ಲಿ ಇಂತಹ ಕೊಂಡುಕೊಳ್ಳುವಿಕೆ ಆಗಿದೆಯೋ ಇಲ್ಲವೆ ಗೇಣಿ ಇಲ್ಲವೆ ವಾರ್ಷಿಕವೇತನವು ದಯಪಾಲಿಸಲಾಗಿದೆಯೋ ಪೂರ್ಣ ಪ್ರತಿಬೆಲೆಗಾಗಿ ಮಾರಲಿಕ್ಕೆ ಕೊಟ್ಟವನಿಗೆ ಇಲ್ಲವೆ ದಯಪಾಲಿಸಿದವನಿಗೆ ಅವನ ಉಪಯೋಗ ಇಲ್ಲವೆ ಲಾಭಕ್ಕೆ ಹಣ ಇಲ್ಲವೆ ಹಣದ ಕಿಮ್ಮತ್ತಿನ ರೂಪದಲ್ಲಿ ಕೊಡಲಾಗಿದೆಯೊ ಇಲ್ಲವೆ ಗೇಣಿಯ ಸಂದರ್ಭದಲ್ಲಿ ದಯಪಾಲಿಸಿದವನು ಯಾವನಿಗೆ ಧರ್ಮದರ್ಶಿಯಾಗಿರುವನೋ ಅಂತಹ ಯಾವುದೇ ವ್ಯಕ್ತಿಯ ಉಪಯೋಗಕ್ಕೆ ಇಲ್ಲವೆ

ಲಾಭಕ್ಕೆ ಕೊಡಲಾಗಿವೆಯೊ ಅಲ್ಲಿ ಪ್ರತಿಬೆಲೆಯು ಬೆಲೆಯು ವಾರಸಾಕರದ ಉದ್ದೇಶಕ್ಕಾಗಿ ಆಸ್ತಿಯು ಬೆಲೆಯಲ್ಲಿ ಕಡಿಮೆ ಮಾಡಲು ಅನುಮತಿ ಕೊಡಲಾಗುವುದು.

**ವಿವೇಚನೆ:**

ಈ ಕಲಮು ೨೭ನೆಯ ಕಲಮು ಮತ್ತು ೪೬ನೆಯ ಕಲಮುಗಳ ಅಂಕಿತವಾಗಿ ಕಾರ್ಯಮಾಡುವುದು. ೨೭ನೆಯ ಕಲಮಿನಲ್ಲಿ ಸಂಬಂಧಿಕರಿಗೆ ಮಾಡಲಾದ ವಿನ್ಯಾಸಗಳ ಬಗ್ಗೆ ಹೇಳಿದೆ. ೪೬ನೆಯ ಕಲಮಿನಲ್ಲಿ ಸಾಲಗಳು ಇಲ್ಲವೆ ಋಣಸಂಬಂಧಗಳು ಅವುಗಳ ಪ್ರತಿ ಬೆಲೆಯನ್ನು ಮೃತನಿಂದ ಪಡೆದ ಆಸ್ತಿಯು ಆಗಿರುವುದು. ಈ ಎರಡೂ ಕಲಮುಗಳು ಅಡ್ಡಿಯಾಗದಿದ್ದರೆ ಮಾತ್ರ ೨೭ ನೆಯ ಕಲಮಿನ ಪ್ರಕಾರ ಕರಮುಕ್ತತೆಯು ದೊರೆವುದು. ಸಾಮಾನ್ಯವಾಗಿ ಈ ಕಲಮಿನ ಪ್ರಕಾರ ಈ ಕೆಳಗಿನವುಗಳಿಗೆ ಕರಮುಕ್ತತೆ ದೊರೆವುದು.

(೧) ಸದ್ಭಾವದಿಂದ ಕೊಂಡುಕೊಳ್ಳಲಾದ ಕಾರಣದಿಂದ ಮರಣದ ಮೂಲಕ ಇಳಿದು ಬರುವ ಆಸ್ತಿಯು;

(೨) ಜೀವಮಾನದ ಗೇಣಿ ಇಲ್ಲವೆ ಜೀವಮಾನದ ವಾರ್ಷಿಕವೇತನ ಇವುಗಳ ಪುನರಾವರ್ತನ ಇಲ್ಲವೆ ಮುಕ್ತಾಯವಾಗುವಿಕೆಯಿಂದ ಸ್ವಾಧೀನತೆಯಲ್ಲಿ ಬಂದ ಆಸ್ತಿಯು;

ಮೊದಲನೆಯ ವಿಭಾಗಕ್ಕಾಗಿ ಈ ಕರಾರುಗಳು ಅವಶ್ಯವಾಗುವುವು. (೧) ಸದ್ಭಾವದಿಂದ ಕೊಂಡುಕೊಳ್ಳಲಾಗಿದೆಯೆಂಬ ಕಾರಣಕ್ಕಾಗಿ ಮರಣದ ಮೂಲಕ ಆ ಆಸ್ತಿಯು ಇಳಿದು ಬಂದಿರಬೇಕು. (೨) ಆ ಆಸ್ತಿಯು ಹಣ ಇಲ್ಲವೆ ಹಣದ ಕಿಮ್ಮತ್ತಿನ ರೂಪದಲ್ಲಿ ಪೂರ್ಣ ಪ್ರತಿ ಬೆಲೆಗಾಗಿ ಕೊಂಡುಕೊಳ್ಳಲ್ಪಟ್ಟಿರಬೇಕು. (೩) ಯಾರ ವಿನ್ಯಾಸದ ಮೂಲಕ ಆಸ್ತಿಯು ಇಳಿದು ಬಂದಿರುವುದೋ ಆ ವ್ಯಕ್ತಿಗೆ ಪ್ರತಿ ಬೆಲೆಯನ್ನು ಕೊಟ್ಟಿರಬೇಕು.

**ಉದಾಹರಣೆ:** **ಅನು** ಆಸ್ತಿಯನ್ನು ಬನಿಗೆ ಪ್ರತಿಬೆಲೆಗಾಗಿ ಮಾರುತ್ತಾನೆ. ಆ ಆಸ್ತಿಯಲ್ಲಿ ಜೀವಮಾನದ ಹಿತಸಂಬಂಧವನ್ನು ಇಟ್ಟುಕೊಂಡಿರುತ್ತಾನೆ. ಅನ ಮರಣದ ಮೂಲಕ ಆಸ್ತಿಯು ಬನಿಗೆ ಮಾರಾಟದ ಮೂಲಕವಾಗಿ ಮಾತ್ರ ಇಳಿದು ಬರುವುದು. ಆದುದರಿಂದ ಕರಮುಕ್ತತೆಯು ದೊರೆವುದು. ಮಾರಾಟದ ವ್ಯವಹಾರವು ಕೃತಕವಾಗಿರಬಾರದು.

ಉಪಕಲಮು (೨) ರಲ್ಲಿ ಅಪೂರ್ಣ ಪ್ರತಿ ಬೆಲೆಯ ವಿಷಯವನ್ನು ಹೇಳಿದೆ. ಪ್ರತಿ ಬೆಲೆಗೆ ಎಷ್ಟು ಅಪೂರ್ಣವಾಗುವುದೋ ಅಷ್ಟುಮಟ್ಟಿಗೆ ಆ ವ್ಯವಹಾರವು ದಾನವೆಂದಾಗುವುದು. ೮೦ ಶತಾಂಶದಷ್ಟು ಮಾತ್ರ ಪ್ರತಿಬೆಲೆ ಕೊಡಲಾಗಿದ್ದರೆ, ಅಷ್ಟು

ಕಡಿಮೆ ಮಾಡಿಕೊಳ್ಳಲು ಅನುಮತಿ ಕೊಡಲಾಗಿರುವುದು. ಆದ್ದರಿಂದ ಉಳಿದ ೨೦ ಶತಾಂಶದ ಬೆಲೆಯು ಮಾತ್ರ ಕರಯೋಗ್ಯವಾಗುವುದು.

೨೭ ಸಂಬಂಧಿಕರಿಗಾಗಿ ಮಾಡಿದ ವಿನ್ಯಾಸಗಳು.

(೧) ತನ್ನ ಸಂಬಂಧಿಕರೊಬ್ಬರ ಸಲುವಾಗಿ ಮೃತನು ಮಾಡಿದ ಯಾವುದೇ ವಿನ್ಯಾಸವು ೯ನೆಯ ಕಲಮಿನ ಉದ್ದೇಶಗಳಿಗಾಗಿ

(ಅ) ತನ್ನ ಉಪಯೋಗ ಇಲ್ಲವೆ ಲಾಭಕ್ಕಾಗಿ ಹಣ ಇಲ್ಲವೆ ಹಣದ ಕಿಮ್ಮತ್ತಿನ ರೂಪದಲ್ಲಿ ಅವನಿಗೆ ಕೊಡಲಾದ ಪೂರ್ಣ ಪ್ರತಿಬೆಲೆಗಾಗಿ ಮೃತನಿಂದ ವಿನ್ಯಾಸವು ಮಾಡಲ್ಪಡದಿದ್ದರೆ, ಇಲ್ಲವೆ,

(ಬ) ತಾನು ಮಾಡಿದ ವಿನ್ಯಾಸದಿಂದ ಅಲ್ಲದೆ ಬೇರೆ ರೀತಿಯಿಂದ ಅವನ ಮೇಲೆ ಹೊಣೆ ಹೊರಿಸಲ್ಪಟ್ಟ ವಿಶ್ವಸ್ತನ ಪದಾಧಿಕಾರದಲ್ಲಿ ಮೃತನು ಸಂಬಂಧವುಳ್ಳವನಾಗಿರದಿದ್ದರೆ ಮತ್ತು ಇಂತಹ ಪದಾಧಿಕಾರದಲ್ಲಿಯೆ ಮಾತ್ರ ಸಂಬಂಧವುಳ್ಳವನಾಗಿರದಿದ್ದರೆ,

ದಾನವೆಂದು ತಿಳಿಯಲ್ಪಡಲಾಗುವುದು. ಮತ್ತು, ಈ ಕಾಯಿದೆಯಲ್ಲಿ ದಾನವೆಂದು ನಿರ್ದೇಶ ಮಾಡಿದಾಗ ಆ ರೀತಿಯಲ್ಲಿಯೆ ಅರ್ಥ ಹಚ್ಚಲಾಗುವುದು.

ಆದರೆ ತನ್ನ ಉಪಯೋಗ ಇಲ್ಲವೆ ಲಾಭಕ್ಕಾಗಿ ಹಣ ಇಲ್ಲವೆ ಹಣದ ಕಿಮ್ಮತ್ತಿನ ರೂಪದಲ್ಲಿ ಅವನಿಗೆ ಕೊಡಲಾದ ಅಪೂರ್ಣ ಪ್ರತಿಬೆಲೆಗಾಗಿ ಮೃತನಿಂದ ವಿನ್ಯಾಸ ಮಾಡಲ್ಪಟ್ಟಿರುವಾಗ ವಾರಸಾಕರದ ಉದ್ದೇಶಕ್ಕಾಗಿ ಆಸ್ತಿಯ ಬೆಲೆಯಿಂದ ಪ್ರತಿಬೆಲೆಯ ಬೆಲೆಯನ್ನು ಕಡಿಮೆ ಮಾಡಲು ಅನುಮತಿ ಸಲ್ಪಡಲಾಗುವುದು.

(೨) ಮೃತನು ತನ್ನ ಸಂಬಂಧಿಕನೊಬ್ಬನಿಗಾಗಿ ಆಸ್ತಿಯ ವಿನ್ಯಾಸ ಮಾಡಿದಾಗ, ಮೃತನಿಗಾಗಿ ವಾರ್ಷಿಕ ವೇತನ ಇಲ್ಲವೆ ಮೃತನ ಮರಣಕ್ಕೆ ಮುಕ್ತಾಯವಾಗುವ ಇತರ ಹಿತಸಂಬಂಧ, ಇಲ್ಲವೆ ಬೇರೆ ಯಾವುದೇ ವ್ಯಕ್ತಿಯ ಮರಣಕ್ಕೆ ಮುಕ್ತಾಯವಾಗುವ ಹಿತಸಂಬಂಧದ ನಿರ್ಮಾಣ ಇಲ್ಲವೆ ವಿನ್ಯಾಸವು ಈ ಕಲಮಿನ ಉದ್ದೇಶಗಳಿಗಾಗಿ ಮೃತನಿಂದ ಮಾಡಲ್ಪಟ್ಟ ವಿನ್ಯಾಸಕ್ಕೆ ಪ್ರತಿ ಬೆಲೆಯೆಂದು ತಿಳಿಯಲ್ಪಡಲಾಗದು.

(೩) ಯಾವುದರ ಸಂಬಂಧವಾಗಿ ಉಪಕಲಮು (೧) ರ ವಾಕ್ಯಾವಳಿ (ಅ)ದ ಕಕ್ಷೆಗಳು ಪರಿಣಾಮಕಾರಿಯಾಗುವುವು ಎಂದು ಹೇಳಲಾಗಿರುವುದೋ ಅಂತಹ ವ್ಯವಹಾರಕ್ಕೆ ನಿಯಂತ್ರಿತ ಕಂಪನಿಯು ಸಂಬಂಧವುಳ್ಳದ್ದಾಗಿದ್ದರೆ, ಈ ಕೆಳಗಣ ಪರಿಸ್ಥಿತಿಯಲ್ಲಿ ಆ ಕಕ್ಷೆಗಳು ಪರಿಣಾಮಕಾರಿಯಾಗಬಹುದಾಗಿದ್ದಿ

[illegible] ನಿಯಂತ್ರಕನಿಗೆ ಸಮಾಧಾನವಾಗಿದ್ದರೆ, ಮತ್ತು ಹಾಗೆ ಸಮಾಧಾನ ವಾಗಿದ್ದರೆ ಮಾತ್ರ ಮತ್ತು ಎಷ್ಟು ಪ್ರಮಾಣದಲ್ಲಿ ಸಮಾಧಾನವಾಗಿರುವುದೋ ಅಷ್ಟು ಮಟ್ಟಿಗೆ ಮಾತ್ರ ಆ ಕಕ್ಷೆಗಳು ಆ ಸಂಬಂಧವಾಗಿ ಪರಿಣಾಮಕಾರಿ ಯಾಗುವುವು; ಆ ಪರಿಸ್ಥಿತಿ ಯಾವುದೆಂದರೆ: ಆ ಕಂಪನಿಯ ಸೊತ್ತುಗಳು ಅದರ ಸದಸ್ಯರ ಸಲುವಾಗಿ ವಿಶ್ವಸ್ತ ನಿಧಿಯೆಂದು ಧಾರಣಮಾಡಲಾಗಿದ್ದರೆ ಮತ್ತು ಯಾರಿಗಾಗಿ ಕಂಪನಿಯು ತನ್ನ ವ್ಯವಹಾರದ ಉದ್ದೇಶಗಳಿಗಾಗಿ ಅಲ್ಲದೆ ಇಡಿಯಾಗಿ ಮತ್ತು ಪ್ರತ್ಯೇಕವಾಗಿ ಕಂಪನಿಯ ಪಾಲುಗಳಿಗೆ ಇಲ್ಲವೆ ಡಿಬೆಂಚರು ಗಳಿಗೆ ಅಂಟಿಕೊಂಡ ಹಕ್ಕುಗಳನುಸಾರವಾಗಿ ಯಾವುದೇ ಹೊಣೆಗಾರಿಕೆಯನ್ನು ಹೊತ್ತಿರುವುದೋ, ಅಂತಹ ಬೇರೆ ಯಾವುದೇ ವ್ಯಕ್ತಿಯ ಸಲುವಾಗಿ ಮತ್ತು ಇಂತಹ ಹೊಣೆಗಾರಿಕೆಗಳನ್ನು ಹೊರಲಾದ ಕರಾರುಗಳನ್ನು ವಿಶ್ವಸ್ತನಿಧಿ ಯೆಂದು ಧಾರಣಮಾಡಿದ್ದರೆ, ಮತ್ತು ಕಂಪನಿಯು ತನ್ನ ವ್ಯವಹಾರವನ್ನು ಸಾಗಿಸಲು ಮತ್ತು ಅದರಲ್ಲಿ ಕಂಪನಿಯ ಸೊತ್ತುಗಳನ್ನು ತೊಡಗಿಸಲು ಮಾತ್ರ ಅಧಿಕಾರವುಳ್ಳದ್ದಾಗಿ ಧರ್ಮದರ್ಶಿಯ ಪದಾದಿಕಾರದಿಂದ ಕೆಲಸ ಮಾಡಿದ್ದರೆ,

(೪) ದಾನಮಾಡಿದಾಗ ೧೭ನೆಯ ಕಲಮಿನ ಅರ್ಥದಲ್ಲಿ ಮೃತನಿಗೆ ಯಾವ ಕಂಪನಿಯ ನಿಯಂತ್ರಣಾಧಿಕಾರವಿದ್ದಿತೋ ಆ ನಿಯಂತ್ರಿತ ಕಂಪನಿ ಯಿಂದ ಮೃತನ ಸಂಬಂಧಿಕನಿಗಾಗಿ ಮಾಡಲಾದ ಯಾವುದೇ ದಾನವು ೯ನೆಯ ಕಲಮಿನ ಉದ್ದೇಶಗಳಿಗಾಗಿ ಮೃತನಿಂದ ಮಾಡಲಾದ ದಾನವೆಂದು ತಿಳಿಯ ಲ್ಪಡಲಾಗುವುದು, ಮತ್ತು ಹಿಂದಿನ ಉಪಕಲಮಿನಲ್ಲಿ ಹೇಳಲಾದ ಪರಿಸ್ಥಿತಿ ಯಲ್ಲಿ ಹಾಗೆ ತಿಳಿಯಲ್ಪಡಲು ಬರುವುದೆಂದು ನಿಯಂತ್ರಕನಿಗೆ ಸಮಾಧಾನ ವಾಗಿದ್ದರೆ ಮತ್ತು ಅವನಿಗೆ ಸಮಾಧಾನವಾದಷ್ಟು ವ್ಯಾಪ್ತಿಯ ಮಟ್ಟಿಗೆ ಆ ಕಲಮಿನ ಸತ್ವದ ಪ್ರಕಾರ ದಾನದನ್ವಯವಾಗಿ ತೆಗೆದುಕೊಳ್ಳಲಾದ ಆಸ್ತಿಯು ಮೃತನ ಮರಣದ ಸಮಯಕ್ಕೆ ಇಳಿದು ಬರುವ ಆಸ್ತಿಯಲ್ಲಿ ಸಮಾವೇಶವಾಗಿದೆ ಯೆಂದು ಗಣಿಸಲ್ಪಡಲಾಗುವುದು.

(೫) ಯಾವುದನ್ನು ತನ್ನ ಸಂಬಂಧಿಕನಿಗಾಗಿ ವಿನ್ಯಾಸಮಾಡಿದ್ದರೆ ಅದು ಉಪಕಲಮು (೨) ರ ಕಕ್ಷೆಯಲ್ಲಿ ಬರುತ್ತಿದ್ದಿತೋ ಅದನ್ನು ಮೃತನು ನಿಯಂ ತ್ರಿತ ಕಂಪನಿಗೆ ವಿನ್ಯಾಸ ಮಾಡಿದ್ದರೆ, ವಿನ್ಯಾಸ ಮಾಡಿದ ಕಾಲಕ್ಕೆ ಇಲ್ಲವೆ ತದನಂತರ ಮೃತನ ಜೀವಮಾನದಲ್ಲಿ ಮೃತನ ಯಾವ ಸಂಬಂಧಿಕನೂ ಕಂಪ ನಿಯ ಸದಸ್ಯನಾಗಿದ್ದಿಲ್ಲವೆಂದು ನಿಯಂತ್ರಕನಿಗೆ ಸಮಾಧಾನವಾಗುವಂತೆ ತೋರಿಸದಿದ್ದರೆ, ಮೃತನ ಸಂಬಂಧಿಕನಿಗೆ ವಿನ್ಯಾಸ ಮಾಡಿದ್ದಂತೆಯೆ ಅದೇ ರೀತಿಯಲ್ಲಿ, ಈ ಕಲಮು ಪರಿಣಾಮಕಾರಿಯಾಗುವುದು.

**ವಿವರಣೆ:** ಈ ಉಪಕಲಮಿನ ಉದ್ದೇಶಗಳಿಗಾಗಿ ಈ ಕಕ್ಷೆಯ ಸತ್ವದ ಪ್ರಕಾರ ಯಾವ ವ್ಯಕ್ತಿಯು ನಿಯಂತ್ರಿತ ಕಂಪನಿಯ ಸದಸ್ಯನಾಗಿರುವನೋ ಇಲ್ಲವೆ ಸದಸ್ಯನಾಗಿರುವನೆಂದು ಗಣಿಸಲ್ಪಡಲಾಗುವುದೋ ಆ ಕಂಪನಿಯು ಇಂತಹ ಇನ್ನೊಂದು ಕಂಪನಿಯ ಸದಸ್ಯವಾಗಿದ್ದರೆ, ಆ ಇನ್ನೊಂದು ಕಂಪನಿಯ ಸದಸ್ಯನೆಂದೂ ಗಣಿಸಲ್ಪಡಲಾಗುವುದು.

(೬) ಉಪಕಲಮು (೫) ರಲ್ಲಿ ಹೇಳಲಾದ ಅಂತಹ ಯಾವುದೇ ವಾರ್ಷಿಕವೇತನ ಇಲ್ಲವೆ ಇತರ ಹಿತಸಂಬಂಧದ ವಿಷಯವಾಗಿರುವ ಯಾವುದೇ ಸಂದಾಯವು ಮೃತನಿಂದ ಸ್ವೀಕರಿಸಲ್ಪಟ್ಟಿದೆಯೆಂಬ ಬಗ್ಗೆ ಪರಿಣಮಿಸಿದ ಸಂಬಂಧಾತ್ಮಕ ಕ್ರಿಯೆಗಳು ಇದ್ದರೆ, ಇಲ್ಲವೆ ಇಂತಹ ಯಾವುದೇ ಸಂದಾಯವನ್ನು ಅವನು ಸ್ವೀಕರಿಸಲು ಅನುಕೂಲಿಸುವ ಇಲ್ಲವೆ ಸಮರ್ಥನನ್ನಾಗಿ ಮಾಡುವ ಉದ್ದೇಶದಿಂದ ಪರಿಣಮಿಸಿದ ಸಂಬಂಧಾತ್ಮಕ ಕ್ರಿಯೆಗಳು ಇದ್ದರೆ, ಇಂತಹ ವಾರ್ಷಿಕವೇತನ ಇಲ್ಲವೆ ಇತರ ಹಿತಸಂಬಂಧವನ್ನು ಮೃತನಿಗಾಗಿ ನಿರ್ಮಿಸಿದ ಇಲ್ಲವೆ ವಿನ್ಯಾಸ ಮಾಡಿದ ಸಂಬಂಧವಾಗಿ ಪರಿಣಾಮವಾಗುವಂತೆ ಆ ಸಂಬಂಧಾತ್ಮಕ ಕ್ರಿಯೆಗಳಲ್ಲಿ ಒಂದೊಂದರ ಸಂಬಂಧವಾಗಿಯೂ ಈ ಕಲಮು ಪರಿಣಾಮಕಾರಿಯಾಗುವುದು.

(೭) ಈ ಕಲಮಿನಲ್ಲಿ

(i) " ಸಂಬಂಧಿಕ " ಎಂದರೆ ಮೃತನ ಸಂಬಂಧದಲ್ಲಿ

(ಅ) ಮೃತನ ಹೆಂಡತಿ ಇಲ್ಲವೆ ಗಂಡ,

(ಬ) ಮೃತನ ತಂದೆ, ತಾಯಿ, ಮಕ್ಕಳು, ಕಕ್ಕಂದಿರು, ಕಕ್ಕಿಯರು, ಮತ್ತು

(ಕ) ಈ ಹಿಂದಿನ ಎರಡು ವಾಕ್ಯಾವಳಿಗಳಲ್ಲಿಯ ಯಾವುದೊಂದರಲ್ಲಿ ಬರುವ ಯಾವುದೇ ವ್ಯಕ್ತಿಯ ಸಂತಾನ ಮತ್ತು ಇಂತಹ ವ್ಯಕ್ತಿಯ ಇಲ್ಲವೆ ಸಂತಾನದ ಮದುವೆಯಲ್ಲಿಯ ಇನ್ನೊಬ್ಬ ಸಹಭಾಗಿ;

(ii) " ಮಕ್ಕಳು " ಮತ್ತು " ಸಂತಾನ " ಈ ಶಬ್ದಗಳಿಗೆ ಮಾಡಿದ ನಿರ್ದೇಶನವು ಅನೌರಸ ಮಕ್ಕಳು ಮತ್ತು ದತ್ತಕ ಮಕ್ಕಳು ಇವರನ್ನು ಒಳಗೊಳ್ಳುತ್ತದೆ.

(iii) " ವಾರ್ಷಿಕವೇತನ " ಈ ಶಬ್ದವು ಒಂದಕ್ಕೊಂದು ಸಂಬಂಧವಿದ್ದ ಇಲ್ಲವೆ ಸಂಬಂಧ ಇಲ್ಲದೆ, ಅಷ್ಟೇ ಹಣದ ಇಲ್ಲವೆ ಭಿನ್ನ ಮೊತ್ತದ ಮತ್ತು ನಿಯಮಿತ ಕಾಲಕ್ಕೆ ಕೊಡಬೇಕಾಗಿದ್ದ ಇಲ್ಲವೆ ಅನಿಯಮಿತ ಕಾಲಕ್ಕೆ ಕೊಡಬೇಕಾಗಿದ್ದ ಯಾವುದೇ ಸಂದಾಯ ಮಾಲಿಕೆಯನ್ನು ಒಳಗೊಳ್ಳುವುದು.

ಮತ್ತು ಕೆಂಪನಿಯ ಪಾಲುಗಳಲ್ಲಿಯ ಇಲ್ಲವೆ ಡಿಬೆಂಚರುಗಳಲ್ಲಿಯ ಬಡ್ಡಿ ಇಲ್ಲವೆ ಲಾಭಾಂಶಗಳ ಸಂದಾಯಮಾಲಿಕೆಯು ಈ ಕಲಮಿನ ಉದ್ದೇಶಗಳಿಗಾಗಿ ಮರಣಕ್ಕೆ ಮುಕ್ತಾಯವಾಗುವ ವಾರ್ಷಿಕವೇತನವೆಂದು ಘಟಿಸುವ ಸಂದಾಯ ಮಾಲಿಕೆಯಾಗಿ, ಆ ಸಂದಾಯಗಳು ಮರಣದಲ್ಲಿ ಮುಕ್ತಾಯವಾಗುವ ಪಾತ್ರತೆಯುಳ್ಳವಾಗಿದ್ದರೆ, ಇಲ್ಲವೆ ಮರಣದ ಮೂಲಕ ಕಂಪನಿಯ ಯಾವುದೇ ಪಾಲುಗಳು ಇಲ್ಲವೆ ಡಿಬೆಂಚರುಗಳಿಗೆ ಇಲ್ಲವೆ ಅವುಗಳನ್ನು ಹೊರಡಿಸುವ ...ಕ್ಕೆ ಹೊಂದಿಕೊಂಡ ಹಕ್ಕುಗಳ ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷವಾದ ಯಾವುದೇ ಸ್ಥಿತ್ಯಂತರದ ಇಲ್ಲವೆ ರದ್ದಾಗುವಿಕೆಯ ಕಾರಣದಿಂದ ಆ ಸಂದಾಯದ ಮೊತ್ತವು ಕಡಿಮೆಯಾಗುವ ಪಾತ್ರತೆಯುಳ್ಳದ್ದಾಗಿದ್ದರೆ, ತಿಳಿಯಲ್ಪಡಲಾಗುವುದು.

(iv) 'ಸಂಬಂಧಾತ್ಮಕ ಕ್ರಿಯೆಗಳು' ಅಂದರೆ ಈ ರೀತಿಯ ಯಾವುದೇ ಎರಡು ಇಲ್ಲವೆ ಹೆಚ್ಚು ಕ್ರಿಯೆಗಳು.

(ಅ) ಅದೇ ಆಸ್ತಿಯನ್ನು ಬಾಧಿಸುವ ಕ್ರಿಯೆಗಳು ಇಲ್ಲವೆ ಅವು ಗಳಲ್ಲಿ ಯಾವುದೊಂದು ಕೆಲವು ಆಸ್ತಿಯನ್ನು ಮತ್ತು ಆ ಆಸ್ತಿಯನ್ನು ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ಪ್ರತಿನಿಧಿಸುವ ಆಸ್ತಿಯನ್ನು ಇಲ್ಲವೆ ಆ ಆಸ್ತಿಯಿಂದ ಒದಗಿ ಬರುವ ಉತ್ಪನ್ನವನ್ನು ಇಲ್ಲವೆ ಇಂತಹ ಉತ್ಪನ್ನದ ಮೊತ್ತವನ್ನು ಪ್ರತಿನಿಧಿಸುವ ಯಾವುದೇ ಆಸ್ತಿಯನ್ನು ಬಾಧಿಸುವ ಬೇರೆ ಕ್ರಿಯೆ ಇಲ್ಲವೆ ಕ್ರಿಯೆಗಳು; ಇಲ್ಲವೆ,

(ಬ) ಒಂದು ಮತ್ತೊಂದನ್ನು ನಿರ್ದೇಶಿಸಿ, ಪರಿಣಾಮಕಾರಿಯಾದ ಇಲ್ಲವೆ ಪರಿಣಾಮಕಾರಿಯಾಗುವಂತೆ ಸಮರ್ಥವಾಗಬೇಕೆಂದು ಮಾಡಿದ, ಇಲ್ಲವೆ ಅನುಕೂಲವಾಗಬೇಕೆಂದು ಮಾಡಿದ, ಯಾವುದೇ ಎರಡು ಕ್ರಿಯೆಗಳು ಮತ್ತು ಆ ಎರಡು ಕ್ರಿಯೆಗಳಲ್ಲಿ ಒಂದೊಂದಕ್ಕೆ ಅದೇ ಸಂಬಂಧವುಳ್ಳ ಯಾವುದೇ ಮೂರನೆಯ ಕ್ರಿಯೆಯು ಮತ್ತು ಈ ಮೂರರಲ್ಲಿಯ ಯಾವುದೋ ಒಂದೊಂದಕ್ಕೆ ಅದೇ ರೀತಿಯ ಸಂಬಂಧವುಳ್ಳ ಯಾವುದೇ ನಾಲ್ಕನೆಯ ಕ್ರಿಯೆ ಮತ್ತು ಹೀಗೆಯೇ ಇದೇ ರೀತಿಯಲ್ಲಿ ಮುಂದೆ,

ಆ ಕ್ರಿಯೆಗಳು ಒಬ್ಬನೇ ವ್ಯಕ್ತಿಯಿಂದ ಪರಿಣಮಿಸಲ್ಪಟ್ಟರಲಿ, ಇಲ್ಲವೆ ಬೇರೆ ಬೇರೆ ವ್ಯಕ್ತಿಗಳಿಂದ ಪರಿಣಮಿಸಲ್ಪಟ್ಟರಲಿ, ಮೇಲೆ ಹೇಳಿದ ರೀತಿಯ ಹೊರತು ಬೇರೆ ರೀತಿಯಲ್ಲಿ ಅವು ಒಂದಕ್ಕೊಂದು ಸಂಬಂಧ ಪಟ್ಟರಲಿ ಇಲ್ಲವೆ ಇಲ್ಲದಿರಲಿ, ಮತ್ತು ಅವು ಏಕಕಾಲಕ್ಕೆ ಪರಿಣಮಿಸಿದವು ಇರಲಿ ಇಲ್ಲವೆ ಯಾವು ದೊಂದು ಮೊದಲು ಮತ್ತೊಂದು ಅದಕ್ಕಿಂತ ಮೊದಲು ಇಲ್ಲವೆ ನಂತರ ಪರಿಣಮಿಸಿದವು ಇರಲಿ.

**ವಿವೇಚನೆ:**

ಈ ಕಲಮು ಸಂಬಂಧಿಕರ ಹೆಸರಿನಲ್ಲಿ ಮಾಡಿದ ವಿನ್ಯಾಸಗಳ ಬಗ್ಗೆ ವಿಶದ ಮಾಡುತ್ತದೆ. ಆ ವಿನ್ಯಾಸಗಳು ಪೂರ್ಣ ಪ್ರತಿಬೆಲೆ ಪಡೆದು ಮಾಡಿದವುಗಳಾಗಿವೆ ಯೆಂದು ಸಿದ್ಧ ಮಾಡುವ ತನಕ ಅವುಗಳು ದಾನವೆಂದೇ ಗಣಿಸಲ್ಪಡುವುವು. ಅದು ಮಾರಾಟದ ಸೋಗು ಎಂದು ತಿಳಿಯಲ್ಪಡಲಾಗುವುದು. ಈ ಸೋಗಿನಲ್ಲಿ ವಾರಸಾ ಕರ ತಪ್ಪಿಸುವ ಹವಣಿಕೆಯನ್ನು ತಡೆಯುವುದೇ ಈ ಕಲಮಿನ ಉದ್ದೇಶವಾಗಿದೆ. ಸಂಬಂಧಿಕ ಸದಸ್ಯರಾಗಿರುವ ನಿಯಂತ್ರಿತ ಕಂಪನಿಯೂ ಸಂಬಂಧಿಕನ ಸ್ಥಾನದಲ್ಲಿಯೇ ಇರುವುದು. ಆದುದರಿಂದ ಇಂತಹ ವ್ಯವಹಾರದಿಂದ ಸಂಬಂಧಿಕರಿಗಾಗಿ ಮಾಡಿದ ವಿನ್ಯಾಸವು ಮೃತನಿಂದ ನಿಕ್ಕಿ ಪಡೆದ ಲಾಭದ ಮಟ್ಟಿಗೆ ವಾರಸಾಕರ ಮುಕ್ತವಾಗು ವುದು. ಮೃತನ ಲಾಭಕ್ಕಾಗಿ ಅಲ್ಲದೆ ಬೇರೆ ಯಾವುದೇ ವ್ಯಕ್ತಿಯ ಸಲುವಾಗಿರುವ ವಾರ್ಷಿಕ ವೇತನವು ಈ ಕಲಮಿನಿಂದ ಬಾಧಿತವಾಗದು. ಮೃತನ ಸಲುವಾಗಿ ನಿರ್ಮಿತವಾದ ಮತ್ತು ಮರಣದಲ್ಲಿ ಮುಕ್ತಾಯವಾಗಿರುವ ವಾರ್ಷಿಕ ವೇತನವು ಇಲ್ಲವೆ ಬೇರೆ ಮಿತ ಹಿತಸಂಬಂಧವು ಸಂಬಂಧಿಕನ ಸಲುವಾಗಿ ಮಾಡಿದ ಆಸ್ತಿಯ ವಿನ್ಯಾಸದ ಪ್ರತಿಬೆಲೆಯೆಂದು ತಿಳಿಯಲ್ಪಡಲಾಗದು.

ಈ ಕಲಮಿನಲ್ಲಿಯ ಉಪಕಲಮು (೧) ಸಾಮಾನ್ಯವಾಗಿ ಸಂಬಂಧಿಕರ ಸಲು ವಾಗಿ ಮಾಡಲಾದ ವಿನ್ಯಾಸಗಳು ೯ನೆಯ ಕಲಮಿನ ಉದ್ದೇಶಕ್ಕಾಗಿ ದಾನವೆಂದು ಓಡಿಯುವುದೆಂದು ಸಾರಿ ಹೇಳುತ್ತದೆ. ಆದರೆ ಈ ಸಾಮಾನ್ಯ ತತ್ವಕ್ಕೆ ಅಪವಾದಗಳಿವೆ: ಆ ವಿನ್ಯಾಸವು ಮೃತನಿಂದ ಮಾಡಲ್ಪಟ್ಟಿದ್ದು, ಅದು ಹಣ ಇಲ್ಲವೆ ಹಣದ ಕಿಮ್ಮತ್ತಿನ ರೂಪದಲ್ಲಿ ಪೂರ್ಣ ಬೆಲೆಗಾಗಿ ತನ್ನ ಹಿತಕ್ಕೆ ಇಲ್ಲವೆ ಉಪಯೋಗಕ್ಕೆ ಮಾಡಲಾಗಿದ್ದರೆ ಸಾಮಾನ್ಯ ನಿಯಮಕ್ಕೆ ಅಪವಾದವಾಗುವುದು; ತಾನು ಮಾಡಿರದೆ ಇದ್ದ ವಿಶ್ವಸ್ತ ನಿಧಿಯ ನಿವೇಶನದನ್ವಯವಾಗಿ ಕೇವಲ ಧರ್ಮದರ್ಶಿಯ ಪದಾಧಿಕಾರದಿಂದ ಮೃತ ನಿಂದ ಮಾಡಲ್ಪಟ್ಟ ವಿನ್ಯಾಸವೂ ಅಪವಾದವಾಗುವುದು. ವಿನ್ಯಾಸವು ಪೂರ್ಣ ಪ್ರತಿ ಬೆಲೆಗಾಗಿ ಮಾಡಲಾಗಿರದೆ ಇದ್ದರೆ, ಮತ್ತು ಅಪೂರ್ಣ ಬೆಲೆಗಾಗಿ ಮಾಡಲಾಗಿದ್ದರೆ, ಆಸ್ತಿಯ ಬೆಲೆಯಲ್ಲಿ ಅಪೂರ್ಣವಾಗಿರುವ ಪ್ರತಿ ಬೆಲೆಯನ್ನು ಕಡಿದುಕೊಳ್ಳಲು ರಿಯಾಯತಿ ತೋರಿಸಲಾಗಿದೆ.

"ಸಂಬಂಧಿಕ" ಎಂಬ ಶಬ್ದವನ್ನು ಉಪಕಲಮು (೭) ರಲ್ಲಿ ಬಿಡಿಸಿ ಹೇಳಲಾಗಿದೆ. ಈ ಕಲಮಿನಲ್ಲಿ ಮಾಡಿದ "ಸಂಬಂಧಿಕ" ಶಬ್ದದ ವ್ಯಾಖ್ಯೆಯು ೧೭ನೆಯ ಕಲಮಿನ ಉದ್ದೇಶಗಳಿಗಾಗಿಯೂ ಇದೆಯೆಂಬುದನ್ನು ನೆನೆಯಬೇಕು. ಆದರೆ ಈ ಕಲಮಿನಲ್ಲಿಯ ವ್ಯಾಖ್ಯೆಯು ೧೭ನೆಯ ಕಲಮಿನ ಉದ್ದೇಶಗಳಿಗಿಂತ ಹೆಚ್ಚು ವ್ಯಾಪಕವಾಗಿದೆ. ಏಕೆಂದರೆ ಇದರಲ್ಲಿ ಕಕ್ಕ, ಕಕ್ಕಿ, ಅವರ ಮಕ್ಕಳು ಆ ಶಬ್ದದ ವ್ಯಾಪ್ತಿಯಲ್ಲಿ ಬರುವರು.

' ಮೃತನಿಂದ ಮಾಡಲ್ಪಟ್ಟ ಯಾವುದೇ ವಿನ್ಯಾಸದ ಬಗ್ಗೆ 'ಉಪಕಲಮು (೧) ಹೇಳುತ್ತದೆ. ಯಾವುದೇ ವಿನ್ಯಾಸದಲ್ಲಿ ಮೃತನು ಇನ್ನೊಬ್ಬರೊಡನೆ ಜತೆಯಾಗಿ ಮಾಡಿದ ವಿನ್ಯಾಸವು ಸಮಾವೇಶವಾಗಿರುವುದು. ಮತ್ತು ವಿನ್ಯಾಸ ಶಬ್ದದಲ್ಲಿ ಒಳಗೊಳ್ಳುವ ಎಲ್ಲ ವ್ಯವಹಾರಗಳು ಬರುವುವು.

ಉಪಕಲಮು (೨) ಹತ್ತಬೇಕಾದರೆ ಈ ಕರಾರುಗಳು ಪೂರೈಸಲ್ಪಡಬೇಕು.

(೧) ಮೃತನು ಸಂಬಂಧಿಕರ ಸಲುವಾಗಿ ಆಸ್ತಿಯ ವಿನ್ಯಾಸ ಮಾಡಿರಬೇಕು.

(೨) ಹೀಗೆ ಮೃತನು ಸಂಬಂಧಿಕನ ಸಲುವಾಗಿ ಮಾಡಿದ ಆಸ್ತಿಯ ವಿನ್ಯಾಸದ ಪ್ರತಿಯಾಗಿ ಸಂಬಂಧಿಕನು ಮೃತನ ಸಲುವಾಗಿ ವಾರ್ಷಿಕವೇತನವನ್ನು ಇಲ್ಲವೆ ಮೃತನ ಇಲ್ಲವೆ ಬೇರೆ ಯಾವುದೇ ವ್ಯಕ್ತಿಯ ಮರಣದಲ್ಲಿ ಮುಕ್ತಾಯವಾಗುವ ಇತರ ಮಿತ ಹಿತಸಂಬಂಧವನ್ನು ನಿರ್ಮಿಸಿರಬೇಕು ಇಲ್ಲವೆ ವಿನ್ಯಾಸ ಮಾಡಿರಬೇಕು.

ಇದರಲ್ಲಿ ಅಡಕವಾದುದು ಇಷ್ಟು: ಒಬ್ಬ ವ್ಯಕ್ತಿಯು ತನ್ನ ಆಸ್ತಿಯನ್ನು ತನ್ನ ವಾರಸದಾರನಿಗೆ ಮಾರಿರಬಹುದು. ಮಾರಾಟದ ಪ್ರತಿಬೆಲೆಯೆಂದು ವಾರ್ಷಿಕವೇತನವನ್ನು— ಆ ಆಸ್ತಿಯಿಂದ ವಾರ್ಷಿಕವಾಗಿ ಬರುವ ಉತ್ಪನ್ನದಷ್ಟು ಆಗುವ ವಾರ್ಷಿಕ ವೇತನವನ್ನು ಪ್ರತಿಯಾಗಿ ಪಡೆದಿರಬಹುದು. ಇದರಿಂದ ತನ್ನ ಜೀವಮಾನದಲ್ಲಿಯೇ ಆಸ್ತಿಯನ್ನು ವಾರಸದಾರರ ಹೆಸರಿಗೆ ಹಸ್ತಾಂತರ ಮಾಡಿದಂತೆಯೂ ಆಗುವುದು; ಮತ್ತು ತಾನು ಜೀವಂತವಾಗಿರುವ ತನಕ ಆ ಆಸ್ತಿಯಿಂದ ಬರುವ ಉತ್ಪನ್ನದ ಉಪಭೋಗವನ್ನು ಮಾಡಲು ಅನುಕೂಲತೆ ಪಡೆದಂತೆಯೂ ಆಗುವುದು. ಈ ಕಲಮು ಇಲ್ಲದಿದ್ದರೆ ಮಾರಾಟ ಮಾಡಿದ ವ್ಯಕ್ತಿಯ ಹೆಸರಿಗೆ ಅವನ ಮರಣದ ಕಾಲದಲ್ಲಿ ಯಾವ ಆಸ್ತಿಯೂ ಇರದ್ದರಿಂದ ವಾರಸಾಕರ ತಪ್ಪುವುದು. ಏಕೆಂದರೆ ಆಸ್ತಿಯ ಪೂರ್ಣ ಒಡೆತನವು ವಾರಸದಾರರಿಗೆ ಹಸ್ತಾಂತರವಾಗಿ ಹೋಗಿ ಬಿಟ್ಟಿರುವುದು. ಮತ್ತು ಅದು ಪ್ರತಿಬೆಲೆಗಾಗಿ ಹಸ್ತಾಂತರವಾಗಿರುವುದು. ಈ ಬಗೆಯ ಪ್ರಕರಣಗಳನ್ನು ಎದುರಿಸಲು ಉಪಕಲಮು (೨) ನ್ನು ರೂಪಿಸಲಾಗಿದೆ. ಇಂತಹ ಸಂದರ್ಭದಲ್ಲಿ ವಾರ್ಷಿಕ ವೇತನ ಇಲ್ಲವೆ ಮರಣದಲ್ಲಿ ಮುಕ್ತಾಯವಾಗುವ ಇತರ ಮಿತ ಹಿತಸಂಬಂಧವು ಪ್ರತಿಬೆಲೆಯೆಂದು ಗಣಿಸಲ್ಪಡಲಾಗದು. ಪ್ರತಿಬೆಲೆಯಿಲ್ಲದೆ ಮಾಡಿದ ವಿನ್ಯಾಸವೆಂದು ಗಣಿಸಲ್ಪಟ್ಟು ದಾನವೆಂದು ತಿಳಿಯಲ್ಪಟ್ಟು ಕರಯೋಗ್ಯವಾಗುವುದು.

" ವಾರ್ಷಿಕ ವೇತನ " ವು ಈ ಕಲಮಿನಲ್ಲಿ ವ್ಯಾಖ್ಯೆ ಮಾಡಲ್ಪಟ್ಟಿದೆ. ಯಾವುದೇ ಕಾಲಾವಧಿಯಲ್ಲಿ ಕೊಡಲಾದ ಸಂದಾಯವು, ಸಂದಾಯಮಾಲಿಕೆಯು ಇದರಲ್ಲಿ ಸಮಾವೇಶವಾಗುವುದು.

ಕಂಪನಿಯು ಶಾಸನಿಕವಾದ ಒಂದು ಘಟಕ. ಒಂದು ದೃಷ್ಟಿಯಿಂದ ಪಾಲುದಾರರ ಪರವಾಗಿ ಧರ್ಮದರ್ಶಿಯ ಸ್ಥಾನದಲ್ಲಿ ಇರುವುದು. ಮೃತನೊಬ್ಬನು ತನ್ನ ಮಗನಿಗೆ ಒಂದು ಲಕ್ಷ ರೂಪಾಯಿ ಬೆಲೆ ಬಾಳುವ ಆಸ್ತಿಯನ್ನು ಹಸ್ತಾಂತರಿಸುತ್ತಾನೆ. ಇದಕ್ಕೆ ಪ್ರತಿಯಾಗಿ ಮಗನು ತಂದೆಯು ಯಾವ ಕಂಪನಿಯಲ್ಲಿ ಎಲ್ಲ ಬಂಡವಲಿನ ಒಡೆತನ ಪಡೆದಿರುವನೋ ಆ ಕಂಪನಿಗೆ ಒಂದು ಲಕ್ಷ ರೂಪಾಯಿ ಕೊಡುತ್ತಾನೆ. ಇದರಿಂದ ಮೃತನು ಪ್ರತಿ ಬೆಲೆಯನ್ನು ಪಡೆದಂತೆ ಆಗುವುದು. ಆದರೆ ಮೃತನು ಆ ಕಂಪನಿಯಲ್ಲಿ ೫೦ ಶತಾಂಶದಷ್ಟು ಬಂಡವಾಳಕ್ಕೆ ಒಡೆಯನಾಗಿದ್ದರೆ ೫೦೦೦೦/- ರೂಪಾಯಿ ಮಾತ್ರ ಪ್ರತಿಬೆಲೆಯೆಂದಾಗುವುದು.

೧೭ನೆಯ ಕಲಮಿನ ಅರ್ಥದಲ್ಲಿ ಮೃತನು ಒಂದು ಕಂಪನಿಯನ್ನು ನಿಯಂತ್ರಣದಲ್ಲಿಟ್ಟುಕೊಂಡಿದ್ದರೆ, ಮತ್ತು ಅಂತಹ ಕಂಪನಿಯು ಮೃತನ ಸಂಬಂಧಿಕನಿಗೆ ದಾನವೆಂದು ಕೊಟ್ಟರೆ, ಇಂತಹ ದಾನವು ೯ನೆಯ ಕಲಮಿನ ಅರ್ಥದಲ್ಲಿ ಮೃತನಿಂದಲೇ ಮಾಡಲ್ಪಟ್ಟ ದಾನವೆಂದು ಗಣಿಸಲ್ಪಡಲಾಗುವುದು. ಮತ್ತು ಇಂತಹ ದಾನದನ್ವಯವಾಗಿ ಬಂದ ಆಸ್ತಿಯು ಮೃತನ ಮರಣ ಸಮಯಕ್ಕೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದು. ಆದರೆ ಆ ಆಸ್ತಿಯು ಮೃತನಿಂದ ಎಷ್ಟು ಮಟ್ಟಿಗೆ ಪಡೆದುದೆಂದು ನಿರ್ಧರಿಸಲಾಗುವುದೋ ಅಷ್ಟು ಮಟ್ಟಿಗೆ ವಾರಸಾಕರ ಬೀಳುವುದು.

ಮೃತನಿಂದ ನಿಯಂತ್ರಿತವಾದ ಕಂಪನಿಯೊಂದು ಇದೆ. ಮೃತನು ವಿನ್ಯಾಸ ಮಾಡುವ ಕಾಲಕ್ಕೆ ಇಲ್ಲವೆ ಮೃತನ ಮರಣದ ಮುಂಚೆ ಯಾವುದೇ ಕಾಲಕ್ಕೆ ಮೃತನ ಸಂಬಂಧಿಕನು ಆ ನಿಯಂತ್ರಿತ ಕಂಪನಿಯ ಸದಸ್ಯನಾಗಿರುವನು. ಹೀಗಿರುವಾಗ ಮೃತನಿಂದ ನಿಯಂತ್ರಿತ ಕಂಪನಿಗೆ ಮಾಡಲಾದ ವಿನ್ಯಾಸವು ಸಂಬಂಧಿಕನಿಗೆ ಮಾಡಿದ ವಿನ್ಯಾಸವೆಂದು ತಿಳಿಯಲ್ಪಡುವುದು. ೨೭ನೆಯ ಕಲಮಿನ ಉಪಕಲಮು (೨) ಇದಕ್ಕೆ ಹತ್ತುವುದು. ಇದೇ ಕಲಮಿನ ಉಪಕಲಮು (೬) ಉಪಕಲಮು (೨) ರ ವ್ಯಾಪ್ತಿಯನ್ನು ಹೆಚ್ಚಿಸುವುದು. ಉಪಕಲಮು (೬) ರಲ್ಲಿ ಸಂಬಂಧಾತ್ಮಕ ಕ್ರಿಯೆಗಳ ಬಗ್ಗೆ ಹೇಳಿಯದೆ. ಸಂಬಂಧಾತ್ಮಕ ಕ್ರಿಯೆಗಳ ವ್ಯಾಖ್ಯೆಯನ್ನು ಉಪಕಲಮು (೭) ರಲ್ಲಿ ಮಾಡಲಾಗಿದೆ. (ಅ) ದ ಪ್ರಕಾರ ಅದೇ ಆಸ್ತಿಗೆ ಬಾಧಿಸುವ ವ್ಯವಹಾರಗಳು ಸಂಬಂಧಾತ್ಮಕ ಕ್ರಿಯೆಗಳು ಆಗುವುವು:-ಉದಾಹರಣೆ: ಅನು ತನ್ನ ಮನೆಯೊಂದನ್ನು ಬನಿಗೆ ಮಾರುತ್ತಾನೆ. ಬನು ಕನಿಗೆ ಅದನ್ನು ದಾನವಾಗಿ ಕೊಡುತ್ತಾನೆ. ಇಲ್ಲಿ ಅನು ಮಾಡಿದ ಮಾರಾಟ ಬನು ಮಾಡಿದ ದಾನ ಇವು ಒಂದೇ ಆಸ್ತಿಗೆ ಸಂಬಂಧಿಸಿದ ಕ್ರಿಯೆಗಳಾಗಿರುವುದರಿಂದ ಅವು ಸಂಬಂಧಾತ್ಮಕ ಕ್ರಿಯೆಗಳು.

(ಬ) ದಲ್ಲಿ ಬೇರೆ ರೀತಿ ತೋರಿಸಲಾಗಿದೆ. ಒಂದು ವ್ಯವಹಾರ ಒಂದು ಆಸ್ತಿಗೆ ಸಂಬಂಧಿಸಿದ್ದು, ಮತ್ತೊಂದು ವ್ಯವಹಾರವು ಆ ಮೊದಲಿನ ಆಸ್ತಿಯನ್ನು ಪ್ರತಿನಿಧಿಸುವ

ಆಸ್ತಿಗೆ ಸಂಬಂಧಿಸಿರುವುದು. ಉದಾಹರಣೆ (೧) ಅ ನು ಒಂದು ಮನೆಯನ್ನು ಬ ನಿಗೆ ದಾನ ಮಾಡಿ ಕೊಡುತ್ತಾನೆ. ಆ ಮನೆಯ ಬೆಲೆಯು ೫೦೦೦೦/- ರೂಪಾಯಿ ಇದೆ. ಅನು ಪ್ರತ್ಯೇಕವಾಗಿ ೫೦೦೦೦/- ರೂಪಾಯಿಗಳನ್ನು ಅ ನ ಮಗನಾದ ಕನಿಗೆ ದಾನ ಮಾಡಿ ಕೊಡುತ್ತಾನೆ. ಎರಡನೆಯ ದಾನವು ಅಪ್ರತ್ಯಕ್ಷವಾಗಿ ಮೊದಲನೆಯ ದಾನದ ಆಸ್ತಿಯನ್ನು ಪ್ರತಿನಿಧಿಸುವುದು. ಆದ್ದರಿಂದ ಈ ವ್ಯವಹಾರಗಳು ಸಂಬಂಧಾತ್ಮಕ ಕ್ರಿಯೆಗಳು.

(೨) ಒಂದು ವ್ಯವಹಾರವು ಒಂದು ಆಸ್ತಿಗೆ ಇನ್ನೊಂದು ಆ ಆಸ್ತಿಯಿಂದ ಬರುವ ಉತ್ಪನ್ನಕ್ಕೆ ಸಂಬಂಧಿಸಿರುವುದು: ಅ ನು ಬ ನಿಗೆ ಒಂದು ಆಸ್ತಿಯನ್ನು ಹಸ್ತಾಂತರಿಸುತ್ತಾನೆ. ಬನು ಆ ಆಸ್ತಿಯ ಉತ್ಪನ್ನವನ್ನು ಅ ನ ಮಗನಾದ ಕ ನಿಗೆ ವರ್ಗಾಯಿಸಿ ಕೊಡುತ್ತಾನೆ. ಈ ವ್ಯವಹಾರಗಳು ಸಂಬಂಧಾತ್ಮಕ ಕ್ರಿಯೆಗಳು.

(೩) ಒಂದು ವ್ಯವಹಾರವು ಒಂದು ಆಸ್ತಿಗೆ ಇನ್ನೊಂದು ಆ ಆಸ್ತಿಯಿಂದ ಬಂದ ಉತ್ಪನ್ನದ ಮೊತ್ತವನ್ನು ಪ್ರತಿನಿಧಿಸುವ ಆಸ್ತಿಗೆ ಸಂಬಂಧಿಸಿರುವುದು. ಅ ನು ಒಂದು ಕಂಪನಿಯ ಪಾಲುದಾರನು ಇರುತ್ತಾನೆ. ಆ ಪಾಲನ್ನು ಬ ನಿಗೆ ದಾನವಾಗಿ ಕೊಡುತ್ತಾನೆ. ಈ ಪಾಲಿನ ಮೇಲಿನ ಲಾಭಾಂಶವು ಕೂಡಿ ಬೆಳೆಯುತ್ತ ಹೋಗುವುದು. ಹೀಗೆ ಬೆಳೆದು ಬಂದ ಲಾಭಾಂಶದ ಮೊತ್ತದಿಂದ ಬ ನು ಅ ನಿಗಾಗಿ ವಾರ್ಷಿಕ ವೇತನವೊಂದನ್ನು ಕೊಂಡುಕೊಳ್ಳುತ್ತಾನೆ. ಈ ಎರಡೂ ವ್ಯವಹಾರಗಳು ಸಂಬಂಧಾತ್ಮಕ ಕ್ರಿಯೆಗಳು.

(೪) ಒಂದು ವ್ಯವಹಾರವು ಇನ್ನೊಂದನ್ನು ಅನುಕೂಲಿಸಲು ಮಾಡಲಾದುದು. ಅ ನು ಒಂದು ಕಂಪನಿಯ ಎಲ್ಲ ಪಾಲುಗಳನ್ನು ಕೊಂಡುಕೊಳ್ಳುತ್ತಾನೆ. ಆ ಪಾಲುಗಳ ನಗದು ಬೆಲೆಯು ೨೦೦೦೦೦/- ರೂಪಾಯಿ ಆಗಿದೆ. ಈ ಹಣದಿಂದ ಆ ಕಂಪನಿಯು ಇನ್ನೊಂದು ಕಂಪನಿಯ ಡಿಬೆಂಚರುಗಳನ್ನು ಕೊಳ್ಳುತ್ತದೆ. ಆ ಇನ್ನೊಂದು ಕಂಪನಿಯಲ್ಲಿ ಅ ನ ಮಗ ಕ ನು ಏಕಮೇವ ಪಾಲುದಾರನು ಇರುತ್ತಾನೆ. ಇಲ್ಲಿ ನಡೆಯುವ ವ್ಯವಹಾರಗಳು ಸಂಬಂಧಾತ್ಮಕ ಕ್ರಿಯೆಗಳು.

**೨೪ ಪೂರ್ವಿಯಾಗಿ ಮಾಡಿದ ಕೆಲ ಮಾರಾಟದ ಮತ್ತು ಒತ್ತಿ ವ್ಯವಹಾರಗಳ ಮೇಲೆ ಹೊಸ ಇಲ್ಲವೆ ಹೆಚ್ಚಿಸಿದ ವಾರಸಾಕರದ ದರಗಳ ಪರಿಣಾಮವು**

ಈ ಕಾಯಿದೆಯು ಪ್ರಾರಂಭವಾಗುವುದಕ್ಕೆ ಮೊದಲು ಇಲ್ಲವೆ ನಂತರ ಯಾವುದೊಂದು ಆಸ್ತಿಯಲ್ಲಿಯ ನಿರೀಕ್ಷಣೆಯಲ್ಲಿದ್ದ ಹಿತಸಂಬಂಧವು ಹಣದ ಕಿಮ್ಮತ್ತಿನ ರೂಪದಲ್ಲಿ ಪೂರ್ಣ ಪ್ರತಿಬೆಲೆಗಾಗಿ ಸದ್ಭಾವದಿಂದ ಮಾರಾಟ ಮಾಡಲಾಗಿದ್ದರೆ ಇಲ್ಲವೆ ಒತ್ತಿ ಹಾಕಲಾಗಿದ್ದರೆ, ಮತ್ತು ಆ ಹಿತಸಂಬಂಧವು

ಸ್ವಾಧೀನದಲ್ಲಿ ಬಂದಾಗ ಮರಣ ಹೊಂದಿದ ವ್ಯಕ್ತಿಯ ಸಂದರ್ಭದಲ್ಲಿ ಜಾರಿಯಲ್ಲಿರುವ ವಾರಸಾಕರದ ದರಗಳು ಮಾರಾಟ ಇಲ್ಲವೆ ಒತ್ತಿಯ ಕಾಲಕ್ಕೆ ಮರಣ ಹೊಂದಿದ ವ್ಯಕ್ತಿಯ ಸಂದರ್ಭದಲ್ಲಿ ಜಾರಿಯಲ್ಲಿರುವ, ಒಂದು ವೇಳೆ ಜಾರಿಯಲ್ಲಿದ್ದರೆ, ದರಗಳಕಿಂತ ಹೆಚ್ಚಾಗಿದ್ದರೆ, ಆಗ

(ಅ) ಮಾರಾಟ ಇಲ್ಲವೆ ಒತ್ತಿಯ ಕಾಲಕ್ಕೆ ಮರಣ ಹೊಂದಿದ ವ್ಯಕ್ತಿಯ ಸಂದರ್ಭದಲ್ಲಿ ಅನ್ವಯಿಸುವಂತಹ ದರಗಳು, ಒಂದು ವೇಳೆ ಜಾರಿಯಲ್ಲಿದ್ದರೆ, ಅನ್ವಯಿಸಿದಂತೆ ಕೊಡಬೇಕಾಗಿ ಬರುತ್ತಿತ್ತೋ ಆ ಕರದ ಹೊರತಾಗಿ ಬೇರೆ ಯಾವುದೇ ಕರವನ್ನು ಹಿತಸಂಬಂಧವು ಸ್ವಾಧೀನತೆಯಲ್ಲಿ ಬರುವಾಗ ಮಾರಲಿಕ್ಕೆ ತೆಗೆದು ಕೊಂಡವನಿಂದ ಇಲ್ಲವೆ ಒತ್ತಿ ಹಿಡಿದವನಿಂದ ಆ ಆಸ್ತಿಯ ಮೇಲೆ ಕೊಡಬೇಕಾಗುವುದಿಲ್ಲ; ಮತ್ತು

(ಬ) ಒತ್ತಿಯ ಸಂದರ್ಭದಲ್ಲಿ ಒತ್ತಿ ಹಾಕಿದವನಿಂದ ಯಾವುದೇ ಹೆಚ್ಚಿನ ಕರವು ಕೊಡಬೇಕಾಗಿ ಬಂದಲ್ಲಿ ಅದು ಒತ್ತಿ ಹಿಡಿದವನ ಋಣಭಾರದ ನಂತರದ ಹೊಣೆಯೆಂದು ಸರತ್ತಿ ಪಡೆಯುವುದು.

**ವಿವೇಚನೆ :**

ಒತ್ತಿ ಇಲ್ಲವೆ ಮಾರಾಟ ಆದ ಮೇಲೆ ನಿರೀಕ್ಷಣೆಯಲ್ಲಿದ್ದ ಹಿತಸಂಬಂಧದ ಮೇಲೆ ಕರವು ಆಕರಣೆ ಮಾಡಲ್ಪಡುವಾಗ ಕರದ ದರವು ಹೆಚ್ಚಾಗಿರುವ ಸಂಭವ ಇರುವುದೆಂದು ಗ್ರಹೀತ ಹಿಡಿದು ಕೊಂಡುದರ ಬಗ್ಗೆ ಇಲ್ಲಿ ಹೇಳಲಾಗಿದೆ. ಒತ್ತಿ ಇಲ್ಲವೆ ಮಾರಾಟ ಆದ ಸಮಯಕ್ಕೆ ಪ್ರತ್ಯಕ್ಷ ಹಿತಸಂಬಂಧದ ಸ್ವಾಧೀನತೆಯನ್ನು ಪಡೆವ ಕಾಲಕ್ಕೂ ಅಂತರವಿರುವುದು ಸಂಭವನೀಯ; ಈ ಕಾಲಾವಧಿಯಲ್ಲಿ ವಾರಸಾಕರದಲ್ಲಿ ದರದ ಸ್ಥಿತ್ಯಂತರವಾದರೆ, ಯಾವ ಕಾಲಕ್ಕೆ ಸದ್ಭಾವದಿಂದ ಒತ್ತಿ ಇಲ್ಲವೆ ಮಾರಾಟಕ್ಕೆ ತೆಗೆದುಕೊಳ್ಳಲ್ಪಟ್ಟಿತೋ ಆ ಕಾಲಕ್ಕೆ ಕೊಡಬೇಕಾಗಿದ್ದ ದರಗಳಕಿಂತ ಹೆಚ್ಚಿಗೆ ಕೊಡಬೇಕಾಗಿಲ್ಲ. ಒಂದು ವೇಳೆ ಒತ್ತಿ ಹಾಕಿದವನು, ಹೆಚ್ಚಿಗೆ ಕರ ಕೊಡುವ ಪ್ರಸಂಗ ಬಂದರೆ, ಅದು ಆ ಆಸ್ತಿಯ ಮೇಲೆ ಒತ್ತಿ ಹಿಡಿದವನ ಅಧಿಕಾರ ಇಲ್ಲವೆ ಹಕ್ಕಿನ ನಂತರದ ಭಾರವಾಗುವುದು, ಎಂದು ಹೇಳಿ ಒತ್ತಿ ಹಿಡಿದವನ ಹಕ್ಕನ್ನು ಸಂರಕ್ಷಿಸಿದೆ. ಮತ್ತು ಸದ್ಭಾವದಿಂದ ಪೂರ್ಣ ಪ್ರತಿ ಬೆಲೆಗಾಗಿ ಈ ಕಾಯಿದೆಯು ಪ್ರಾರಂಭವಾಗುವುದಕ್ಕೆ ಮುಂಚೆ ಕೊಂಡವನು ಇಲ್ಲವೆ ಒತ್ತಿ ಹಿಡಿದವನು ಕರ ಕೊಡಬೇಕಾಗಿಲ್ಲ. ಆದುದರಿಂದ ಈ ಕಲಮಿನ ಉದ್ದೇಶಕ್ಕಾಗಿ ಮಾರಾಟದ ಇಲ್ಲವೆ ಒತ್ತಿಯ ತಾರೀಖು ಬಹು ಮಹತ್ವದ್ದಾಗುವುದು.

೨೯ ಮೃತನ ದಾಂಪತ್ಯ ಸಹಭಾಗಿಯ ಮರಣದ ಮೂಲಕ ನಿವೇಶನ ಮಾಡಿದ ತಾರೀಖಿನಿಂದ ಯಾವುದರ ಬಗ್ಗೆ ವಾರಸಾಕರ ಕೊಡಲಾಗಿದೆಯೋ ಆ ನಿವೇಶಿತ ಆಸ್ತಿ

ವೈವಾಹಿಕ ಬಂಧನದ ಸಹಭಾಗಿಗಳಲ್ಲಿ ಒಬ್ಬರ ಮರಣದ ಮೂಲಕ ನಿವೇಶನ ಮಾಡಿದ ತಾರೀಖಿನಿಂದ ಯಾವುದೇ ನಿವೇಶಿತ ಆಸ್ತಿಯ ಸಂಬಂಧದಲ್ಲಿ ವಾರಸಾಕರವು ಆ ಮೊದಲೇ ಕೊಡಲ್ಪಟ್ಟಿದ್ದರೆ, ಆ ಇನ್ನೊಬ್ಬ ಸಹಭಾಗಿಯ ಮರಣದ ಕಾಲಕ್ಕೆ ಇಲ್ಲವೆ ನಿವೇಶನವು ಜಾರಿಯಲ್ಲಿರುವ ಯಾವುದೇ ಕಾಲಕ್ಕೆ ಇಂತಹ ಆಸ್ತಿಯ ವಿನ್ಯಾಸ ಮಾಡಲು ಸಮರ್ಥನಾಗಿರದಿದ್ದರೆ, ಆ ಆಸ್ತಿಯ ಬಗ್ಗೆ ವಾರಸಾಕರ ಕೊಡಲ್ಪಡಬೇಕಾಗಿಲ್ಲ; ಮತ್ತು ಅವನ ಮರಣದ ಮೂಲಕ ನಿವೇಶನದನ್ವಯವಾಗಿ ತದನಂತರದ ನಿರ್ಬಂಧಗಳು ಆ ಆಸ್ತಿಯ ಬಗ್ಗೆ ಪರಿಣಾಮಕಾರಿಯಾದರೆ, ಆ ಇನ್ನೊಬ್ಬ ಸಹಭಾಗಿಯ ಮರಣ ಸಮಯಕ್ಕೆ ಶಾಸನಿಕ ವ್ಯವಹಾರ ಸಾಮರ್ಥ್ಯವುಳ್ಳವನಾಗಿದ್ದರೆ, ಇಲ್ಲವೆ ಆಸ್ತಿಯ ವಿನ್ಯಾಸ ಮಾಡಲು ಸಮರ್ಥನಾಗಿರುವ ಯಾವುದೇ ಕಾಲಕ್ಕೆ ಅವನು ಶಾಸನಿಕ ವ್ಯವಹಾರ ಸಾಮರ್ಥ್ಯವುಳ್ಳವನಾಗಿದ್ದರೆ, ಆ ಆಸ್ತಿಯ ಬಗ್ಗೆ ವಾರಸಾಕರ ಕೊಡಲ್ಪಡಬೇಕಾಗಿಲ್ಲ.

**ವಿವೇಚನೆ:**

ಮದುವೆಯಾಗಿರುವ ಸಹಭಾಗಿಗಳಲ್ಲಿ ಒಬ್ಬರ ಮರಣದ ಮೂಲಕ ನಿವೇಶನ ಮಾಡಿದ ತಾರೀಖಿನಿಂದ ಒಮ್ಮೆ ವಾರಸಾಕರ ಕೊಡಲ್ಪಟ್ಟಿರುವ ನಿವೇಶಿತ ಆಸ್ತಿಯ ಬಗ್ಗೆ ಕರಮುಕ್ತತೆ ಇದೆಯೆಂಬುದನ್ನು ಈ ಕಲಮು ಹೇಳುತ್ತದೆ. ಆದರೆ ಈ ಮುಕ್ತತೆಯು ಒಂದು ನಿರ್ಬಂಧವುಳ್ಳದ್ದಾಗಿದೆ. ಅಂದರೆ ಆಸ್ತಿಯು ನಿವೇಶಿತವಾಗಿರುವ ಕಾಲಾವಧಿಯಲ್ಲಿ ಮೃತನು ಆಸ್ತಿಯ ವಿನ್ಯಾಸ ಮಾಡುವ ಸಾಮರ್ಥ್ಯವುಳ್ಳವನಾಗಿದ್ದರೆ ಈ ಮುಕ್ತತೆ ದೊರೆಯುವುದಿಲ್ಲ. ದಾಂಪತ್ಯ ವಿಚ್ಛೇದ ಪುನರ್ವಿವಾಹಗಳಿಂದ ಕರಮುಕ್ತತೆಗೆ ಬಾಧಕವಾಗುವುದಿಲ್ಲ. ಈ ಕಲಮಿನನ್ವಯವಾಗಿ ಕರ ಮುಕ್ತತೆ ಪಡೆಯಲು ಈ ಕೆಳಗಿನ ಕರಾರುಗಳನ್ನು ಗಮನಿಸಬೇಕಾಗುವುದು.

(೧) ಮದುವೆಯ ಸಹಭಾಗಿಗಳಲ್ಲಿಯ ಒಬ್ಬರ ಮರಣದ ಮೂಲಕ ವಾರಸಾಕರವು ಆ ಮೊದಲು ಕೊಡಲ್ಪಟ್ಟಿರಬೇಕು.

(೨) ಈ ವಾರಸಾಕರವು ಆಸ್ತಿಯು ನಿವೇಶನ ಮಾಡಲ್ಪಟ್ಟ ತಾರೀಖಿನ ನಂತರ ಕೊಡಲ್ಪಟ್ಟಿರಬೇಕು.

(೩) ಈ ವಾರಸಾಕರವು ಆ ನಿವೇಶಿತ ಆಸ್ತಿಯ ಬಗ್ಗೆ ಕೊಡಲ್ಪಟ್ಟಿರಬೇಕು.

(೪) ಈ ಕಲಮು ಇಲ್ಲದಿದ್ದರೆ, ಆ ನಿವೇಶಿತ ಆಸ್ತಿಯ ಬಗ್ಗೆ ಪಶ್ಚಾತ್ ಜೀವಿತ್ವದ ಕಾರಣದಿಂದ ಇನ್ನೊಬ್ಬ ಸಹಭಾಗಿಯ ಮರಣದ ಮೂಲಕ ವಾರಸಾಕರ ಭಾರವುಂಟಾಗಿರಬೇಕು.

(೫) ನಂತರ ಮರಣಹೊಂದುವ ಆ ಮದುವೆಯ ಇನ್ನೊಬ್ಬ ಸಹಭಾಗಿಯು ಮರಣದ ಕಾಲಕ್ಕೆ ಇಲ್ಲವೆ ಆಸ್ತಿಯು ನಿವೇಶಿತವಾಗಿ ಉಳಿಯುವ ಕಾಲಾವಧಿಯಲ್ಲಿಯ ಯಾವುದೇ ಕಾಲಕ್ಕೆ ಆ ಆಸ್ತಿಯ ವಿನ್ಯಾಸ ಮಾಡಲು ಸಮರ್ಥನಾಗಿರಬೇಕು; ಮತ್ತು

(೬) ಆ ಮದುವೆಯ ಇನ್ನೊಬ್ಬ ಸಹಭಾಗಿಯ ಮರಣದ ಮೂಲಕ ನಿವೇಶನದನ್ವಯವಾಗಿ ನಂತರದ ನಿರ್ಬಂಧಗಳು ಪರಿಣಾಮಕಾರಿಯಾದರೆ, ಆ ಸಹಭಾಗಿಯು ಮರಣ ಸಮಯಕ್ಕೆ ಶಾಸನಿಕ ವ್ಯವಹಾರ ಸಾಮರ್ಥ್ಯವುಳ್ಳವನಾಗಿರಬಾರದು. ಇಲ್ಲವೆ ಆಸ್ತಿಯ ವಿನ್ಯಾಸ ಮಾಡಲು ಹಾಗೆ ಸಾಮರ್ಥ್ಯವುಳ್ಳವನಾಗಿರುವಾಗಿನ ಕಾಲಾವಧಿಯಲ್ಲಿಯ ಯಾವುದೇ ಕಾಲಕ್ಕೆ ಶಾಸನಿಕ ವ್ಯವಹಾರ ಸಾಮರ್ಥ್ಯವುಳ್ಳವನಾಗಿರಬಾರದು.

ಮದುವೆಯ ಸಹಭಾಗಿಗಳಲ್ಲಿ ಯಾರೊಬ್ಬರ ಮರಣದ ಮೂಲಕ ವಾರಸಾಕರ ಕೊಡಲ್ಪಟ್ಟಿರಬೇಕೆಂಬುದು ಕರಮುಕ್ತತೆಗೆ ಮುಖ್ಯವಾದ ಮಾತು. ಆ ಆಸ್ತಿಯು ಬೇರೆ ಯಾವುದೇ ಕಾರಣಕ್ಕಾಗಿ ಕರಮುಕ್ತತೆ ಪಡೆದಿದ್ದರೆ, ಈ ಕಲಮಿನನ್ವಯವಾಗಿ ಬರುವ ರಿಯಾಯತಿಯು ದೊರೆಯಲಾರದು. ಉದಾಹರಣೆ: ಮದುವೆಯ ಸಹಭಾಗಿಗಳಲ್ಲಿ ಒಬ್ಬರ ಮರಣದಿಂದ ಅವರ ಆಸ್ತಿಯು ವಾರಸಾಕರ ಪಾತ್ರವಾಗುವಷ್ಟು ಮೊತ್ತದಲ್ಲಿ ದೊಡ್ಡದು ಇರದಿದ್ದರೆ, ಮತ್ತು ಆ ಕಾರಣಕ್ಕಾಗಿ ವಾರಸಾಕರ ಹಾಕಲಾಗಿರದಿದ್ದರೆ, ಇನ್ನೊಬ್ಬ ಸಹಭಾಗಿಯ ಮರಣದಿಂದ ಆ ಆಸ್ತಿಗೆ ಕರಮುಕ್ತತೆಯು ದೊರೆಯಲಾರದು. ಏಕೆಂದರೆ ಈ ಮೊದಲು ಆ ಆಸ್ತಿಗೆ ವಾರಸಾಕರ ಬಿದ್ದಿರುವುದಿಲ್ಲ

ಈ ಕಲಮಿನ ಉದ್ದೇಶಗಳಿಗಾಗಿ ನಿವೇಶಿತ ಆಸ್ತಿಯು ಒಂದು ಘಟಕವೆಂದು ತಿಳಿಯಲ್ಪಡುವುದು. ವಾರಸಾಕರವು ಆ ಆಸ್ತಿಯ ಮೇಲೆ ಕೊಡಲಾಗಿದ್ದರೆ, ಈ ಕಲಮಿನ ಪ್ರಕಾರ ಕರಮುಕ್ತತೆಯು ಒದಗಬೇಕಾಗಿದ್ದರೆ, ವಾರಸಾಕರವು ಆಸ್ತಿಯು ನಿವೇಶನ ಮಾಡಲ್ಪಟ್ಟ ತಾರೀಖಿನ ನಂತರ ಕೊಡಲ್ಪಟ್ಟಿರಬೇಕು. ಆದುದರಿಂದ ಆಸ್ತಿಯು ಎಂದು ನಿವೇಶನವಾಯಿತು ಮತ್ತು ಆ ಆಸ್ತಿಯ ಮೇಲೆ ಎಂದು ಕರ ಕೊಡಲ್ಪಟ್ಟಿತು ಎಂಬುದು ಮುಖ್ಯ ಸಂಗತಿಗಳಾಗುವುವು. ನಿವೇಶನವು ಮೃತ್ಯುಲೇಖದ ಮೂಲಕ ಮಾಡಲಾಗಿದ್ದರೆ, ಆ ಆಸ್ತಿಯು ಮರಣದ ಕಾಲಕ್ಕೇನೆ ಕರಪಾತ್ರವಾಗುವುದು ಮತ್ತು ಮೃತ್ಯುಲೇಖವಾದರೂ ಮರಣದ ತಾರೀಖಿಗೇ ಪರಿಣಾಮಕಾರಿಯಾಗುವುದು.

ಮದುವೆಯ ಸಹಭಾಗಿಗಳಲ್ಲಿ ನಂತರ ಮರಣಹೊಂದಿದವರು ತಾವೇ ಸ್ವತಃ ಆ ಆಸ್ತಿಯ ವಿನ್ಯಾಸ ಸಾಮರ್ಥ್ಯವುಳ್ಳವರಾಗಿದ್ದರೆ, ಈ ಕಲಮಿನ ಪ್ರಕಾರ ಕರ ಮುಕ್ತತೆ ದೊರೆಯದು.

**೩೦ ವಾರಸಾಕರ ಸಂಬಂಧವಾಗಿ ಎರಡುಸಲ ಕರಾಕರಣೆಯ ಪರಿಹಾರಕ್ಕಾಗಿ ಇಲ್ಲವೆ ತಪ್ಪಿಸುವುದಕ್ಕಾಗಿ ಕರಾರುಪತ್ರ.**

ಈ ಕಾಯಿದೆಯನ್ವಯವಾಗಿ ಮತ್ತು ಪರಸ್ಪರ ಸಹಕಾರಿ ದೇಶದಲ್ಲಿ ಜಾರಿಯಲ್ಲಿರುವ ಪ್ರತಿರೂಪಿ ಕಾಯಿದೆಯನ್ವಯವಾಗಿ ಹಾಕಲ್ಪಡುವ ವಾರಸಾಕರದ ಸಂಬಂಧವಾಗಿ ಎರಡು ಸಲ ಕರಾಕರಣೆಯ ಪರಿಹಾರಕ್ಕಾಗಿ ಇಲ್ಲವೆ ಅದನ್ನು ತಪ್ಪಿಸುವದಕ್ಕಾಗಿ ಬೇರೆ ಯಾವುದೇ ಪರಸ್ಪರ ಸಹಕಾರಿ ದೇಶದ ಸರಕಾರದೊಂದಿಗೆ ಕೇಂದ್ರ ಸರಕಾರವು ಕರಾರುಪತ್ರ ಮಾಡಿಕೊಳ್ಳಬಹುದು. ಮತ್ತು ಸರಕಾರಿ ಗ್ಯಾಜೆಟದಲ್ಲಿಯ ಪ್ರಕಟನೆಯಿಂದ ಆ ಕರಾರು ಪತ್ರವನ್ನು ಕಾರ್ಯಕಾರಿಮಾಡುವುದಕ್ಕೆ ಆವಶ್ಯಕವಾಗುವಂತಹ ವ್ಯವಸ್ಥೆಯನ್ನು ಮಾಡಬಹುದು.

**ವಿವರಣೆ:** ಪರಸ್ಪರ ಸಹಕಾರಿ ದೇಶವೆಂಬ ಪದಪ್ರಯೋಗವು ಈ ಕಾಯಿದೆಯ ಉದ್ದೇಶಗಳಿಗಾಗಿ ಕೇಂದ್ರ ಸರಕಾರವು ಸರಕಾರಿ ಗ್ಯಾಜೆಟದಲ್ಲಿ ಪರಸ್ಪರ ಸಹಕಾರಿ ದೇಶವೆಂದು ಸಾರುವ ಯಾವುದೇ ದೇಶವೆಂದು ಅರ್ಥವಾಗುವುದು.

**ವಿವೇಚನೆ:**

ಮೃತವ್ಯಕ್ತಿಗೆ ಆಸ್ತಿಯು ಈ ದೇಶದಲ್ಲಿಯೂ ಇರಬಹುದು; ಪರದೇಶಗಳಲ್ಲಿಯೂ ಇರಬಹುದು. ಈ ಕಾಯಿದೆಯ ಪ್ರಕಾರ ಪರದೇಶದಲ್ಲಿರುವ ಆಸ್ತಿಯು ಮೃತನು ಭಾರತದ ದೇಶವಾಸಿಯು ಆಗಿರುವ ಕಾರಣದಿಂದ ಕರಪಾತ್ರವಾಗುವುದು. ಆದರೆ ಯಾವ ದೇಶದಲ್ಲಿ ಆಸ್ತಿಯು ಇರುವುದು, ಆ ದೇಶದಲ್ಲಿಯ ಕಾಯಿದೆಯ ಪ್ರಕಾರ ಆ ಆಸ್ತಿಯು ಅಲ್ಲಿಯ ವಾರಸಾಕರಕ್ಕೆ ಪಾತ್ರವಾದರೆ, ಒಂದೇ ಆಸ್ತಿಯ ಸಂಬಂಧದಲ್ಲಿ ಒಂದೇ ವ್ಯಕ್ತಿಯ ಮರಣದ ಮೂಲಕ ಎರಡು ಸಲ ವಾರಸಾಕರ ಬೀಳುವ ಸಂಭವವಿರುವುದು. ಇದನ್ನು ತಪ್ಪಿಸಲು, ಇಲ್ಲವೆ ಇದರಿಂದ ಪರಿಹಾರ ಪಡೆಯಲು ಒಂದು ಬಗೆಯ ವ್ಯವಸ್ಥೆ ಬೇಕಾಗುವುದು. ಈ ಕಲಮು ಹಾಗೆ ವ್ಯವಸ್ಥೆ ಮಾಡಿಕೊಳ್ಳಲು ಒಂದು ಕರಾರುಪತ್ರ ಮಾಡಿಕೊಳ್ಳಲು, ಕೇಂದ್ರ ಸರಕಾರಕ್ಕೆ ಅಧಿಕಾರ ಕೊಡುತ್ತದೆ. ಈ ಅಧಿಕಾರದ ಮೂಲಕ ಕೇಂದ್ರ ಸರಕಾರವು ಪರಸ್ಪರ ಸಹಕಾರಿ ದೇಶದ ಸರಕಾರದೊಡನೆ ಕರಾರುಪತ್ರವನ್ನು ಮಾಡಿಕೊಳ್ಳಬಹುದು; ಮತ್ತು ಆ ಕರಾರುಪತ್ರವು ಕಾರ್ಯಕಾರಿಯಾಗುವಂತೆ ನೋಡಿಕೊಳ್ಳಲು ಯೋಗ್ಯ ವ್ಯವಸ್ಥೆಯನ್ನು ಮಾಡಬಹುದು.

ಯಾವ ದೇಶವನ್ನು ಪರಸ್ಪರ ಸಹಕಾರೀ ದೇಶವೆಂದು ತಿಳಿಯಬೇಕೆಂಬುದನ್ನು ಸರಕಾರಿ ಗ್ಯಾಜೆಟದಲ್ಲಿಯ ಪ್ರಕಟನೆಯಿಂದ ತಿಳಿಯಬೇಕೆಂದು ಈ ಕಲಮಿನ ವಿವರಣೆಯು ಹೇಳಬಹುದು.

೩೧ ಆಸ್ತಿಗೆ ತ್ವರಿತ ಉತ್ತರಾಧಿಕಾರಿತ್ವ ಬರುವಾಗ ರಿಯಾಯತಿ.

ಯಾವುದೇ ವ್ಯಕ್ತಿಯ ಮರಣದ ಮೂಲಕ ಇಳಿದು ಬಂದ ಯಾವುದೇ ಆಸ್ತಿಯ ಮೇಲೆ ವಾರಸಾಕರವು ಕೊಡಬೇಕಾಗಿ ಬಂದಿದೆಯೆಂದೂ ಮತ್ತು ತದನಂತರದಲ್ಲಿ ಐದು ವರುಷಗಳಲ್ಲಿ ಅದೇ ಆಸ್ತಿಯ ಮೇಲೆ ಇಲ್ಲವೆ ಆ ಆಸ್ತಿಯ ಭಾಗದ ಮೇಲೆ ಮೊದಲನೆಯ ಮರಣದ ಮೂಲಕ ಆಸ್ತಿಯು ಯಾವ ವ್ಯಕ್ತಿಗೆ ಇಳಿದು ಬಂದಿತೋ ಆ ವ್ಯಕ್ತಿಯ ಮರಣದ ಮೂಲಕ ಮತ್ತೊಮ್ಮೆ ವಾರಸಾ ಕರವು ಕೊಡಬೇಕಾಗಿ ಬಂದಿದೆಯೆಂದು ಬೋರ್ಡಿಗೆ ಸಮಾಧಾನಕಾರಕವಾಗಿ ತಿಳಿದು ಬಂದರೆ, ಎರಡನೆಯ ಮರಣದ ಮೂಲಕ ಇಳಿದು ಬಂದ ಆ ಆಸ್ತಿಯ ಸಂಬಂಧವಾಗಿ ಕೊಡಬೇಕಾದ ವಾರಸಾಕರವು ಈ ರೀತಿಯಾಗಿ ಕಡಿಮೆ ಮಾಡಲ್ಪಡುವುದು.

ಮೊದಲನೆಯ ಮರಣ ಸಂಭವಿಸಿದ ನಂತರ ಒಂದು ವರುಷದಲ್ಲಿ ಎರಡನೆಯ ಮರಣವು ಸಂಭವಿಸಿದರೆ ಐವತ್ತು ಶತಾಂಶದಷ್ಟು;

ಮೊದಲನೆಯ ಮರಣ ಸಂಭವಿಸಿದ ನಂತರ ಎರಡು ವರುಷಗಳಲ್ಲಿ ಎರಡನೆಯ ಮರಣವು ಸಂಭವಿಸಿದರೆ ನಾಲ್ವತ್ತು ಶತಾಂಶದಷ್ಟು;

ಮೊದಲನೆಯ ಮರಣ ಸಂಭವಿಸಿದ ನಂತರ ಮೂರು ವರುಷಗಳಲ್ಲಿ ಎರಡನೆಯ ಮರಣವು ಸಂಭವಿಸಿದರೆ ಮುವ್ವತ್ತು ಶತಾಂಶದಷ್ಟು;

ಮೊದಲನೆಯ ಮರಣ ಸಂಭವಿಸಿದ ನಂತರ ನಾಲ್ಕು ವರುಷಗಳಲ್ಲಿ ಎರಡನೆಯ ಮರಣವು ಸಂಭವಿಸಿದರೆ ಇಪ್ಪತ್ತು ಶತಾಂಶದಷ್ಟು;

ಮೊದಲನೆಯ ಮರಣವು ಸಂಭವಿಸಿದ ನಂತರ ಐದು ವರುಷಗಳಲ್ಲಿ ಎರಡನೆಯ ಮರಣವು ಸಂಭವಿಸಿದರೆ ಹತ್ತು ಶತಾಂಶದಷ್ಟು:

ಆದರೆ, ಎರಡನೆಯ ಮರಣದ ಮೂಲಕ ಯಾವ ಆಸ್ತಿಯ ಮೇಲೆ ವಾರಸಾಕರವು ಕೊಡಬೇಕಾಗಿರುವುದೋ ಆ ಆಸ್ತಿಯ ಬೆಲೆಯು ಮೊದಲನೆಯ ಮರಣದ ಮೂಲಕ ಯಾವ ಆಸ್ತಿಯ ಮೇಲೆ ವಾರಸಾಕರ ಕೊಡಬೇಕಾಗಿತ್ತೋ ಆ ಆಸ್ತಿಯ ಬೆಲೆಯಕಿಂತ ಹೆಚ್ಚಿಗೆ ಆದರೆ, ಈ ಕಲಮಿನನ್ವಯವಾಗಿ ವಾರಸಾ

ಕರದ ಮೊತ್ತದ ಕಡಿತವನ್ನು ಲೆಕ್ಕ ಹಾಕುವ ಉದ್ದೇಶಕ್ಕಾಗಿ ಮೊದಲನೆಯ ಬೆಲೆಯು ಬದಲು ಎರಡನೆಯ ಬೆಲೆಯನ್ನು ಹಿಡಿಯಲಾಗುವುದು.

**ವಿವರಣೆ ೧.** ಈ ಕಲಮಿನ ಉದ್ದೇಶಗಳಿಗಾಗಿ ಆ ಮುಂಚೆ ಆದ ಮರಣದ ಸಂಬಂಧವಾಗಿ ಪ್ರತಿಯೊಂದು ಮರಣವನ್ನು ಎರಡನೆಯ ಮರಣವೆಂದು ಗಣಿಸಲ್ಪಡಲಾಗುವುದು.

**ವಿವರಣೆ ೨.** ಈ ಕಲಮಿನ ಉದ್ದೇಶಗಳಿಗಾಗಿ ಕಾಲಾವಧಿಯನ್ನು ಎಣಿಸುವಾಗ ಯಾವ ಆಸ್ತಿಯ ಸಂಬಂಧವಾಗಿ ವಾರಸಾ ಕರವು ಕೊಡಲ್ಪಡಬೇಕಾಗಿರುವುದೊ ಅಂತಹ ಯಾವುದೇ ವ್ಯಕ್ತಿಯ ಮರಣದ ನಂತರ ಮೂರು ತಿಂಗಳ ಒಳಗೆ ಸಂಭವಿಸಿದ ಮರಣಗಳನ್ನು ಒಂದೇ ಮರಣವೆಂದು ಗಣಿಸಲ್ಪಡಲಾಗುವುದು ಮತ್ತು ಆ ಮೂರು ತಿಂಗಳಲ್ಲಿ ಪುನರ್ಮರಣಗಳಾಗಿವೆಯೆಂಬ ಕಾರಣಕ್ಕಾಗಿ ಅದೇ ಆಸ್ತಿಯ ಮೇಲೆ ಪುನಃ ವಾರಸಾಕರವನ್ನು ಕೊಡಬೇಕಾಗಿಲ್ಲ.

**ವಿವೇಚನೆ :**

ಮರಣವು ನೈಸರ್ಗಿಕ ಘಟನೆ. ದುರ್ದೈವದಿಂದ ಯಾವದೊಂದು ಆಸ್ತಿಯ ಒಡೆಯರು ಬೇಗನೆ ಮರಣ ಹೊಂದ ತೊಡಗಿದರೆ ಅಲ್ಪಾವಧಿಯಲ್ಲಿ ಆಸ್ತಿಯು ವಾರಸಾಕರ ಪಾತ್ರವಾಗಿ ಕರಗಿ ಹೋಗುವುದು. ಇದು ಒಡೆಯರಿಗಾಗುವ ಅಸಾಧಾರಣ ಪೆಟ್ಟು. ನೈಸರ್ಗಿಕ ಘಟನೆಯ ದುರ್ದೈವಕ್ಕೆ ಜತೆಯಾಗಿ ಕಾಯಿದೆಯ ಹೊಡೆತ ಬಿದ್ದರೆ, ನಿಜವಾಗಿ ಅನ್ಯಾಯವಾಗುವುದು. ಅದನ್ನು ತಪ್ಪಿಸಿ ರಿಯಾಯಿತಿ ತೋರಿಸಬೇಕೆಂದು ಈ ಕಲಮನ್ನು ರೂಪಿಸಲಾಗಿದೆ.

ಈ ಕಲಮು ಅನ್ವಯಿಸಬೇಕಾದರೆ ಈ ಕರಾರುಗಳು ಪೂರೈಸಲ್ಪಡಬೇಕು:

(೧) ಅದೇ ಆಸ್ತಿಯ ಬಗ್ಗೆ ಇಲ್ಲವೆ ಅದರ ಭಾಗದ ಬಗ್ಗೆ ಒಮ್ಮೆ ಕರ ಕೊಟ್ಟು ಐದು ವರುಷಗಳಲ್ಲಿ ಎರಡನೆಯ ಸಲ ವಾರಸಾಕರ ಕೊಡುವ ಪ್ರಸಂಗ ಬಂದಿರಬೇಕು.

(೨) ಮೊದಲನೆಯ ಮರಣದಿಂದ ಯಾರಿಗೆ ಆ ಆಸ್ತಿಯು ಇಳಿದು ಬಂದಿತೋ ಆ ವ್ಯಕ್ತಿಯ ಮರಣವು ಕರಪಾತ್ರ ಮಾಡುವಂತಹ ಎರಡನೆಯ ಮರಣವಾಗಿರಬೇಕು.

ಆಗ ಎರಡನೆಯ ಮರಣದ ಮೂಲಕ ಆ ಆಸ್ತಿಯ ಮೇಲೆ ಕರಹಾಕುವಾಗ ರಿಯಾಯಿತಿ ದೊರೆಯುವುದು. ಐದು ವರುಷದ ಕಾಲಾವಧಿಯಲ್ಲಿ ಆಗುವ ಮರಣದ ಅಂತರದ ಮೇಲೆ ರಿಯಾಯಿತಿಯ ಪ್ರಮಾಣವು ನಿರ್ಧರಿಸಲ್ಪಟ್ಟಿದೆ. ಎರಡು ಮರಣಗಳ ನಡುವಿನ ಅಂತರವು ಒಂದು ವರುಷವಿದ್ದರೆ ೫೦%; ಎರಡು ವರುಷವಿದ್ದರೆ

೪೦ %; ಮೂರು ವರುಷವಿದ್ದರೆ ೩೦ %; ನಾಲ್ಕು ವರುಷವಿದ್ದರೆ ೨೦ %; ಐದು ವರುಷದ್ದರೆ ೧೦ %; ಹೀಗೆ ಅಂತರವು ಹೆಚ್ಚಿದ ಹಾಗೆ ರಿಯಾಯಿತಿ ಕಡಿಮೆಯಾಗುವುದು. ಇದರಿಂದ ವಾರಸದಾರರಿಗೆ ಇದ್ದುದರಲ್ಲಿಯ ಅನುಕೂಲತೆ ದೊರೆವುದು.

**೩೨ ಕೆಲವು ಸಂದರ್ಭಗಳಲ್ಲಿ ಶೇಷಭೋಗಾಧಿಕಾರಿಗಳಿಗೆ ಮರಳುವ ಹಿಂದು ವಿಧವೆಯ ಹಿತಸಂಬಂಧಕ್ಕೆ ಮುಕ್ತತೆ**

ಹಿಂದೂ ಕಾಯಿದೆಯ ಯಾವುದೇ ಪ್ರಣಾಲಿಯಿಂದ ಶಾಸಿತವಾದ ಯಾವುದೇ ವ್ಯಕ್ತಿಯ ಮರಣದ ಮೂಲಕ ಯಾವುದೇ ಆಸ್ತಿಯಲ್ಲಿಯ ಅವನ ಹಿತಸಂಬಂಧವು ಅವನ ವಿಧವೆಗೆ ಇಳಿದು ಬಂದಾಗ ನಂತರ ಆ ವಿಧವೆಯು ತನ್ನ ಗಂಡನ ಮರಣದ ನಂತರ ಏಳು ವರುಷಗಳಲ್ಲಿ ಮರಣ ಹೊಂದಿದರೆ, ಮತ್ತು ಮೇಲೆ ಹೇಳಿದ ಹಿತಸಂಬಂಧವು ಶೇಷಭೋಗಾಧಿಕಾರಿಗಳಿಗೆ ಇಲ್ಲವೆ ಅವರಲ್ಲಿಯ ಯಾವನೊಬ್ಬನಿಗೆ ಇಳಿದು ಬಂದರೆ, ವಿಧವೆಯ ಮರಣದಿಂದ ಇಳಿದು ಬರುವ ಮೇಲ್ಕಾಣಿಸಿದ ಹಿತಸಂಬಂಧದ ವಿಷಯವಾಗಿ, ಅವಳ ಗಂಡನ ಮರಣದಿಂದ ಇಂತಹ ಹಿತಸಂಬಂಧವು ಇಳಿದು ಬರುವುದರ ವಿಷಯವಾಗಿ ವಾರಸಾಕವು ಕೊಡಲ್ಪಟ್ಟಿದ್ದರೆ ಮತ್ತು ಎಷ್ಟರ ಬಗ್ಗೆ ಕೊಡಲಾದೆಯೋ ಅಷ್ಟರ ಮಟ್ಟಿಗೆ, ಯಾವ ವಾರಸಾಕರವು ಹಾಕಲ್ಪಡಲಾಗದು.

**ವಿವೇಚನೆ:**

ಹಿಂದು ವಿಧವೆಗೆ ಇಳಿದು ಬಂದಹಿಂದು ದಾಯಾದರ ಆಸ್ತಿಯ ಬಗ್ಗೆ ಈ ಕಲಮಿನ ಪ್ರಕಾರ ಮುಕ್ತತೆಯು ದೊರವುದು. ಕರಮುಕ್ತತೆ ದೊರೆಯಬೇಕಾದರೆ ಈನಾಲ್ಕು ಸಂಗತಿಗಳು ಘಟಿಸಿರಬೇಕು.

(೧) ಗಂಡನ ಮರಣದಿಂದ ಗಂಡನ ಆಸ್ತಿಯಲ್ಲಿಯ ಹಿತಸಂಬಂಧವು ಅವನ ವಿಧವೆಗೆ ಇಳಿದು ಬಂದಿರಬೇಕು.

(೨) ಹೀಗೆ ಇಳಿದು ಬಂದ ಹಿತಸಂಬಂಧದ ವಿಷಯವಾಗಿ ಗಂಡನ ಮರಣದ ಕಾಲಕ್ಕೆ ವಾರಸಾಕರವು ಕೊಡಲ್ಪಟ್ಟಿರಬೇಕು.

(೩) ಗಂಡನ ಮರಣದ ನಂತರ ಏಳು ವರುಷಗಳಲ್ಲಿ ಅವನ ವಿಧವೆಯು ಮರಣ ಹೊಂದಿರಬೇಕು.

(೪) ವಿಧವೆಯ ಮರಣದ ನಂತರ ಆ ಹಿತಸಂಬಂಧವು ಶೇಷಭೋಗಾಧಿಕಾರಿಗಳಿಗೆ ಇಲ್ಲವೆ ಅವರಲ್ಲಿಯ ಯಾರೊಬ್ಬರಿಗೆ ಇಳಿದು ಬಂದಿರಬೇಕು.

ಅಂದರೆ ಹಾಗೆ ಇಳಿದು ಬಂದ ಆಸ್ತಿಯು ವಾರಸಾಕರ ಮುಕ್ತತೆಯುಳ್ಳದ್ದಾಗುವುದು. ಈ ಮುಕ್ತತೆಯು ಹಿಂದು ಕಾಯಿದೆಯ ಯಾವುದೇ ತತ್ವ ಪ್ರಣಾಲಿಯಿಂದ ಆಸ್ತಿಯ ಒಡೆಯನಾದ ಮೃತ ಗಂಡನು ಶಾಸಿತನಾಗಿದ್ದರೂ ದೊರೆಯುವುದು.

**೩೩ ಮುಕ್ತತೆಗಳು.**

(೧) ಮೃತನ ಒಡೆತನದಲ್ಲಿದ್ದ ಮತ್ತು ಅವನ ಮರಣದ ಮೂಲಕ ಇಳಿದು ಬರುವ ಆಸ್ತಿಯಲ್ಲಿಯ ಈ ಕೆಳಗೆ ಹೇಳಲಾದ ಆಸ್ತಿಯ ವಿಷಯವಾಗಿ ಈ ಉಪಕಲಮಿನ ವಾಕ್ಯಾವಳಿಗಳಲ್ಲಿ ಸ್ಪಷ್ಟಪಡಿಸಲಾದ ಮಟ್ಟಿಗೆ ಯಾವ ವಾರಸಾಕರವನ್ನು ಕೊಡಬೇಕಾಗಿಲ್ಲ:–

(ಅ) ಮೃತನ ಮರಣದ ಪೂರ್ವದಲ್ಲಿ ಆರು ತಿಂಗಳ ಒಳಗೆ ಸಾರ್ವಜನಿಕ ಧಾರ್ಮಿಕ ಉದ್ದೇಶಗಳಿಗಾಗಿ ಮೃತನಿಂದ ಮಾಡಲಾದ ದಾನದನ್ವಯವಾಗಿ ತೆಗೆದುಕೊಳ್ಳಲಾದ ೨೫೦೦/– ರೂಪಾಯಿ ಬೆಲೆಯ ವರೆಗೆ ಆಗುವ ಆಸ್ತಿಯು;

(ಬ) ಮೃತನ ಮರಣದ ಪೂರ್ವದಲ್ಲಿ ಎರಡು ವರುಷಗಳಲ್ಲಿ ಬೇರೆ ಯಾವುದೇ ಉದ್ದೇಶಗಳಿಗಾಗಿ ಮೃತನಿಂದ ಮಾಡಲಾದ ದಾನದನ್ವಯವಾಗಿ ತೆಗೆದುಕೊಳ್ಳಲಾದ ೧೫೦೦/– ರೂಪಾಯಿ ಬೆಲೆಯ ವರೆಗೆ ಆಗುವ ಆಸ್ತಿಯು;

(ಕ) ಗೃಹಕೃತ್ಯದ ವಸ್ತುಗಳು, ಕಾರೇಗಾರರ ಉಪಕರಣಗಳು, ಒಕ್ಕಲುತನದ ಸಲಕರಣೆಗಳು, ಮೃತನಿಗೆ ಜೀವನ ಸಾಧನಕ್ಕಾಗಿ ಆವಶ್ಯಕವಾಗಿದ್ದ ಬೇರೆ ಯಾವುದೇ ಉಪಕರಣಗಳು ಇಲ್ಲವೆ ಸಲಕರಣೆಗಳು ೨೫೦೦/– ರೂಪಾಯಿ ಬೆಲೆಯ ವರೆಗೆ ಒಟ್ಟಿನಲ್ಲಿ ಆಗುವ ಸಾಮಾನುಗಳು;

(ಡ) ಮಾರಾಟ ಮಾಡುವುದಕ್ಕಾಗಿ ಅಲ್ಲದ ಪುಸ್ತಕೆಗಳು;

(ಇ) ಧರಿಸುವ ಅರಿವೆಗಳು; ಆದರೆ ಆ ಅರಿವೆಗಳಲ್ಲಿ ಬೆಲೆ ಬಾಳುವ ಹರಳುಗಳು ಇಲ್ಲವೆ ಆಭರಣಗಳು ಕೂಡಿಸಲ್ಪಟ್ಟಂಥವು ಸಮಾವೇಶವಾಗುವುದಿಲ್ಲ.

(ಫ) ವಾರಸಾಕರ ಇಲ್ಲವೆ ಆ ಉದ್ದೇಶದಿಂದ ಇಲ್ಲವೆ ಆ ಉದ್ದೇಶಕ್ಕಾಗಿ ಸರಕಾರಕ್ಕೆ ಹಕ್ಕು ಬಿಟ್ಟು ಕೊಟ್ಟ ಮೃತನು ಪರಿಣಮಿಸಿದ ಜೀವ ವಿಮೆಯ ಒಂದು ಇಲ್ಲವೆ ಹೆಚ್ಚು ಪಾಲಿಸಿಯನ್ವಯವಾಗಿ, ಬಂದ ಹಣ

ವಾರಸಾ ಕರವನ್ನು ಕೊಡಬೇಕಾದಷ್ಟು ಮಟ್ಟಿಗೆ ಆದರೆ ಒಟ್ಟಿನಲ್ಲಿ ೫೦೦೦೦/– ರೂಪಾಯಿಗಿಂತ ಹೆಚ್ಚಿಗೆ ಆಗದಷ್ಟು;

(ಗ) ವಾರಸಾ ಕರವನ್ನು ಕೊಡುವುದರ ಉದ್ದೇಶಕ್ಕಾಗಿ ಗೊತ್ತು ಮಾಡಬಹುದಾದ ರೀತಿಯಲ್ಲಿ ಸರಕಾರದ ಹತ್ತಿರ ಇಡಲಾಗಿರುವ ಠೇವು ಹಣ, ಆ ಹಣದ ಮೇಲೆ, ಗೊತ್ತುಮಾಡಬಹುದಾದ ಬಡ್ಡಿಯ ದರದಂತೆ ಕೂಡಿಬಿದ್ದ ಬಡ್ಡಿ ಸಹಿತ, ವಾರಸಾಕರ ಕೊಡಬೇಕಾದ ಮೊತ್ತದಷ್ಟು ಆದರೂ ೫೦೦೦೦/– ರೂಪಾಯಿಗಿಂತ ಹೆಚ್ಚಿಗೆ ಆಗದಷ್ಟು;

(ಹ) ಮೃತನಿಂದ ತನ್ನ ಜೀವ ವಿಮೆಗಾಗಿ ಪರಿಣಮಿಸಿದ ಒಂದು ಇಲ್ಲವೆ ಹೆಚ್ಚು ಪಾಲಿಸಿಗಳನ್ವಯವಾಗಿ ಬಂದ ಹಣ ೫೦೦೦/– ರೂಪಾಯಿ ಮಟ್ಟಿಗೆ;

(ಈ) ರಾಷ್ಟ್ರೀಯ, ಶಾಸ್ತ್ರೀಯ ಇಲ್ಲವೆ ಐತಿಹಾಸಿಕ ಮಹತ್ವವುಳ್ಳ ಚಿತ್ರಗಳು, ಬಂಣದ ಚಿತ್ರಗಳ; ಮುದ್ರಣಗಳು, ಹಸ್ತಪ್ರತಿಗಳು, ಕಲಾಕೃತಿ ಗಳು, ಇಲ್ಲವೆ ಪ್ರಾಚ್ಯ ವಸ್ತುಗಳು ಅಲ್ಲವೆ ಶಾಸ್ತ್ರೀಯ ವಸ್ತು ಸಂಗ್ರಹಗಳು ಮತ್ತು ಯಾವನ್ನು ಮೃತನ ಮನೆಯಲ್ಲಿ ಇರಿಸಿ ಬೋರ್ಡು ಗೊತ್ತು ಮಾಡುವ ರೀತಿಯಲ್ಲಿ ವಿನ್ಯಾಸ ಮಾಡಲಾದುವು; ಇಲ್ಲವೆ ಯಾವನ್ನು ಯಾವ ಕರಾರುಗಳಿಲ್ಲದೆ ಸರಕಾರಕ್ಕೆ ಹಸ್ತಾಂತರಿಸಲಾದುವು ಇಲ್ಲವೆ ಯಾವುದೇ ವಿಶ್ವವಿದ್ಯಾಲಯಕ್ಕೆ ಇಲ್ಲವೆ ಬೇರೆ ಸಾರ್ವಜನಿಕ ಸಂಸ್ಥೆಗೆ ಕೊಡಲಾದಂಥವು;

(ಜ) ವಾಕ್ಯಾವಳಿ (ಈ) ದಲ್ಲಿ ಬರಲಾರದಂಥಹ ಮತ್ತು ಮೃತನ ಮನೆಯಲ್ಲಿ ಇರಿಸಲಾದಂತಹ ಮತ್ತು ಬೋರ್ಡು ಗೊತ್ತು ಮಾಡಬಹು ದಾದ ರೀತಿಯಲ್ಲಿ ವಿನ್ಯಾಸ ಮಾಡಲಾದ ಮತ್ತು ಯಾವುದೇ ಮಾರಾಟ ಕ್ಕಾಗಿಯೆಂದು ಇಡದೆ ಇದ್ದಂತಹ ಚಿತ್ರಗಳು, ಬಣ್ಣದ ಚಿತ್ರಗಳು, ಫೋಟೊಗಳು, ಮುದ್ರಣಗಳು, ಹಸ್ತಪ್ರತಿಗಳು ಮತ್ತು ಬೇರೆ ಯಾವುದೇ ಪಾರಂಪರಿಕವಾಗಿ ಬಂದ ಬಹು ಮೂಲ್ಯ ವಸ್ತುಗಳು,

(ಖ) ಜೀವನಾವಶ್ಯಕತೆಗಳಿಗೆ ಅವನನ್ನು ಅವಲಂಬಿಸಿದ ಸಂಬಂಧಿ ಕರಾದ ಯಾವುದೇ ಹೆಣ್ಣುಮಗಳ ಮದುವೆಗಾಗಿ ಮೃತ ತಂದೆಯಿಂದ ಇಲ್ಲವೆ ನೈಸರ್ಗಿಕ ಪಾಲಕನಿಂದ ಮಾಡಲ್ಪಟ್ಟ ಇಲ್ಲವೆ ಪರಿಣಮಿಸಿದ ವಿಮಾ ಪಾಲಿಸಿಗಳ ಇಲ್ಲವೆ ವಿಶ್ವಸ್ತನಿಧಿಗಳ ಇಲ್ಲವೆ ನಿವೇಶನಗಳ ಅನ್ವಯವಾಗಿ

ಗುರುತು ಮಾಡಲಾದ ಹಣ ಇಂತಹ ಒಬ್ಬೊಬ್ಬ ಸಂಬಂಧಿಕರಿಗೆ ಮದುವೆಯ ಸಲುವಾಗಿ ೫೦೦೦/– ರೂಪಾಯಿಗಳ ವರೆಗೆ.

(೨) ಯಾವುದೇ ವರ್ಗದ ಆಸ್ತಿಯ ವಿಷಯವಾಗಿ ಇಲ್ಲವೆ ಯಾವುದೇ ವರ್ಗದ ವ್ಯಕ್ತಿಗಳ ವಿಷಯವಾಗಿ, ಉಪಕಲಮು (೧) ರಲ್ಲಿ ಹೇಳಿದ ಪರಿಹಾರ ವಲ್ಲದೆ ಹೆಚ್ಚಿಗೆ ರಿಯಾಯಿತಿ ತೋರಿಸಲು ಪರಿಸ್ಥಿತಿಯು ಇರುವುದೆಂದು ಕೇಂದ್ರಸರಕಾರದ ಅಭಿಪ್ರಾಯವಾದರೆ ಇಂತಹ ವರ್ಗದ ಆಸ್ತಿಯ ಸಲುವಾಗಿ ಇಲ್ಲವೆ ವರ್ಗದ ವ್ಯಕ್ತಿಗಳ ಇಡಿಯಾದ ಇಲ್ಲವೆ ಯಾವುದೇ ಭಾಗದ ಆಸ್ತಿಯ ಸಲುವಾಗಿ ವಾರಸಾಕರದ ವಿಷಯದಲ್ಲಿ ಸರಕಾರೀ ಗ್ಯಾಜೆಟದಲ್ಲಿಯ ಪ್ರಕಟನೆಯಿಂದ ಸರಕಾರವು ಯಾವುದೇ ಮುಕ್ತತೆ, ದರದಲ್ಲಿ ಕಡಿತ, ಇಲ್ಲವೆ ಇತರ ತಿದ್ದುಪಡಿ ಮಾಡಬಹುದು ಮತ್ತು ಹೀಗೆ ಹೊರಡಿಸಲಾದ ಪ್ರಕಟನೆಯು ಹೊರಡಡಿಸಿದ ನಂತರ ಆದಷ್ಟು ಬೇಗನೇ ಪಾರ್ಲಿಮೆಂಟಿನೆದುರು ಮಂಡಿಸಲ್ಪಡಬೇಕು.

**ವಿವೇಚನೆ :**

ಈ ಕಲಮಿನಲ್ಲಿ ಸಾಮಾನ್ಯ ಮುಕ್ತತೆಯ ಬಗ್ಗೆ ಹೇಳಲಾಗಿದೆ. (ಅ) ಮತ್ತು (ಬ) ವಾಕ್ಯಾವಳಿಗಳಲ್ಲಿ ಮೃತನಿಂದ ದಾನವಾಗಿ ಪಡೆದ ಆಸ್ತಿಯ ಬಗ್ಗೆ ಹೇಳಿದೆ. ಸಾರ್ವಜನಿಕ ಧರ್ಮಾರ್ಥ ಉದ್ದೇಶಗಳಿಗಾಗಿ ದಾನ ಮಾಡಿದ್ದರೆ, ಮರಣದಕಿಂತ ಮೊದಲು ೬ ತಿಂಗಳಲ್ಲಿಯ ದಾನಗಳು ೨೫೦೦/– ರೂಪಾಯಿಯ ಬೆಲೆಯುಷ್ಟಾಗುವಂತಹವು ಕರಮುಕ್ತವಾಗುವುವು. ಬೇರೆ ಯಾವುದೇ ಉದ್ದೇಶಗಳಿಗಾಗಿ ಮಾಡಿದ್ದರೆ ಮರಣದಕಿಂತ ಮೊದಲು ೨ ವರುಷಗಳಲ್ಲಿಯ ದಾನಗಳು ೧೫೦೦/– ರೂಪಾಯಿ ಬೆಲೆಯುಷ್ಟಾಗುವಂತಹವು ಕರಮುಕ್ತವಾಗುವುವು. (ಕ) ದಲ್ಲಿ ಜೀವನಸಾಧನೆಗಾಗಿ ಆವಶ್ಯಕವಾದ ಉಪಕರಣಗಳು ಸಲಕರಣೆಗಳು ಇವು ೨೫೦೦– ರೂಪಾಯಿಗಳ ಬೆಲೆಯು ಆಗುವಷ್ಟು ಕರಮುಕ್ತವಾಗಿರುವುವು. ಕರಮುಕ್ತತೆಗೆ ಮುಖ್ಯವಾಗಿ ಆ ಉಪಕರಣಗಳು ಜೀವನ ಸಾಧನೆಗಾಗಿ ಆವಶ್ಯಕವಾಗಿರಬೇಕು. (ಡ) ದಲ್ಲಿ ವೈಯಕ್ತಿಕವಾಗಿ ಬೆಳಿಸಿಕೊಂಡ ಮನೆಯ ಲಾಯಬ್ರರಿ ಪುಸ್ತಕಗಳು ಕರಮುಕ್ತವಾಗುವುವು. ಪುಸ್ತಕಗಳು ಮಾರಾಟಕ್ಕೆಂದು ಇರಬಾರದು. (ಇ) ಹಾಕಿಕೊಳ್ಳುವ ಅರಿವೆಗಳು. ಆದರೆ ಆ ಅರಿವೆಗಳಲ್ಲಿ ಬೆಲೆಯುಳ್ಳ ಹರಳು– ಆಭರಣ ಕೂಡಿಸಿರಬಾರದು. ಈ ಮಾತು ಲಕ್ಷಿಸಬೇಕು. (ಫ) ಮತ್ತು (ಗ) ಎರಡೂ ಪ್ರತ್ಯೇಕವಾಗಿವೆ. ಒಂದು ಜೀವವಿಮಾ ಪಾಲಿಸಿಯಿಂದ ವಾರಸಾಕರ ಕೊಡಬೇಕೆಂದು ಮಾಡಲಾಗಿರುವುದು; ಇನ್ನೊಂದು ಸರಕಾರದಲ್ಲಿ ವಾರಸಾಕರ ಕೊಡುವ ಉದ್ದೇಶದಿಂದ ಠೇವು ಇಡಲ್ಪಟ್ಟಿರುವುದು. ಒಂದೊಂದಕ್ಕೂ ೫೦೦೦೦/–ರೂಪಾಯಿಗಳ ಮಿತಿಯಿದೆ. (ಹ) ತನ್ನ ಜೀವವಿಮೆಯ

ಹಣವು ೫೦೦೦/–ದ ವರೆಗೆ ಇದ್ದರೆ ಅದೂ ಕರಮುಕ್ತವಾಗುವುದು. (ಈ) ಮತ್ತು (ಜ) ದಲ್ಲಿ ಚಿತ್ರ ಮುಂತಾದ ಕಲಾಕೃತಿಗಳು, ಪ್ರಾಚ್ಯ ವಸ್ತುಗಳು, ಶಾಸ್ತ್ರೀಯ ವಸ್ತುಗಳು, ಇವು ವೈಯಕ್ತಿಕ ಒಡೆತನದಲ್ಲಿದ್ದರೂ ರಾಷ್ಟ್ರೀಯ ಸೊತ್ತುಗಳು. ಅವು ಕರಮುಕ್ತವು. (ಖ) ದಲ್ಲಿ ಸಂಬಂಧಿಕ ಹೆಣ್ಣು ಮಗಳ ಮದುವೆಯ ಸಲುವಾಗಿ ಮೃತನು ಮಾಡಿಟ್ಟ ವ್ಯವಸ್ಥೆಯ ಬಗ್ಗೆ ಹೇಳಿದೆ. ಒಬ್ಬೊಬ್ಬರ ಮದುವೆಯ ಸಲುವಾಗಿ, ಅವರು ಮೃತನ ಮೇಲೆ ಜೀವನಾವಶ್ಯಕತೆಗಳಿಗಾಗಿ ಅವಲಂಬಿಸಿದ್ದರೆ, ೫೦೦೦/– ರೂಪಾಯಿಗಳ ವರೆಗೆ ಕರಮುಕ್ತತೆ ದೊರೆವುದು.

ಸಾಮಾನ್ಯ ತತ್ವಗಳನ್ನು ಉಪಕಲಮು (೧)ರಲ್ಲಿ ಹೇಳಿದ ನಂತರ ಉಪಕಲಮು (೨) ರಲ್ಲಿ ಸರಕಾರಕ್ಕೆ ಈ ತತ್ವಗಳನ್ನು ಕಾರ್ಯಕಾರಿ ಮಾಡುವಾಗ ಕೆಲ ವರ್ಗದ ವ್ಯಕ್ತಿಗಳಿಗೆ ಇಲ್ಲವೆ ಕೆಲ ವರ್ಗದ ಆಸ್ತಿಗೆ ಇನ್ನೂ ಹೆಚ್ಚಿನ ರಿಯಾಯಿತಿ ತೋರಿಸಬೇಕೆನ್ನುವ ಹಾಗೆ ಪರಿಸ್ಥಿತಿ ಇದ್ದರೆ, ಹಾಗೆ ಇದೆಯೆಂದು ಕೇಂದ್ರ ಸರಕಾರಕ್ಕೆ ಮನವರಿಕೆಯಾದರೆ ಕೇಂದ್ರ ಸರಕಾರವು ರಿಯಾಯಿತಿ ತೋರಿಸಬಹುದು. ಇದು ಖಾಸಗೀ ರೀತಿಯಿಂದ ತೋರಿಸುವ ರಿಯಾಯಿತಿ ಅಲ್ಲ. ಸರಕಾರವು ಗ್ಯಾಜೆಟದಲ್ಲಿ ಮೊದಲು ರಿಯಾಯಿತಿಯ ವಿಷಯವನ್ನು ಪ್ರಕಟಿಸಬೇಕು ಮತ್ತು ನಂತರ ಆದಷ್ಟು ಬೇಗ ಅದನ್ನು ಪಾರ್ಲಿಮೆಂಟಿನ ಎದರು ಮಂಡಿಸಿ ಒಪ್ಪಿಗೆ ಪಡೆಯಬೇಕು.

ಈ ಕಲಮಿನಲ್ಲಿ ಬಂದ ಚಿತ್ರ ಮುಂತಾದ ಕಲಾಕೃತಿಗಳ ಬಗ್ಗೆ ಕೆಲ ನಿಯಮಗಳನ್ನು ಮಾಡಿದೆ. **ನಿಯಮ ೧೩, ೧೪, ೧೫.** ಇವುಗಳನ್ನು ಲಕ್ಷಿಸಬೇಕು. ಅವುಗಳ ಸಾರಾಂಶವನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.



# ಭಾಗ ನಾಲ್ಕು

## ಆಸ್ತಿಯನ್ನು ಒಟ್ಟುಗೂಡಿಸುವಿಕೆ ಮತ್ತು ವಾರಸಾಕರದ ದರಗಳು

೩೪ ಒಟ್ಟುಗೂಡಿಸುವಿಕೆ.

(೧) ಮೃತನ ಮರಣದ ಮೂಲಕ ಇಳಿದು ಬರುವ ಯಾವುದೇ ಆಸ್ತಿಯ ಮೇಲೆ ಕೊಡಬೇಕಾದ ವಾರಸಾಕರದ ದರವನ್ನು ನಿರ್ಣಯಿಸುವುದಕ್ಕಾಗಿ, ಈ ಕೆಳಗಿನವುಗಳನ್ನು

೩೩ ನೆಯ ಕಲಮಿನ ಉಪಕಲಮು (೧) ರ ವಾಕ್ಯಾವಳಿ (ಕ), (ಡ), (ಇ), (ಈ) ಮತ್ತು (ಜ) ಇವುಗಳನ್ವಯವಾಗಿ ಕರಮುಕ್ತವಾಗುವ ಆಸ್ತಿಯನ್ನು ಹೊರತುಪಡಿಸಿ, ಆದರೆ

(i) ೩೫ ನೆಯ ಕಲಮಿನನ್ವಯವಾಗಿ ಯಾವುದೇ ವಾರಸಾಕರ ಹಾಕಲಾಗದೇ ಇದ್ದ ಆಸ್ತಿಯನ್ನು,

(ii) ೩೩ನೆಯ ಕಲಮಿನ ಉಪಕಲಮು (೧) ರ ವಾಕ್ಯಾವಳಿ (ಅ), (ಬ), (ಫ), (ಗ), (ಹ), ಮತ್ತು (ಖ) ಇವುಗಳನ್ವಯವಾಗಿ ಕರಮುಕ್ತವಾಗಿರುವ ಆಸ್ತಿಯನ್ನು ಮತ್ತು

(iii) ಮೊದಲನೆಯ ಕೋಷ್ಟಕದಲ್ಲಿ ನಿರ್ದಿಷ್ಟಪಡಿಸಲಾಗದೆ ಇದ್ದ ಯಾವುದೇ ರಾಜ್ಯದಲ್ಲಿರುವ ಕೃಷಿಭೂಮಿ,

ಇವುಗಳನ್ನು ಒಳಗೊಂಡು ಎಲ್ಲ ಆಸ್ತಿಯನ್ನು ಒಂದು ಆಸ್ತಿಯನ್ನಾಗಿ ಮಾಡಲು ಒಟ್ಟುಗೂಡಿಸಲ್ಪಡಲಾಗುವುದು. ಮತ್ತು ಅದರ ಬಗ್ಗೆ ಅಗುವ ಮುಖ್ಯ ಬೆಲೆಯ ವಿಷಯವಾಗಿ ಅನ್ವಯಿಸುವ ದರ ಇಲ್ಲವೆ ದರಗಳಂತೆ ವಾರಸಾಕರ ಹಾಕಲಾಗುವುದು.

ಆದರೆ, ಹೀಗೆ ಇಳಿದು ಬರುವ ಯಾವುದೇ ಆಸ್ತಿಯು, ಯಾವುದರಲ್ಲಿ ಮೃತನಿಗೆ ಯಾವ ಹಿತಸಂಬಂಧವು ಎಂದೂ ಇದ್ದಿದ್ದಿಲ್ಲವೋ, ಕಲಮು ೨ ರ ಉಪಕಲಮು (೧೫) ಕ್ಕೆ ಇರುವ ವಿವರಣೆಗಳ ಸತ್ವದ ಪ್ರಕಾರ ಆಸ್ತಿಯೆಂದು

ತಿಳಿಯಲ್ಪಡುವ ಸಾಲ ಇಲ್ಲವೆ ಹಕ್ಕು ಇಲ್ಲವೆ ಲಾಭ ಆಗಿರದ ಆಸ್ತಿಯು ಬೇರೆ ಯಾವುದೇ ಆಸ್ತಿಯೊಡನೆ ಒಟ್ಟುಗೂಡಿಸಲ್ಪಡಲಾಗದು; ಆದರೆ ಅದು ತನ್ನಷ್ಟಕ್ಕೆ ತಾನೇ ಆಸ್ತಿಯಾಗಿದ್ದು ಅದರ ಮುಖ್ಯ ಬೆಲೆಯ ವಿಷಯವಾಗಿ ಅನ್ವಯಿಸುವ ದರ ಇಲ್ಲವೆ ದರಗಳಂತೆ ವಾರಸಾಕರ ಹಾಕಲ್ಪಡಲಾಗುವುದು.

(೨) ಮೃತನ ಮರಣದ ತಾರೀಖಿಗೆ ಒದಗಿ ಬಂದ ಇಲ್ಲವೆ ಬಾಕಿ ಉಳಿದಿರುವ ಆ ಆಸ್ತಿಯ ಎಲ್ಲ ಉತ್ಪನ್ನವು ಪ್ರತಿಯೊಂದು ಆಸ್ತಿಯಲ್ಲಿ ಸಮಾವೇಶವಾಗುವುದು.

(೩) ಯಾವುದೊಂದು ಮರಣದ ಮೂಲಕ ಇಳಿದು ಬರುವ ಆಸ್ತಿಯನ್ನು ಒಂದಕ್ಕಿಂತ ಹೆಚ್ಚು ಸಲ ಒಟ್ಟುಗೂಡಿಸಲಾಗದು. ಅಲ್ಲದೆ ಅದೇ ಮರಣದ ಮೂಲಕ ಆ ಆಸ್ತಿಯ ಮೇಲೆ ಒಂದು ಸಲಕ್ಕಿಂತ ಹೆಚ್ಚು ಸಲ ವಾರಸಾಕರ ಹಾಕಲಾಗದು.

(೪) ವಾರಸಾಕರ ಮುಕ್ತವಾದ ಯಾವುದೇ ಆಸ್ತಿಯು ಕರ ಯೋಗ್ಯವಾದ ಆಸ್ತಿಯಲ್ಲಿ ಸಮಾವೇಶವಾಗಿದ್ದರೆ, ಇಡಿ ಆಸ್ತಿಯು ಒಂದು ವೇಳೆ ಕರ ಪಾತ್ರವಾಗುತ್ತಿದ್ದರೆ ಅದರಲ್ಲಿ ಯಾವುದಕ್ಕೂ ಕರಮುಕ್ತತೆ ದೊರೆಯದೆ ಇದ್ದರೆ, ಇಡಿ ಆಸ್ತಿಯ ಮುಖ್ಯ ಬೆಲೆಯು ಕರ ಯೋಗ್ಯವಾಗಿರುವ ಭಾಗದ ಆಸ್ತಿ ಮುಖ್ಯ ಬೆಲೆಗೆ ಆಗುವ ಪ್ರಮಾಣದಲ್ಲಿಯೇ ಆ ಕರ ಮುಕ್ತವಾಗಿರದೆ ಇರುವ ಆಸ್ತಿಯ ಮೇಲೆ ವಾರಸಾಕರ ಹಾಕಲ್ಪಡಲಾಗುವದು.

**ವಿವರಣೆ:** ಈ ಉಪಕಲಮಿನ ಉದ್ದೇಶಗಳಿಗಾಗಿ ಕರ ಮುಕ್ತವಾಗಿರುವ ಆಸ್ತಿಯೆಂದರೆ ೩೩ ನೆಯ ಕಲಮಿನ ಪ್ರಕಾರ ಕರ ಮುಕ್ತವಾಗಿರುವ ಯಾವುದೇ ಆಸ್ತಿ ಎಂದೂ ಮತ್ತು ಮೊದಲನೆಯ ಕೋಷ್ಟಕದಲ್ಲಿ ನಿರ್ದಿಷ್ಟಪಡಿಸಲಾಗದೆ ಇದ್ದ ಯಾವುದೇ ರಾಜ್ಯದಲ್ಲಿ ಇರುವ ಕೃಷಿ ಭೂಮಿಯು ಎಂದೂ ಆಗುವುದು.

**ವಿವೇಚನೆ:**

ವಾರಸಾಕರದ ದರವು ವಾರಸಾಕರ ಯೋಗ್ಯವಾದ ಆಸ್ತಿಯ ಗಾತ್ರದ ಮುಖ್ಯ ಬೆಲೆಯ ಮೇಲೆ ಅವಲಂಬಿಸಿರುವುದರಿಂದ ವಾರಸಾಕರ ಆಕರಣೆ ಮಾಡುವಾಗ ಮೊದಲು ಆಸ್ತಿಯಲ್ಲಿ ಕರಪಾತ್ರವಾದುದು ಯಾವುದು; ಕರ ಮುಕ್ತವಾದುಧು ಯಾವುದು; ಎಂಬುದನ್ನು ನಿರ್ಣಯಿಸಬೇಕು. ನಂತರ ಆಸ್ತಿಯ ಗಾತ್ರವು ಕರಪಾತ್ರತೆಯ ದೃಷ್ಟಿಯಿಂದ ಎಷ್ಟಾಗುವುದು ನೋಡಲು ಎಲ್ಲ ಬಗೆಯ ಕರಯೋಗ್ಯ ಆಸ್ತಿಯನ್ನು ಒಟ್ಟುಗೂಡಿಸಬೇಕಾಗುವುದು. ಅದಕ್ಕಾಗಿ ನಿರ್ದೇಶನ ಮಾಡಲು ಈ ಕಲಮು ರೂಪಿಸಲ್ಪಟ್ಟಿದೆ.

ಮೃತನಿಗೆ ಯಾವ ಆಸ್ತಿಯಲ್ಲಿ ಎಂದೂ ಯಾವ ಹಿತಸಂಬಂಧವಿದ್ದಿಲ್ಲವೊ ಆ ಆಸ್ತಿಯನ್ನು ಒಟ್ಟುಗೂಡಿಸಬಾರದು. ಮೊದಲನೆಯ ಕೋಷ್ಟಕವಲ್ಲ ಹೇಳದ ಇದ್ದ ರಾಜ್ಯಗಳಲ್ಲಿ ಇರುವ ಕೃಷಿಭೂಮಿಯನ್ನು ಒಟ್ಟಿನಲ್ಲಿ ಸೇರಿಸಬೇಕು. ೩೩ ನೆಯ ಕಲ ಮಿನಲ್ಲಿ ಎರಡು ಭಾಗ; ಆಸ್ತಿಯ ಗಾತ್ರದಲ್ಲಿ ಸೇರಿಸಲೂ ಮತ್ತು ಕರಮುಕ್ತತೆಗೆಯೋಗ್ಯ ವಾದುವೂ ಒಂದು ಭಾಗ; ಇನ್ನೊಂದರಲ್ಲಿ ಕರಮುಕ್ತತೆಗೆಯೋಗ್ಯವಾಗಿದ್ದರೂ ಮೊತ್ತ ದಲ್ಲಿ ಸೇರಿಸಲು ಯೋಗ್ಯವಾಗಿರುವ ಆಸ್ತಿ ಇರುವುದು. ಈ ಎರಡನೆಯ ರೀತಿಯ ಆಸ್ತಿಯ ವಿವರವನ್ನು ೩೪ ನೆಯ ಕಲಮಿನ ಉಪಕಲಮು (೧) ರ (iii) ದಲ್ಲಿ ಹೇಳ ಲಾಗಿದೆ. ಇವುಗಳನ್ನು ಕರ ಯೋಗ್ಯ ಆಸ್ತಿಯ ಗಾತ್ರನಿರ್ಣಯಿಸಲು ಸೇರಿಸಬೇಕು. ಉಳಿ ದವುಗಳನ್ನು ಸೇರಿಸಲಾಗದು.

ಮೃತನ ಮರಣದ ಮೂಲಕ ಇಳಿದು ಬರುವ ಆಸ್ತಿಯಿಂದ ಬರುವ ಮೃತನ ಮರಣದ ತಾರೀಖಿನ ವರೆಗೆ ಒದಗಿ ಬಂದ ಉತ್ಪನ್ನ ಮತ್ತು ಉಳಿದ ಬಾಕಿ ಹಣವನ್ನು ಸೇರಿಸಬೇಕು. ಮರಣದ ಮೂಲಕ ಇಳಿದು ಬರುವ ಆಸ್ತಿಯನ್ನು ಒಂದು ಸಲಕ್ಕಿಂತ ಹೆಚ್ಚು ಸಲ ಒಟ್ಟುಗೂಡಿಸಲಾಗದು. ಒಟ್ಟುಗೂಡಿಸಲಾದ ಆಸ್ತಿಯಲ್ಲಿ ಕರಮುಕ್ತವಾದ ಆಸ್ತಿಯೂ ಸಮಾವೇಶವಾಗಿದ್ದರೆ ಒಟ್ಟು ಆಸ್ತಿಗೆ ಕರಯೋಗ್ಯ ಆಸ್ತಿಯು ಯಾವ ಪ್ರಮಾಣದಲ್ಲಿ ಇರುವುದೋ ಆ ಒಟ್ಟು ಆಸ್ತಿಯ ಮೇಲೆ ಒಂದು ವೇಳೆ ಕರ ಹಾಕಲಾ ದರೆ ಆ ಕರದ ಮೊತ್ತಕ್ಕೆ ಕರಯೋಗ್ಯವಾದ ಆಸ್ತಿಯ ಮೊತ್ತವು ಇರಬೇಕೆಂದು ೩೪ ನೆಯ ಕಲಮಿನ (೪) ನೇ ಉಪಕಲಮು ರೀತಿಯನ್ನು ಸೂಚಿಸುವುದು.

**೩೫ ಕೃಷಿಭೂಮಿಯನ್ನು ಒಳಗೊಂಡ ಆಸ್ತಿಯ ಮೇಲೆ ವಾರಸಾಕರದ ದರಗಳು**

(೧) ವಾರಸಾಕರದ ದರಗಳು ಎರಡನೆಯ ಕೋಷ್ಟಕದಲ್ಲಿ ಹೇಳಲಾ ದಂತೆ ಇರಲಾಗುವುದು.

ಆದರೆ,

(ಅ) ಮಿತಾಕ್ಷರ, ಮರುಮುಕ್ಕತ್ತಾಯಂ ಇಲ್ಲವೆ ಅಳಿಯ ಸಂತಾನ ಕಾಯಿದೆಯಿಂದ ಶಾಸಿತವಾದ ಹಿಂದು ಕುಟುಂಬದ ಒಟ್ಟು ಕುಟುಂಬದ ಆಸ್ತಿಯಲ್ಲಿ ಹಿತಸಂಬಂಧವಿದ್ದ ಆಸ್ತಿಯು ಆ ಆಸ್ತಿಯ ಮುಖ್ಯ ಬೆಲೆಯು ೫೦ ಸಾವಿರ ರೂಪಾಯಿಗಳಿಗೆ ಮಿಕ್ಕದಿದ್ದಷ್ಟರ ಮಟ್ಟಿಗೆ,

(ಬ) ಬೇರೆ ಯಾವುದೇ ಮಾದರಿಯ ಆಸ್ತಿಯಿದ್ದರೆ ಆ ಆಸ್ತಿಯ ಮುಖ್ಯ ಬೆಲೆಯು ಒಂದು ಲಕ್ಷ ರೂಪಾಯಿಗೆ ಮಿಕ್ಕದಿದ್ದಷ್ಟು ಮಟ್ಟಿಗೆ ಅಂತಹ ಯಾವ ಕರವೂ ಹಾಕಲ್ಪಡಲಾಗದು.

(೨) ಒಬ್ಬ ವ್ಯಕ್ತಿಯ ಮರಣದ ಮೂಲಕ ಇಳಿದು ಬರುವ ಆಸ್ತಿಯಲ್ಲಿ ಉಪಕಲಮು (೧) ರಲ್ಲಿಯ ವಾಕ್ಯಾವಳಿ (ಅ) ದಲ್ಲಿ ವರ್ಣಿಸಲಾದ ಸ್ವಭಾವದ ಆಸ್ತಿಯು ಕೆಲಭಾಗ ಮತ್ತು ಅದೇ ಉಪಕಲಮಿನ (ಬ) ದಲ್ಲಿ ವರ್ಣಿಸಲಾದ ಸ್ವಭಾವದ ಆಸ್ತಿಯು ಕೆಲ ಭಾಗವಾಗಿದ್ದರೆ, ಆ ಆಸ್ತಿಯ ಮೇಲೆ

(i) ಆ ಆಸ್ತಿಯು ವಾಕ್ಯಾವಳಿ (ಅ) ದಲ್ಲಿ ವರ್ಣಿಸಲಾದ ಸ್ವಭಾವದ ಆಸ್ತಿಯೆ ಇಡಿಯಾಗಿ ಆಗಿದ್ದರೆ, ಇಂತಹ ಇಡಿಯಾದ ಆಸ್ತಿಯ ಬೆಲೆಗೆ ಭಾಗ ವಾಗಿರುವ ಆಸ್ತಿಯ ಬೆಲೆಯು ಯಾವ ಪ್ರಮಾಣ ತೋರುವುದೋ ಅದೇ ಪ್ರಮಾಣದಲ್ಲಿ ಇಡಿಯಾದ ಆಸ್ತಿಯ ಮೇಲಿನ ಕರಕ್ಕೆ ಆಗುವ ಪ್ರಮಾಣದಲ್ಲಿ ಭಾಗವಾಗಿರುವ ಆಸ್ತಿಯ ಮೇಲೆ ಕರವನ್ನು ಕೊಡಬೇಕಾಗುವುದು. ಇದಕ್ಕೆ ಕೂಡಿಸಿ

(ii) ಆ ಆಸ್ತಿಯ ವಾಕ್ಯಾವಳಿ (ಬ) ದಲ್ಲಿ ವರ್ಣಿಸಲಾದ ಸ್ವಭಾವದ ಆಸ್ತಿಯೆ ಇಡಿಯಾಗಿ ಆಗಿದ್ದರೆ, ಅಂತಹ ಇಡಿಯಾದ ಆಸ್ತಿಯ ಬೆಲೆಗೆ ಭಾಗ ವಾಗಿರುವ ಆಸ್ತಿಯ ಬೆಲೆಯು ಯಾವ ಪ್ರಮಾಣ ತೋರುವುದೋ ಅದೇ ಪ್ರಮಾಣದಲ್ಲಿ ಇಡಿಯಾದ ಆಸ್ತಿಯ ಮೇಲಿನ ಕರಕ್ಕೆ ಆಗುವ ಪ್ರಮಾಣದಲ್ಲಿ ಭಾಗವಾಗಿರುವ ಆಸ್ತಿಯ ಮೇಲೆ ಕರವನ್ನು ಕೊಡಬೇಕಾಗುವುದು.

(೩) ಉಪಕಲಮು (೧) ರಲ್ಲಿ ಮತ್ತು ಎರಡನೆಯ ಕೋಷ್ಟಕದಲ್ಲಿ ಏನೇ ಹೇಳಲಾಗಿದ್ದರೂ ಯಾವುದೇ ವ್ಯಕ್ತಿಯ ಮರಣದ ಮೂಲಕ ಇಳಿದು ಬರುವ ಆಸ್ತಿಯು ಇಡಿಯಾಗಿ ಇಲ್ಲವೆ ಭಾಗವಾಗಿ ಕೃಷಿಭೂಮಿಯನ್ನು ಒಳ ಗೊಂಡಿದ್ದರೆ. ಮತ್ತು ಆಸ್ತಿಯ ಮುಖ್ಯ ಬೆಲೆಯು ಎರಡು ಲಕ್ಷ ರೂಪಾಯಿಗಳಿ ಗಿಂತ ಹೆಚ್ಚು ಆಗದಿದ್ದರೆ, ರಿಯಾಯಿತಿಯ ರೂಪದಲ್ಲಿ,

(ಅ) ಆ ಆಸ್ತಿಯಲ್ಲಿ ಇಡಿಯಾಗಿ ಕೃಷಿಭೂಮಿಯ ಇರುವ ಸಂದರ್ಭದಲ್ಲಿ ಕೊಡಬೇಕಾಗಿದ್ದ ವಾರಸಾಕರದ ಮೊತ್ತದಲ್ಲಿಯ ಒಂದು ನಾಲ್ಕಾಂಶದಷ್ಟು ರಿಯಾಯಿತಿ ಕೊಡಲಾಗುವುದು; ಮತ್ತು

(ಬ) ಆ ಆಸ್ತಿಯಲ್ಲಿ ಭಾಗವಾಗಿ ಕೃಷಿಭೂಮಿಯು ಇರುವ ಸಂದರ್ಭದಲ್ಲಿ ಕೃಷಿಭೂಮಿಯುಲ್ಲಿರುವ ಆ ಭಾಗಕ್ಕಾಗಿ ಕೊಡಬೇಕಾಗಿದ್ದ ವಾರಸಾಕರದ ಮೊತ್ತದಲ್ಲಿಯ ಒಂದು ನಾಲ್ಕಾಂಶ ಆಗುವಷ್ಟುರಿಯಾಯಿತಿ ಕೊಡಲಾಗುವುದು. ಈ ಭಾಗದ ಮೇಲಿನ ವಾರಸಾಕರವು ಇಡಿ ಆಸ್ತಿಯ ಬೆಲೆಗೆ ಕೃಷಿಭೂಮಿ ಇರುವ ಭಾಗದ ಬೆಲೆಯು ಆಗುವ ಪ್ರಮಾಣದಲ್ಲಿ ಒಟ್ಟು ಆಸ್ತಿಯ ಮೇಲಿನ ವಾರಸಾಕರವು ಆ ಭಾಗದ ಮೇಲಿನ ಕರಕ್ಕೆ ಆಗುವ ಪ್ರಮಾಣದಲ್ಲಿ ಆಕರಿಸಲ್ಪಡುವವುದು.

**ವಿವೇಚನೆ:**

ಬೇರೆ ಬೇರೆ ಸ್ವಭಾವದ ಆಸ್ತಿಗೆ ಬೇರೆ ಬೇರೆ ವಾರಸಾ ಕರದ ದರಗಳು ಇವೆ. ಅವಾದರೂ ಆಸ್ತಿಯ ಬೆಲೆ ಹೆಚ್ಚಾದ ಹಾಗೆ ಏರುತ್ತ ಹೋಗುವುವು. ಮಿತಾಕ್ಷರ ಮರುಮಕ್ಕತ್ತಾಯಂ ಇಲ್ಲವೆ ಅಳಿಯ ಸಂತಾನ ಕಾಯಿದೆಯಿಂದ ಶಾಸಿತವಾದ ಹಿಂದು ಕುಟುಂಬದಲ್ಲಿ ಒಟ್ಟು ಕುಟುಂಬದ ಆಸ್ತಿಯಲ್ಲಿಯ ಹಿತಸಂಬಂಧದ ಬೆಲೆಯ ಮೊದಲಿನ ೫೦೦೦೦/- ರೂಪಾಯಿಯ ಆಸ್ತಿಯ ಮೇಲೆ ಯಾವ ಕರವನ್ನು ಕೊಡಬೇಕಾಗಿಲ್ಲ. ಬೇರೆ ಮಾದರಿಯ ಆಸ್ತಿಯ ಬೆಲೆಯ ಮೊದಲಿನ ೧೦೦೦೦೦/- ರೂಪಾಯಿಗಳ ಬೆಲೆಯ ಆಸ್ತಿಯ ಮೇಲೆಯೂ ಯಾವ ಕರವನ್ನು ಕೊಡಬೇಕಾಗಿಲ್ಲ. ಇವು ಕರ ಮುಕ್ತತೆಯ ಮಿತಿಗಳು.

ಇನ್ನು ಆಸ್ತಿಯಲ್ಲಿ ಕೆಲಭಾಗ ಇಲ್ಲವೆ ಇಡಿ ಆಸ್ತಿಯು ಕೃಷಿಭೂಮಿಯಾಗಿದ್ದರೆ, ಮತ್ತು ಆ ಆಸ್ತಿಯ ಮುಖ್ಯ ಬೆಲೆಯು ಎರಡು ಲಕ್ಷ ರೂಪಾಯಿಗೆ ಮಿಕ್ಕದಿದ್ದರೆ, ಕೃಷಿ ಭೂಮಿ ಇರುವ ಭಾಗದ ಆಸ್ತಿಯ ಮೇಲೆ ಕೊಡಬೇಕಾಗಿರುವ ವಾರಸಾಕರದ ಮೊತ್ತದಲ್ಲಿ ಒಂದು ನಾಲ್ಕಾಂಶದಷ್ಟು ರಿಯಾಯಿತಿ ದೊರೆವುದು.



# ಭಾಗ ಐದು

## ಕರದ ಆಕರಣೆಗಾಗಿ ಬೆಲೆ

**೩೬ ಮುಖ್ಯ ಬೆಲೆಯನ್ನು ಹೇಗೆ ನಿರ್ಧರಿಸಬೇಕು**

(೧) ಮೃತನ ಮರಣದ ಸಮಯಕ್ಕೆ ಬಹಿರಂಗ ಪೇಟೆಯಲ್ಲಿ ಮಾರಾಟ ಮಾಡಿದರೆ ಆ ಆಸ್ತಿಗೆ ಯಾವ ಬೆಲೆ ಬರಬಹುದೆಂದು ನಿಯಂತ್ರಕನ ಅಭಿಪ್ರಾಯವಾಗುವುದೋ ಆ ಬೆಲೆಯ ಪ್ರಕಾರ ಯಾವುದೇ ಆಸ್ತಿಯ ಮುಖ್ಯ ಬೆಲೆಯ ಅಂದಾಜ ಮಾಡಲಾಗುವುದು.

(೨) ಈ ಕಲಮಿನನ್ವಯವಾಗಿ ಮುಖ್ಯ ಬೆಲೆಯನ್ನು ಅಂದಾಜು ಮಾಡುವಾಗ ನಿಯಂತ್ರಕನು ಮೃತನ ಮರಣದ ಸಮಯಕ್ಕೆ ಆಗುವ ಪೇಟೆಯ ಬೆಲೆಯನುಸಾರವಾಗಿ ಆ ಆಸ್ತಿಯ ಬೆಲೆಯನ್ನು ಗೊತ್ತುಮಾಡಬೇಕು. ಮತ್ತು ಏಕ ಕಾಲಕ್ಕೆ ಇಡಿ ಆಸ್ತಿಯು ಪೇಟೆಯ ಧಾರಣಿಗೆ ಹಚ್ಚಲಾಗುವುದೆಂದು ತಿಳಿದು ಮಾಡಲಾದ ಅಂದಾಜಿನ ಕಾರಣಕ್ಕಾಗಿ ಅಂದಾಜಿನಲ್ಲಿ ಯಾವುದೇ ಕಡಿತವನ್ನು ಮಾಡಲಾಗದು.

ಆದರೆ, ಮೃತನ ಮರಣದ ಮೂಲಕ ಆ ಆಸ್ತಿಯ ಬೆಲೆಯು ಕಡಿಮೆಯಾಗಿದೆಯೆಂದು ನಿಯಂತ್ರಕನಿಗೆ ಸಮಾಧಾನವಾಗುವಂತೆ ಸಿದ್ಧಮಾಡಲ್ಪಟ್ಟರೆ, ಆಗ ಹಾಗೆ ಬೆಲೆ ಕಡಿಮೆಯಾದ ಸಂಗತಿಯನ್ನು ಆಸ್ತಿಯ ಬೆಲೆಯನ್ನು ನಿರ್ಧರಿಸುವಾಗ ಲಕ್ಷ್ಯಕ್ಕೆ ತರಬೇಕು.

**ವಿವೇಚನೆ :**

ವಾರಸಾಕರವು ಕರಯೋಗ್ಯವಾಗಿರುವ ಆಸ್ತಿಯ ಮುಖ್ಯ ಬೆಲೆಯ ಮೇಲೆ ಹಾಕಲ್ಪಡುವುದು. ಮುಖ್ಯ ಬೆಲೆ ಅಂದರೆ ಆ ಇಡಿ ಆಸ್ತಿಯನ್ನು ಬಹಿರಂಗ ಪೇಟೆಯಲ್ಲಿ ಮಾರಾಟಕ್ಕೆ ಒಂದು ವೇಳೆ ಹಚ್ಚಿದರೆ ಅದಕ್ಕೆಬರಬಹುದಾದ ಬೆಲೆ. ಆಸ್ತಿಯನ್ನು ಇಡಿಯಾಗಿ ಮಾರುವುದರಿಂದ ಕಡಿಮೆ ಬೆಲೆ ಬಂದೀತೆಂದು ಮುಖ್ಯ ಬೆಲೆಯಲ್ಲಿ ಆ ಕಾರಣಕ್ಕಾಗಿ ಮಾತ್ರ ಕಡಿಮೆ ಮಾಡಲಾಗದು. ಆದರೆ ಯಾವ ಆಸ್ತಿಗೆ ಮೃತನ ವೈಯಕ್ತಿಕ ಅಸ್ತಿತ್ವದ ಮೂಲಕ ಬೆಲೆ ಇದ್ದಿತೋ, ಅವನ ಮರಣದ ಮೂಲಕ ಆ ಆಸ್ತಿಯ ಬೆಲೆಯು ಕಡಿಮೆಯಾಯಿತೊ ಅಂತಹ ಸಂದರ್ಭದಲ್ಲಿ ನಿಯಂತ್ರಕನಿಗೆ ಸಮಾಧಾನವಾಗುವಂತೆ ಸಿದ್ಧಮಾಡಿ ತೋರಿದರೆ, ಎಷ್ಟು ಮಟ್ಟಿಗೆ ಮೃತನ ಮರಣ

ದಿಂದ ಆಸ್ತಿಯ ಬೆಲೆಯು ಕಡಿಮೆಯಾಗಿರುವುದೋ ಅದನ್ನು ಮುಖ್ಯ ಬೆಲೆಯನ್ನು ನಿರ್ಧರಿಸುವಾಗ ಕಡಿಮೆ ಮಾಡುವುದಕ್ಕಾಗಿ ಲಕ್ಷ್ಯಕ್ಕೆ ತರಬೇಕೆಂದು ಹೇಳಲಾಗಿದೆ. ಆಸ್ತಿಯ ಮುಖ್ಯ ಬೆಲೆಯನ್ನು ಕಲಮು ೩೬ ರಿಂದ ೪೩ ರ ವರೆಗಿನ ಕಲಮುಗಳ ನ್ವಯವಾಗಿ ಗೊತ್ತುಮಾಡಲಾಗುವುದು. ಈ ೩೬ ನೆಯ ಕಲಮು ಬೆಲೆ ನಿರ್ಧರಿಸುವ ಬಗ್ಗೆ ಸಾಮಾನ್ಯ ತತ್ವವನ್ನು ಹೇಳುವುದು. ಇದರ ಪ್ರಕಾರ ಆಸ್ತಿಯ ಮುಖ್ಯ ಬೆಲೆ ಯೆಂದರೆ ಮೃತನ ಮರಣದ ಸಮಯಕ್ಕೆ ಬಹಿರಂಗ ಪೇಟೆಯಲ್ಲಿ ಆ ಆಸ್ತಿಗೆ ಬರ ಬಹುದಾದ ಬೆಲೆ. ಆಸ್ತಿಯ ಬೆಲೆಯನ್ನು ನಿಶ್ಚಿತಗೊಳಿಸಲು ಬೋರ್ಡು ನಿಯಮಗಳನ್ನು ಮಾಡಿದೆ. **ನಿಯಮ ೧೬** ಆ ಬಗ್ಗೆ ಮಾರ್ಗದರ್ಶನ ಮಾಡುವುದು.

**೩೭ ಹಸ್ತಾಂತರ ನಿರ್ಬಂಧವಿದ್ದ ಖಾಸಗಿ ಕಂಪನಿಯಲ್ಲಿಯ ಪಾಲುಗಳ ಬೆಲೆಕಟ್ಟುವಿಕೆ**

ಒಂದು ಖಾಸಗಿ ಕಂಪನಿಯ ಸಂಸ್ಥೆಯ ನಿಬಂಧನೆಗಳು ಪಾಲುಗಳನ್ನು ಹಸ್ತಾಂತರ ಮಾಡುವುದಕ್ಕೆ ನಿರ್ಬಂಧಿಸುವ ಕಕ್ಷೆಗಳನ್ನು ಒಳಗೊಂಡಿದ್ದರೆ ಕಂಪನಿಯ ಒಟ್ಟು ಸೊತ್ತುಗಳಿಗೆ ನಿರ್ದೇಶಿಸಿ ಪಾಲುಗಳ ಬೆಲೆಯನ್ನು ನಿಶ್ಚಿತ ಗೊಳಿಸಲು ಬರದೆ ಇದ್ದರೆ, ಕಂಪನಿಯ ನಿಬಂಧನೆಗಳಂಕಿತವಾಗಿ ಧಾರಕನೆಂದು ನೊಂದಾಯಿಸಲ್ಪಡುವುದಕ್ಕೆ ಕೊಂಡುಕೊಂಡವನು ಬಾಧ್ಯಸ್ಥನಾಗುವನೆಂಬ ಕರಾರಿನ ಮೇಲೆ ಬಹಿರಂಗ ಪೇಟೆಯಲ್ಲಿ ಆ ಪಾಲುಗಳನ್ನು ಮಾರಾಟ ಮಾಡಿ ದರೆ ಯಾವ ಬೆಲೆಯನ್ನು ಪಡೆಯಬಹುದೋ, ಆ ಬೆಲೆಯ ಪ್ರಕಾರ ಅಂದಾಜು ಮಾಡಲ್ಪಡಲಾಗುವುದು. ಆದರೆ, ಬಹಿರಂಗ ಪೇಟೆಯಲ್ಲಿ ದೊರೆಯಬಹುದಾ ಗಿದ್ದ ಬೆಲೆಯಕಿಂತ ಹೆಚ್ಚಿನ ಬೆಲೆಯನ್ನು ಕೊಡಲು ವಿಶಿಷ್ಟವಾಗಿ ಕೊಂಡ ಕೊಳ್ಳಲು ತನ್ನದೇ ಆದ ವಿಶೇಷ ಕಾರಣಗಳಿಗಾಗಿ ಮುಂದೆ ಬಂದರೆ ಆ ಸಂಗತಿ ಯನ್ನು ಉಪೇಕ್ಷಿಸಬೇಕು.

**ವಿವೇಚನೆ:**

ಪಾಲುಗಳ ಮಾರಾಟದ ಪೇಟೆಯಲ್ಲಿ ಪಾಲುಗಳು ಮಾರಾಟಕ್ಕೆ ಬಂದರೆ ಅವು ಗಳ ಬೆಲೆಯನ್ನು ಕಂಡು ಹಿಡಿಯುವುದು ಬಲು ಸುಲಭ. ಆದರೆ ಹಾಗೆ ಅನಿರ್ಬಂಧ ವಾಗಿ ಹಸ್ತಾಂತರಿಸಲಾಗದೆಂದು ಕಂಪನಿಯ ನಿಬಂಧನೆಗಳಲ್ಲಿ ನಿರ್ಬಂಧಗಳು ಇದ್ದರೆ, ಅಂತಹ ಪಾಲುಗಳ ಬೆಲೆಯನ್ನು ಕಂಡು ಹಿಡಿಯುವುದು ಕಠಿಣವೆನ್ನಿಸುವುದು. ಆದು ದರಿಂದ ಯಾವ ಖಾಸಗಿ ಕಂಪನಿಯಲ್ಲಿ ಹಾಗೆ ಪಾಲುಗಳ ಅನಿರ್ಬಂಧ ಹಸ್ತಾಂತರದ ಬಗ್ಗೆ ನಿರ್ಬಂಧವನ್ನು ಹಾಕಲಾಗಿದೆಯೋ ಅಂತಹ ಕಂಪನಿಗಳ ಪಾಲುಗಳ ಬಗ್ಗೆ ಈ ಕಲಮಿನಲ್ಲಿ ಹೇಳಲಾಗಿದೆ. ಇಂತಹ ಕಂಪನಿಯಲ್ಲಿಯ ಪಾಲುಗಳ ಬೆಲೆಯನ್ನು ಆ ಕಂಪನಿಯ ಇಡಿ ಸೊತ್ತುಗಳ ಬೆಲೆಯನ್ನು ಲಕ್ಷ್ಯವಾಗಿಟ್ಟುಕೊಂಡು ಕಂಡು ಹಿಡಿ

ಯಲು ಸಾಧ್ಯವಿದೆ. ಒಂದು ವೇಳೆ ಅದೂ ಸಾಧ್ಯವಿಲ್ಲದಿದ್ದರೆ ಇನ್ನೊಂದು ದಾರಿ ತೋರಿಸಲಾಗಿದೆ. ಕೊಂಡುಕೊಳ್ಳುವವನಿಗೆ ನೊಂದಾಯಿಸಿದ ಧಾರಕನ ಹಕ್ಕು ಬಾಧ್ಯತೆಗಳನ್ನು ಕೊಡುವ ಆಶ್ವಾಸನ ಕೊಟ್ಟರೆ ಆಗ ಆವನು ಯಾವ ಬೆಲೆಯನ್ನು ಆ ಪಾಲುಗಳಿಗೆ ಕೊಡಬಹುದೋ ಆ ಬೆಲೆಯು ಆ ಪಾಲುಗಳ ಬೆಲೆಯೆಂದು ತಿಳಿಯ ಬೇಕು, ಎಂದು ಹೇಳಲಾಗಿದೆ. ಆದರೆ ಇಲ್ಲಿ ಒಂದು ಅಪವಾದವಿದೆ. ಯಾವನೊಬ್ಬನು ತನ್ನದೇ ಆದ ವಿಶಿಷ್ಟ ಕಾರಣಗಳಿಗಾಗಿ ವಿಶೇಷವಾಗಿ ಹೆಚ್ಚಿನ ಬೆಲೆಯನ್ನು ಕೊಟ್ಟು ಪಾಲುಗಳನ್ನು ಕೊಂಡುಕೊಳ್ಳಲು ಮುಂದೆ ಬಂದಿದ್ದರೆ ಅದನ್ನು ನಿಜವಾದ ಬೆಲೆಯೆಂದು ತಿಳಿಯಬಾರದು. ಮತ್ತು ಅಂತಹ ಸಂಗತಿಯನ್ನು ಅಲಕ್ಷಿಸಬೇಕು, ಎಂದು ಹೇಳಿದೆ. ಏಕೆಂದರೆ ಅದು ಪಾಲುಗಳ ನಿಜವಾದ ಬೆಲೆಯೆಂದು ಆಗದೆ, ಹಿತಾಸಕ್ತಿಯುಳ್ಳ ಕೃತಕ ಬೆಲೆಯೆಂದು ಆಗುವುದು.

ಹಸ್ತಾಂತರ ನಿರ್ಬಂಧವಿದ್ದ ಪಾಲುಗಳ ಬೆಲೆಯನ್ನು ನಿರ್ಧರಿಸಲು ಈ ಮಾತು ಗಳು ಸಹಾಯಕವಾಗುವುವು.

(೧) ಮರಣದ ಸಮಯಕ್ಕೆ ಸಾಮಾನ್ಯವಾಗಿ ಇಂತಹ ಪಾಲುಗಳು ಯಾವ ಬೆಲೆಗೆ ಮಾರಲ್ಪಡುತ್ತಿದ್ದವು.

(೨) ಇಂತಹ ಕಂಪನಿಗೆ ಸರಿಸಮನಾದ ಬೇರೊಂದು ಕಂಪನಿಯ ಪಾಲು ಗಳು ಯಾವ ಬೆಲೆಗೆ ಮಾರಾಟ ಮಾಡಲ್ಪಡುತ್ತಿದ್ದವು.

(೩) ಮಾರ್ಕೆಟದಲ್ಲಿ ಮಾರಲ್ಪಡುವ ಕಂಪನಿಗಳ ಪಾಲುಗಳ ಮೇಲೆ ಯಾವ ಲಾಭಾಂಶವು ದೊರೆಯುತ್ತಿದ್ದಿತು. ಅದರ ಮಾನದಿಂದ ಇಂತಹ ಹಸ್ತಾಂತರ ನಿರ್ಬಂಧ ವಿದ್ದ ಪಾಲುಗಳಿಗೆ ಎಷ್ಟು ಲಾಭಾಂಶ ಬರಬಹುದಾಗಿದ್ದಿತು.

(೪) ಸಾಮಾನ್ಯವಾಗಿ ಈ ತರಹದ ಹಸ್ತಾಂತರ ನಿರ್ಬಂಧವಿದ್ದ ಪಾಲುಗಳ ಭಾವೀ ಬೆಲೆಯೇನಾಗಬಹುದು.

(೫) ಕಂಪನಿಯು ಮುರಿದು ಮುಕ್ತಾಯವಾದರೆ ಅದರ ಸೊತ್ತುಗಳ ವಿತರಣ ದಿಂದ ಅವುಗಳ ಮಾರು ಬೆಲೆಯ ಮೇಲಿಂದ ಯಾವ ಬೆಲೆಯು ಅದರ ಪಾಲುಗಳಿಗೆ ಬರಬಹುದು.

ಇದೆಲ್ಲ ಸಾಮಾನ್ಯ ಪಾಲುಗಳ ಬಗ್ಗೆ; ಇದೇ ಕ್ರಮದಲ್ಲಿ ಇತರ ಮಾದರಿಯ ಪಾಲುಗಳ ಬೆಲೆಯನ್ನು ನಿರ್ಧರಿಸಬಹುದು.

**೩೮ ನಿರೀಕ್ಷಣೆಯಲ್ಲಿದ್ದ ಹಿತಸಂಬಂಧಗಳ ಬೆಲೆಕಟ್ಟುವಿಕೆ**

ಯಾವುದೊಂದು ಆಸ್ತಿಯಲ್ಲಿ ನಿರೀಕ್ಷಣೆಯಲ್ಲಿದ್ದ ಹಿತಸಂಬಂಧಗಳು ಸಮಾವೇಶವಾಗಿದ್ದರೆ ಆ ಹಿತಸಂಬಂಧದ ವಿಷಯವಾಗಿ ವಾರಸಾಕರವು

ವಾರಸಾಕರ ಕೊಡಲು ಬಾಧ್ಯನಾಗಿರುವ ವ್ಯಕ್ತಿಯ ಮನದೊಲವಿನಂತೆ, ಆ ಆಸ್ತಿಯಲ್ಲಿಯ ಉಳಿದ ಆಸ್ತಿಯ ವಿಷಯವಾಗಿ ಕೊಡಬೇಕಾಗುವಾಗ ಇಲ್ಲವೆ ಹಿತಸಂಬಂಧವು ಸ್ವಾಧೀನತೆಯಲ್ಲಿ ಬಂದಾಗ ಕೊಡಲ್ಪಡಬಹುದು. ಮತ್ತು ವಾರಸಾಕರವು ಆ ಆಸ್ತಿಯಲ್ಲಿಯ ಉಳಿದ ಆಸ್ತಿಯ ವಿಷಯವಾಗಿ ಕೊಡಬೇಕಾಗುವಾಗ ಕೊಡಲಾಗಿರದೆ ಇದ್ದರೆ,

(ಅ) ಆ ಆಸ್ತಿಯಲ್ಲಿಯ ಉಳಿದ ಆಸ್ತಿಯ ವಿಷಯವಾಗಿ ವಾರಸಾಕರದ ದರವನ್ನು ನಿರ್ಧರಿಸುವ ಉದ್ದೇಶಕ್ಕಾಗಿ, ಆ ಹಿತಸಂಬಂಧದ ಬೆಲೆಯು ಮೃತನ ಮರಣದ ಸಮಯಕ್ಕೆ ಆಗುವ ಬೆಲೆಯೆ ಆಗುವುದು; ಮತ್ತು

(ಬ) ಸ್ವಾಧೀನತೆಯಲ್ಲಿ ಬಂದಾಗ ಆ ಹಿತಸಂಬಂಧದ ವಿಷಯವಾಗಿರುವ ವಾರಸಾಕರದ ದರವು ಆ ಹಿತಸಂಬಂಧವು ಸ್ವಾಧೀನತೆಯಲ್ಲಿ ಬಂದಾಗ ಆಗುವ ಬೆಲೆಯನುಸಾರವಾಗಿ, ಆ ಮೊದಲು ನಿಶ್ಚಿತಗೊಳಿಸಲಾದ ಆ ಆಸ್ತಿಯಲ್ಲಿಯ ಉಳಿದ ಆಸ್ತಿಯ ಬೆಲೆಯ ಜತೆಗೂಡಿ ಗುಣಿಸಲ್ಪಲಾಗುವುದು.

**ವಿವೇಚನೆ:**

ವಾರಸಾಕರ ಪಾತ್ರವಾದ ಆಸ್ತಿಯಲ್ಲಿ ನಿರೀಕ್ಷಣೆಯಲ್ಲಿದ್ದ ಹಿತಸಂಬಂಧಗಳು ಇರುವ ಸಂಭವವೂ ಇರುವುದು. ಆಗ ವಾರಸಾಕರವನ್ನು ಎಷ್ಟು ಆಸ್ತಿಯ ಮೇಲೆ ಯಾವಾಗ ಕೊಡಬೇಕಾಗುವುದು ಮತ್ತು ಅವುಗಳ ದರದ ನಿರ್ಣಯ ಹೇಗೆ ಎಂಬ ಪ್ರಶ್ನೆ ಬರುವುದು. ನಿರೀಕ್ಷಣೆಯಲ್ಲಿದ್ದ ಹಿತಸಂಬಂಧವನ್ನು ಬಿಟ್ಟು ಉಳಿದ ಆಸ್ತಿಯ ಜತೆಗೆಯೇ ನಿರೀಕ್ಷಣೆಯಲ್ಲಿದ್ದ ಹಿತಸಂಬಂಧದ ವಿಷಯವಾಗಿಯೂ ಕರ ಕೊಡಬಹುದು; ಇಲ್ಲವೆ ನಿರೀಕ್ಷಣೆಯಲ್ಲಿದ್ದ ಹಿತಸಂಬಂಧವು ಎಂದು ಸ್ವಾಧೀನತೆಯಲ್ಲಿ ಬರುವುದೋ ಅಂದೂ ಕೊಡಬಹುದು. ಯಾವಾಗ ಕೊಡಬೇಕೆಂಬುದನ್ನು ವಾರಸದಾರರು ನಿರ್ಣಯಿಸಬಹುದು. ಒಟ್ಟಾಗಿ ಕೊಡಬೇಕೆಂದು ಮನಸ್ಸು ಮಾಡಿದಾಗ, ಮೃತನ ಮರಣದ ಕಾಲಕ್ಕೆ ಆ ಇಡಿ ಆಸ್ತಿಯ ಬೆಲೆಗೆ ಅನ್ವಯಿಸುವ ದರದಂತೆ ಕರ ಕೊಡಬೇಕಾಗುವುದು.

**ಉದಾಹರಣೆ:**

ಕರಪಾತ್ರವಾಗುವ ಆಸ್ತಿಯ ಒಟ್ಟು ಬೆಲೆಯು ೨೦೦,೦೦೦ ಆಗುವುದು. ಇದರಲ್ಲಿ ೫೦೦೦೦ ರೂಪಾಯಿ ಬೆಲೆಯದು ನಿರೀಕ್ಷಣೆಯಲ್ಲಿದ್ದ ಹಿತಸಂಬಂಧ. ಮೃತನ ಮರಣದ ಸಮಯಕ್ಕೆ ಇಡಿ ಆಸ್ತಿಯ ಮೇಲೆ ಕರಕೊಡಬೇಕೆಂದು ಮಾಡಿದರೆ ೨೦೦೦೦೦ ರೂಪಾಯಿಗಳ ಮೇಲೆ ಕೊಡಬೇಕಾಗುವುದು. ನಿರೀಕ್ಷಣೆಯಲ್ಲಿದ್ದ ಹಿತಸಂಬಂಧವು ಎಂದು ಸ್ವಾಧೀನತೆಯಲ್ಲಿ ಬರುವುದೋ ಆ ತಾರೀಖಿಗೆ ಇಡಿ ಆಸ್ತಿಯ ಬೆಲೆ ಎಷ್ಟಾಗುವುದೋ ಆ ಬೆಲೆಯ ಮೇಲಿನ ದರದಂತೆ ನಿರೀಕ್ಷಣೆಯಲ್ಲಿದ್ದ ಹಿತಸಂಬಂಧದ ವಿಷಯವಾಗಿ ಕರಕೊಡಬೇಕಾಗುವುದು.

**೩೯ ಮರಣದಲ್ಲಿ ಮುಕ್ತಾಯವಾಗುವ ದಾಯಾದಸಂಸ್ಥೆಯ ಆಸ್ತಿಯಲ್ಲಿಯ ಹಿತ ಸಂಬಂಧದ ಬೆಲೆಕಟ್ಟುವಿಕೆ.**

(೧) ಮಿತಾಕ್ಷರ ತತ್ವಪ್ರಣಾಲಿಯ ಹಿಂದೂ ಕಾಯಿದೆಯಿಂದ ಶಾಸಿತವಾದ ಯಾವುದೇ ಒಟ್ಟು ಕುಟುಂಬದ ಆಸ್ತಿಯಲ್ಲಿ ಅವನ ಮರಣದ ಮೂಲಕ ಮುಕ್ತಾಯವಾಗುವ ಹಿತಸಂಬಂಧದ ಮೂಲಕ ಉಂಟಾಗುವ ಇಲ್ಲವೆ ಒದಗಿರುವ ಲಾಭದ ಬೆಲೆಯು, ದಾಯಾದನ ಹಿತಸಂಬಂಧವು ಆ ದಾಯದನ ಮರಣದ ತಾತ್ಕಾಲಿಕವಾಗಿ ಮುಂಚೆಯೆ ಪಾಲಾಗಿದ್ದರೆ ಅವನ ಪಾಲಿಗೆ ಬರುತ್ತಿದ್ದ ಆಸ್ತಿಯ ಮುಖ್ಯಬೆಲೆಯೇ ಆಗುವುದು.

(೨) ಮರುಮಕ್ಕತ್ತಾಯಂ ಪದ್ಧತಿಯ ವಾರಸಾ ನಿಯಮದಿಂದ ಶಾಸಿತವಾದ ತಾರವಾಡ ಇಲ್ಲವೆ ತವಾಜಿಯ ಆಸ್ತಿಯಲ್ಲಿಯ ಮುಕ್ತಾಯವಾಗುವ ಹಿತಸಂಬಂಧದ ಇಲ್ಲವೆ ಅಳಿಯಸಂತಾನದ ಪದ್ಧತಿಯ ವಾರಸಾ ನಿಯಮದಿಂದ ಶಾಸಿತವಾದ ಕುಟುಂಬ ಇಲ್ಲವೆ ಕವರು ಇದರ ಆಸ್ತಿಯಲ್ಲಿಯ ಮುಕ್ತಾಯವಾಗುವ ಹಿತಸಂಬಂಧದ—ಅದರ ಸದಸ್ಯನ ಮರಣದ ಮೂಲಕ ಒದಗಿ ಬರುವ ಇಲ್ಲವೆ ಉಂಟಾಗುವ ಲಾಭದ ಬೆಲೆಯು ಆ ಸದಸ್ಯನ ಮರಣದ ತಾತ್ಕಾಲಿಕವಾಗಿ ಮುಂಚೆಯೆ ಪಾಲಾಗಿದ್ದರೆ ಅವನಿಗೆ ಆ ತಾರವಾಡ ಇಲ್ಲವೆ ತವಾಜಿಯು, ಸಂದರ್ಭಾನುಸಾರವಾಗಿ, ಕುಟುಂಬ ಇಲ್ಲವೆ ಕವರು ಇದರ ಆಸ್ತಿಯಲ್ಲಿ ಎಷ್ಟು ಪಾಲು ದೊರೆಯುತ್ತಿದ್ದಿತೋ ಆ ಭಾಗದ ಆಸ್ತಿಯ ಮುಖ್ಯಬೆಲೆಯೇ ಆಗುವುದು.

(೩) ಮಿತಾಕ್ಷರ, ಮರುಮಕ್ಕತ್ತಾಯಂ ಇಲ್ಲವೆ ಅಳಿಯ ಸಂತಾನ ಪದ್ಧತಿಯ ತತ್ವಪ್ರಣಾಲಿಯಿರುವ ಹಿಂದೂ ಕಾಯಿದೆಯಿಂದ ಶಾಸಿತವಾದ ಹಿಂದು ಕುಟುಂಬದ ಏಕತ್ರ ಘರಾಣೆಯ ಆಸ್ತಿಯ ಮುಖ್ಯ ಬೆಲೆಯನ್ನು ಅಂದಾಜು ಮಾಡುವ ಉದ್ದೇಶದಿಂದ ಮೃತನ ಮರಣದ ತಾತ್ಕಾಲಿಕವಾಗಿ ಮುಂಚೆ ಪಾಲುಮಾಡಲ್ಪಟ್ಟಿದ್ದರೆ, ಮೃತನಿಗೆ ಎಷ್ಟುಪಾಲು ಬರುತ್ತಿತ್ತೆಂಬುದನ್ನು ಕಂಡು ಹಿಡಿಯುವದಕ್ಕಾಗಿ, ಶಕ್ಯವಿದ್ದಷ್ಟು ಮಟ್ಟಿಗೆ ಈ ಕಾಯಿದೆಯ ಕಕ್ಷೆಗಳು, ಆ ಮೃತನಿಗೆ ಇಡಿ ಏಕತ್ರ ಘರಾಣೆಯ ಆಸ್ತಿಯ ಮಾಲಕತ್ವವು ಇದ್ದರೆ ಯಾವರೀತಿಯಲ್ಲಿ ಅನ್ವಯಿಸುತ್ತಿದ್ದವೊ ಹಾಗೆ ಅನ್ವಯಿಸುವುವು.

**ವಿವೇಚನೆ:**

ಕಲಮು ೭ ಉಪಕಲಮು (೨) ರಲ್ಲಿ ಹೇಳಿದ ಕರಾರುಗಳು ಪೂರೈಸಲ್ಪಟ್ಟರೆ, ಮಿತಾಕ್ಷರ, ಮರುಮಕ್ಕತ್ತಾಯಂ, ಇಲ್ಲವೆ ಅಳಿಯ ಸಂತಾನ ಪದ್ಧತಿಗಳ ತತ್ವ

ಪ್ರಣಾಲಿಯಿರುವ ಹಿಂದೂ ಕಾಯಿದೆಯಿಂದ ಶಾಸಿತವಾದ ಒಟ್ಟುಕುಟುಂಬದ ಸದಸ್ಯನ ಮರಣದಿಂದ ಒಟ್ಟುಕುಟುಂಬದ ಆಸ್ತಿಯಲ್ಲಿ ಅವನ ದಾಯಾದಿ ಹಿತಸಂಬಂಧವು ಇಳಿದು ಬರುವುದೆಂದು ಗಣಿಸಲ್ಪಡಲಾಗುವುದೆಂದು ಹೇಳಲಾಗಿದೆ. ವಾರಸಾಕರಕ್ಕಾಗಿ ಆ ಹಿತಸಂಬಂದದ ಬೆಲೆಯು ಎಷ್ಟಾಗುವುದು ಎಂಬುದನ್ನು ಕಂಡು ಹಿಡಿಯುವಲ್ಲಿ ಪದ್ಧತಿಯನ್ನು ಕಲಮು ೩೯ ಹೇಳುವುದು.

ಈ ೩೯ ನೆಯ ಕಲಮಿನ ಪ್ರಕಾರ ಮೃತನ ಮರಣದ ತಾತ್ಕಾಲಿಕವಾಗಿ ಮುಂಚೆಯೆ ಒಟ್ಟು ಕುಟುಂಬ ಆಸ್ತಿಯು ಪಾಲಾಗಿದ್ದಿತೆಂದು ತಿಳಿಯಬೇಕೆಂದು ಸೂಚಿಸಲಾಗಿದೆ. ಮೃತ ಸದಸ್ಯನಿಗೆ ಅನ್ವಯಿಸುವ ವಾರಸಾ ಕಾಯಿದೆಯ ಪದ್ಧತಿಯ ಪ್ರಕಾರ ಎಷ್ಟು ಪಾಲು ಅವನಿಗೆ ಬರುತ್ತಿತ್ತೆಂದು ತಿಳಿಯುವುದು. ಈ ಕಾಯಿದೆಯ ಕಲಮು ೩೬ ರಿಂದ ೪೩ ರ ವರೆಗೆ ಒಟ್ಟುಕುಟುಂಬದ ಇಡಿ ಆಸ್ತಿಯ ಬೆಲೆಯು ಹೇಗೆ ನಿರ್ಧರಿಸಬೇಕೆಂಬುದನ್ನು ತಿಳಿಸಿ ಹೇಳಲಾಗಿದೆ. ಇಡಿ ಆಸ್ತಿಯಲ್ಲಿ ಮೃತನ ಪಾಲು ಎಷ್ಟು ಇರುವುದೆಂದು ಆಯಾ ಪದ್ದತಿಯ ಕಾಯಿದೆಯು ಹೇಳುವುದೋ ಅದೇ ಪ್ರಮಾಣದಲ್ಲಿ ಒಟ್ಟು ಕುಟುಂಬದ ಇಡಿ ಆಸ್ತಿಯ ಬೆಲೆಯಲ್ಲಿ ಮೃತನ ದಾಯಾದಿ ಹಿತಸಂಬಂಧದ ಬೆಲೆಯು ಆಗುವುದೆಂದು ತಿಳಿಯಬೇಕು.

ಆದುದರಿಂದ ಒಟ್ಟು ಕುಟುಂಬದಲ್ಲಿಯ ಮೃತ ಸದಸ್ಯನ ಹಿತಸಂಬಂಧದ ಬೆಲೆಯೆಷ್ಟು ಎಂಬುದನ್ನು ನಿರ್ಧರಿಸಲು (೧) ಒಟ್ಟು ಕುಟುಂಬದ ಇಡಿ ಆಸ್ತಿಯ ಬೆಲೆ ಎಷ್ಟು ಎಂಬುದನ್ನು ಗೊತ್ತುಮಾಡಬೇಕು. ಮತ್ತು (೨) ಮೃತನ ಮರಣದ ತಾತ್ಕಾಲಿಕ ಪೂರ್ವದಲ್ಲಿ ಆ ಒಟ್ಟು ಕುಟುಂಬದ ಆಸ್ತಿಯು ಪಾಲಾಗಿದ್ದರೆ ಆ ಮೃತನಿಗೆ ಮಿತಾಕ್ಷರ, ಮರುಮಕ್ಕತಾಯಂ ಇಲ್ಲವೆ ಅಳಿಯ ಸಂತಾನ ಕಾಯಿದೆ ಪ್ರಕಾರ ಎಷ್ಟು ಪಾಲು ಬರುತ್ತಿದ್ದಿತೋ ಆ ಪಾಲು ಮೃತನ ಹಿತಸಂಬಂಧವೆಂದು ತಿಳಿಯಬೇಕು.

ಹೀಗೆ ಒಮ್ಮೆ ಮೃತನ ದಾಯಾದಿ ಹಿತಸಂಬಂಧವು ನಿರ್ಣಯಿತವಾದ ಮೇಲೆ, ಆ ಒಟ್ಟು ಕುಟುಂಬದ ಇಡಿ ಆಸ್ತಿಯೇ ಮೃತನಿಗೆ ಅವನ ಮರಣದ ಮೂಲಕ ಇಳಿದು ಬರುತ್ತಿದ್ದರೆ ಈ ಕಾಯಿದೆಯಲ್ಲಿಯ ಯಾವ ಯಾವ ಕಕ್ಷೆಗಳು ಅನ್ವಯಿಸುತ್ತಿದ್ದುವೊ ಅವೆಲ್ಲವೂ ಅವನ ಪ್ರತ್ಯೇಕ ಹಿತಸಂಬಂಧದ ವಿಷಯವಾಗಿ ಅನ್ವಯಿಸುವುವು. ಅಂದರೆ ಈ ಕಾಯಿದೆಯ ಕಲಮು ೯— ಮತ್ತು ೧೦— ಇವು ಒಟ್ಟು ಕುಟುಂಬದ ಕರ್ತಾ ಎಂದು ಕೊಡಮಾಡಿದ ದಾನಗಳಿಗೆ ಅನ್ವಯಿಸುವುವು. ಈ ಕಲಮುಗಳನ್ನು ಲಕ್ಷಿಸಿ ೩೯ ನೆಯ ಕಲಮು ಹೆತ್ತುವುದು.

**೪೦ ಮರಣಕ್ಕೆ ಮುಕ್ತಾಯವಾಗುವ ಹಿತಸಂಬಂಧಗಳಿಂದ ಬರುವ ಲಾಭಗಳ ಬೆಲೆ ಕಟ್ಟುವಿಕೆ**

ಮೃತನ ಮರಣದ ಮೂಲಕ ಮುಕ್ತಾಯವಾಗುವ ಹಿತಸಂಬಂಧದ ಮುಕ್ತಾಯದಿಂದ ಒದಗಿ ಬರುವ ಇಲ್ಲವೆ ಉಂಟಾಗುವ ಲಾಭದ ಬೆಲೆಯು—

(ಅ) ಆ ಹಿತಸಂಬಂಧವು ಆ ಆಸ್ತಿಯ ಇಡಿ ಉತ್ಪನ್ನಕ್ಕೆ ವ್ಯಾಪಿಸಿದ್ದರೆ, ಆ ಆಸ್ತಿಯ ಮುಖ್ಯ ಬೆಲೆಯು ಆಗುವುದು; ಮತ್ತು

(ಬ) ಆ ಹಿತಸಂಬಂಧವು ಆ ಆಸ್ತಿಯ ಇಡಿ ಉತ್ಪನ್ನದಕಿಂತ ಕಡಿಮೆ ವ್ಯಾಪಿಸಿದ್ದರೆ, ಹಿತಸಂಬಂಧವು ಯಾವುದಕ್ಕೆ ವ್ಯಾಪಿಸುವುದೋ ಅದರ ಉತ್ಪನ್ನಕ್ಕೆ ಸರಿಸಮಾನವಾಗುವಷ್ಟು ಜೋಡಿಸಲಾಗುವ ಆಸ್ತಿಯ ಮುಖ್ಯ ಬೆಲೆಯು ಆಗುವುದು.

**ವಿವೇಚನೆ:** ಮೃತನ ಮರಣದ ಮೂಲಕ, ಮೃತನಿಗಾಗಲಿ ಇಲ್ಲವೆ ಬೇರೆ ಯಾವುದೇ ವ್ಯಕ್ತಿಗಾಗಲಿ ಹಿತಸಂಬಂಧವು ಬರುತ್ತಿದ್ದರೆ, ಅಂತಹ ಆಸ್ತಿಯು ಮೃತನ ಮರಣದ ಮೂಲಕ ಆ ಹಿತಸಂಬಂಧದ ಮುಕ್ತಾಯದ ಮೂಲಕ ಒದಗಿ ಬರುವ ಲಾಭದ ವ್ಯಾಪ್ತಿಯ ಮಟ್ಟಿಗೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವುದೆಂದು ಕಲಮು ೭ ಹೇಳುತ್ತದೆ. ಇಂತಹ ಲಾಭದ ಮೇಲೆ ವಾರಸಾಕರ ಹಾಕಲ್ಪಡಲಾಗುವುದು. ಈ ಲಾಭದ ಬೆಲೆಯು ಎಷ್ಟಾಗುವುದೆಂಬುದನ್ನು ನಿರ್ಣಯಿಸಲು ಕಲಮು ೪೦ ಕ್ರಮವನ್ನು ತಿಳಿಸುವುದು. ಈ ಕ್ರಮವನ್ನು ಅನ್ವಯಿಸಬೇಕಾದರೆ,

(ಅ) ಮುಕ್ತಾಯವಾಗುವ ಹಿತಸಂಬಂಧವು ಯಾವುದಕ್ಕೆ ವ್ಯಾಪಿಸಿತ್ತೋ ಆ ಉತ್ಪನ್ನದ ಮೊತ್ತವನ್ನು,

(ಬ) ಇಡಿ ಆಸ್ತಿಯ ಉತ್ಪನ್ನವನ್ನು

(ಕ) ಇಡಿ ಆಸ್ತಿಯ ಮುಖ್ಯ ಬೆಲೆಯನ್ನು ತಿಳಿದುಕೊಳ್ಳುವುದು ಅವಶ್ಯವಾಗುವುದು. ಈ ಸೂತ್ರಕ್ರಮವು ಸಹಾಯಕವಾಗುವುದು.

$$\frac{\text{ಮುಕ್ತಾಯವಾಗುವ ಹಿತಸಂಬಂಧ}}{\text{ಇಡಿ ಆಸ್ತಿಯ ಒಟ್ಟು ಉತ್ಪನ್ನ}} \times \text{ಇಡಿ ಆಸ್ತಿಯ ಮುಖ್ಯಬೆಲೆ} = \text{ಲಾಭದ ಮುಖ್ಯಬೆಲೆ.}$$

**೪೧ ಬೆಲೆ ಕಟ್ಟುವಿಕೆಯು ನಿಯಂತ್ರಕನಿಂದ ಮಾಡಲ್ಪಡಬೇಕು**

ಈ ಕಾಯಿದೆಯ ಕಕ್ಷೆಗಳಂಕಿತವಾಗಿ, ವಾರಸಾಕರದ ಉದ್ದೇಶಕ್ಕಾಗಿ ಯಾವುದೇ ಆಸ್ತಿಯ ಬೆಲೆಯು ಗೊತ್ತು ಮಾಡಲ್ಪಡಬಹುದಾದಂತಹ ರೀತಿಯಲ್ಲಿ ಮತ್ತು ಅಂತಹ ಸಾಧನಗಳಿಂದ ನಿಯಂತ್ರಕನಿಂದ ನಿಶ್ಚಿತಗೊಳಿಸಲ್ಪಡಬೇಕು. ಮತ್ತು ನಿಯಂತ್ರಕನು ಈ ಕಾಯಿದೆಯ ಉದ್ದೇಶಗಳಿಗಾಗಿ, ಯಾವನನ್ನಾದರೂ ಆ ಆಸ್ತಿಯ ಪರಿಶೀಲನೆ ಮಾಡಲು ಮತ್ತು ಅದರ ಬಗ್ಗೆ ವರದಿ

ಒಪ್ಪಿಸಲು ಅಧಿಕರಿಸಿದರೆ, ಗೊತ್ತುಮಾಡಲ್ಪಡಬಹುದಾದಂತಹ ಯೋಗ್ಯವೇಳೆಯಲ್ಲಿ ಆ ವ್ಯಕ್ತಿಯು ಆ ಆಸ್ತಿಯನ್ನು ಪ್ರವೇಶಿಸಿ, ಪರೀಶೀಲನೆ ಮಾಡಬಹುದು.

**ವಿವೇಚನೆ:**

ವಾರಸಾಕರ ಪಾತ್ರವಾದ ಆಸ್ತಿಯ ಬೆಲೆಯನ್ನು ನಿಯಂತ್ರಕನು ನಿಶ್ಚಿತಗೊಳಿಸಬೇಕೆಂದು ಈ ಕಲಮು ಹೇಳುತ್ತದೆ. ಆ ಉದ್ದೇಶದಿಂದ ನಿಯಂತ್ರಕನು ಗೊತ್ತುಮಾಡಲ್ಪಡಬಹುದಾದ ರೀತಿಯಲ್ಲಿ ಮತ್ತು ಪದ್ಧತಿಯಲ್ಲಿ ಬೆಲೆ ನಿಶ್ಚಿತಗೊಳಿಸಬಹುದು. ಅವನಿಂದ ಅಧಿಕರಿಸಲ್ಪಟ್ಟ ವ್ಯಕ್ತಿಯು ಆಸ್ತಿಯ ಪರಿಶೀಲನೆ ನಡಸಬಹುದು. ಮತ್ತು ವರದಿ ಒಪ್ಪಿಸಬಹುದು. ಪರಿಶೀಲನೆಗಾಗಿ ಆಸ್ತಿಯ ಪ್ರವೇಶ ಮಾಡಬಹುದು. ಅದನ್ನು ಹೇಗೆ ಮಾಡಬೇಕು. ಮತ್ತು ಯಾವ ವೇಳೆಯಲ್ಲಿ ಪರಿಶೀಲನೆ ನಡಸಬೇಕು, ಎಂಬುದಕ್ಕೆ ಮಾರ್ಗದರ್ಶನವನ್ನು ಈ ಕಾಯಿದೆಯನ್ವಯವಾದ ನಿಯಮಗಳು ಮಾಡುವುವು. **ನಿಯಮ ೧೭** ಈ ವಿಷಯವನ್ನು ವಿಶದ ಮಾಡುವುದು.

**೪೨ ಬೆಲೆ ಕಟ್ಟುವಿಕೆಯ ವೆಚ್ಚ**

ಈ ಕಾಯಿದೆಯ ಉದ್ದೇಶಗಳಿಗಾಗಿ ಯಾವುದೇ ಆಸ್ತಿಯ ಬೆಲೆಯ ಬಗ್ಗೆ ವರದಿ ಒಪ್ಪಿಸಲು ನಿಯಂತ್ರಕನು ಯಾವುದೇ ವ್ಯಕ್ತಿಯನ್ನು ಕೇಳಿಕೊಂಡರೆ ಇಂತಹ ಬೆಲೆ ಕಟ್ಟುವಿಕೆಯ ಯೋಗ್ಯ ವೆಚ್ಚವು ನಿಯಂತ್ರಕನಿಂದ ಕು.

**ವಿವೇಚನೆ:**

ಬೆಲೆಕಟ್ಟುವಿಕೆಯ ಕಾರ್ಯವು ನಿಯಂತ್ರಕನದು. ಆದ್ದರಿಂದ ಅದಕ್ಕಾಗಿ ಯಾವುದೇ ವ್ಯಕ್ತಿಯನ್ನು ನಿಯಂತ್ರಕನು ಅಧಿಕರಿಸಿದರೆ, ಬೆಲೆ ಕಟ್ಟುವಿಕೆಗಾಗಿ ಆಗುವ ಯೋಗ್ಯ ವೆಚ್ಚವನ್ನು ನಿಯಂತ್ರಕನು ಕೊಡಬೇಕು. ಅಂದರೆ ಆದರ ಭಾರವು ವಾರಸದಾರರದಲ್ಲ ಎಂದು ಸ್ಪಷ್ಟಮಾಡಿದಂತಾಗುವುದು.

**೪೩ ಅನುಕೂಲ ಕಂಡಾಗ ನಿಯಂತ್ರಕನು ಬೇರೆಯವರು ಬೆಲೆ ಕಟ್ಟಿದುದನ್ನು ಒಪ್ಪಬಹುದು ಮತ್ತು ಅದನ್ನು ಪ್ರಾಮಾಣೀಕರಿಸಬಹುದು.**

ವಾರಸಾಕರವನ್ನು ಕೊಡಲು ಬಾಧ್ಯನಾದ ವ್ಯಕ್ತಿಯು ಕರಯೋಗ್ಯವಾದ ಆಸ್ತಿಯ ಯಾವುದೇ ಭಾಗದ ಬೆಲೆಯ ಬಗ್ಗೆ ನಿಯಂತ್ರಕನಿಗೆ ಅರ್ಜಿ ಮಾಡಿದರೆ, ಹಾಗೆ ಮಾಡುವುದು ಅನುಕೂಲವೆಂದು ನಿಯಂತ್ರಕನಿಗೆ ಅನ್ನಿಸಿದರೆ, ಕರಪಾತ್ರವಾಗಿರುವ ಆಸ್ತಿಯ ಭಾಗವಾಗಿರುವ ಯಾವುದೇ ವರ್ಗಹ

ಇಲ್ಲವೆ ವರ್ಣನೆಯ ಆಸ್ತಿಯ ಬಗ್ಗೆ ಕಟ್ಟಿದ ಬೆಲೆಯನ್ನು ತಾನು ಒಪ್ಪಿರುವುದಾಗಿ ನಿಯಂತ್ರಕನು ಅದನ್ನು ಪ್ರಮಾಣೀಕರಿಸಬಹುದು.

**ವಿವೇಚನೆ:**

ವಾರಸಾಕರ ಕೊಡಲು ಬಾಧ್ಯನಾದವನು ಆಸ್ತಿಯಲ್ಲಿಯ ವೈಯಕ್ತಿಕ ಹಿತಾಸಕ್ತಿ ಇರದೆ ಇರುವ ಧರ್ಮದರ್ಶಿ ಇಲ್ಲವೆ ಮುತ್ಯುಲೇಖಾಧಿಕಾರಿಯಾಗಿರಬಹುದು. ಅಂತಹ ವ್ಯಕ್ತಿಯು ಕರಪಾತ್ರವಾದ ಆಸ್ತಿಯಲ್ಲಿಯ ಯಾವುದೇ ಭಾಗದ ಆಸ್ತಿಯ ಬೆಲೆ ಇಷ್ಟೆಂದು ಗೊತ್ತು ಮಾಡಿ ಅದರ ಬಗ್ಗೆ ನಿಯಂತ್ರಕನಿಗೆ ಅರ್ಜಿಮಾಡಿಕೊಂಡರೆ, ಹಾಗೆ ಅರ್ಜಿಮಾಡುವುದು ಅನುಕೂಲವೆಂದು ನಿಯಂತ್ರಕನಿಗೆ ಅನ್ನಿಸಿದರೆ, ನಿಯಂತ್ರಕನು ಹಾಗೆ ಕಟ್ಟಿದ ಬೆಲೆಯನ್ನು ಒಪ್ಪಿಕೊಂಡು ಅದನ್ನು ಪ್ರಮಾಣೀಕರಿಸಬಹುದು. ಅದರ ಬಗ್ಗೆ ಪ್ರಮಾಣ ಪತ್ರವನ್ನು ಕೊಡಬಹುದು.



# ಭಾಗ ಆರು

## ಕಡಿತಗಳು

೪೪ ಕರಪಾತ್ರವಾಗುವ ಆಸ್ತಿಯ ಬೆಲೆಯನ್ನು ನಿರ್ಧರಿಸುವಾಗ ಯೋಗ್ಯ ಉತ್ತರಕ್ರಿಯಾ ವೆಚ್ಚ ಮತ್ತು ಕೆಲವು ಅಪವಾದಗಳೊಂದಿಗೆ ಸಾಲಗಳು ಮತ್ತು ಋಣ ಭಾರಗಳು ಇವುಗಳನ್ನು ಲೆಕ್ಕಕ್ಕೆ ಹಿಡಿಯಬಾರದು.

ವಾರಸಾಕರದ ಉದ್ದೇಶಕ್ಕಾಗಿ ಆಸ್ತಿಯ ಬೆಲೆಯನ್ನು ನಿರ್ಧರಿಸುವಾಗ ಉತ್ತರಕ್ರಿಯಾ ವೆಚ್ಚ (ಒಂದು ಸಾವಿರ ರೂಪಾಯಿಗೆ ಮಿಕ್ಕದಷ್ಟು) ವು ಮತ್ತು ಕೆಲ ಸಾಲ ಮತ್ತು ಋಣ ಭಾರಗಳು ಇವುಗಳನ್ನು ಲೆಕ್ಕಕ್ಕೆ ಹಿಡಿಯ ಬಾರದು. ಆದರೆ,

(ಅ) ೨೭ ನೆಯ ಕಲಮಿನ ಕಕ್ಷೆಗಳಂಕಿತವಾಗಿ ಆ ಸಾಲಗಳು ಇಲ್ಲವೆ ಋಣ ಭಾರಗಳು ಮೃತನ ಸ್ವಂತದ ಉಪಯೋಗ ಮತ್ತು ಲಾಭಕ್ಕಾಗಿ ಹಣ ಇಲ್ಲವೆ ಹಣದ ಕಿಮ್ಮತ್ತಿನ ಪೂರ್ಣ ಪ್ರತಿ ಬೆಲೆಗಾಗಿ ಸದ್ಭಾವದಿಂದ ಮಾಡಲ್ಪಟ್ಟಿದ್ದು ಇಲ್ಲವೆ ನಿರ್ಮಿಸಲ್ಪಟ್ಟಿದ್ದು ಮತ್ತು ಅವು ಅವನ ಹಿತಸಂಬಂಧದೊಳಗಿಂದಲೆ ಪರಿಣಮಿಸಿದ್ದು ಆಗಿರದಿದ್ದರೆ, ಮೃತನಿಂದ ಮಾಡಿದ ಸಾಲಗಳಿಗೆ ಇಲ್ಲವೆ ಮೃತನಿಂದ ಮಾಡಲ್ಪಟ್ಟ ವಿನ್ಯಾಸದಿಂದ ನಿರ್ಮಿತವಾದ ಋಣ ಭಾರಗಳಿಗೆ ಈ ವಿನಾಯತಿಯು ಕೊಡಲ್ಪಡಲಾಗದು. ಇಲ್ಲವೆ,

(ಬ) ಬೇರೆ ಯಾವುದೇ ಆಸ್ತಿ ಇಲ್ಲವೆ ವ್ಯಕ್ತಿಯಿಂದ ಯಾವ ಸಾಲಗಳ ಸಂಬಂಧವಾಗಿ ಪುನರ್ಭರತಿಯ ಹಕ್ಕು ಇರುವುದೋ ಇಂತಹ ಪುನರ್ಭರತಿಯನ್ನು ಪಡೆವುದು ಸಾಧ್ಯವಾಗದಿದ್ದರೆ ಅಂತಹ ಯಾವುದೇ ಸಾಲಕ್ಕೆ ಈ ವಿನಾಯತಿಯು ಕೊಡಲ್ಪಡಲಾಗದು. ಇಲ್ಲವೆ,

(ಕ) ಆ ಆಸ್ತಿಯ ಬೇರೆ ಬೇರೆ ಭಾಗಗಳ ಮೇಲೆ ಭಾರ ಹಾಕಲಾದ ಅದೇ ಸಾಲ ಇಲ್ಲವೆ ಋಣ ಭಾರಕ್ಕಾಗಿ ಒಂದು ಸಲಕ್ಕಿಂತ ಹೆಚ್ಚು ಸಲ ಈ ವಿನಾಯತಿಯು ಕೊಡಲ್ಪಡಲಾಗದು. ಇಲ್ಲವೆ,

(ಡ) ಮೃತನಿಂದ ಇಲ್ಲವೆ ಮೃತನ ಪರವಾಗಿ ವಿವಾಹ ಶುಲ್ಕದ ಕಾರಣಕ್ಕಾಗಿ ಐದು ಸಾವಿರ ರೂಪಾಯಿಗಳಿಗಿಂತ ಈ ಸಾಲಗಳು ಹೆಚ್ಚಾಗುತ್ತಿದ್ದರೆ, ಎಷ್ಟು ಮಟ್ಟಿಗೆ ಹೆಚ್ಚಾಗುವುದೋ ಅಷ್ಟು ಮಟ್ಟಿಗೆ ಆಗುವ ಸಾಲಗಳಿಗೆ ಈ ವಿನಾಯತಿಯು ಕೊಡಲ್ಪಡಲಾಗದು.

ಮತ್ತು ಯಾವದೇ ಸಾಲಕ್ಕೆ ಇಲ್ಲವೆ ಋಣ ಭಾರಕ್ಕೆ ವಿನಾಯತಿಯು ಕೊಡಲ್ಪಡಲಾಗಿದೆಯೊ ಅವುಗಳನ್ನು ಕರಪಾತ್ರವಾದ ಆಸ್ತಿಯ ಬೆಲೆಯಿಂದ ಕಡಿದು ಕಡಿಮೆ ಮಾಡಲಾಗುವುದು.

**ವಿವರಣೆ:** ಈ ಕಲಮಿನ ಉದ್ದೇಶಗಳಿಗಾಗಿ, " ಉತ್ತರಕ್ರಿಯಾ ವೆಚ್ಚವು " ಮೃತನ ಮರಣದ ಸಮಯದಿಂದ ಒಂದು ವರುಷದ ವರೆಗೆ ಆಗುವ ಶ್ರಾದ್ಧ ಇಲ್ಲವೆ ವರುಷ ಶಾದ್ಧ ( ಬರ್ಸಿ ) ಇವುಗಳ ಸಮಾರಾಧನೆಯ ಸಂಬಂಧವಾಗಿ ಆಗುವ ಎಲ್ಲ ವೆಚ್ಚವನ್ನು ಒಳಗೊಳ್ಳುವುದು.

**ವಿವೇಚನೆ:**

ಕರಪಾತ್ರವಾದ ಆಸ್ತಿಯ ಬೆಲೆಯನ್ನು ನಿರ್ಧರಿಸುವಾಗ ಆ ಬೆಲೆಯಲ್ಲಿ ಕೆಲವೊಂದು ವೆಚ್ಚ ಮತ್ತು ಸಾಲ ಇಲ್ಲವೆ ಋಣ ಭಾರಗಳನ್ನು ಕಡಿದು ಕಡಿಮೆ ಮಾಡಿ ಲೆಕ್ಕಕ್ಕೆ ಹಿಡಿಯಬೇಕೆಂದು ಈ ಕಲಮು ಹೇಳುತ್ತದೆ. ವೆಚ್ಚದಲ್ಲಿ ಮೃತನ ಉತ್ತರ ಕ್ರಿಯಾ ವೆಚ್ಚವು, ಶ್ರಾದ್ಧ ವೆಚ್ಚವು ಮತ್ತು ಮೃತನ ಮರಣದಿಂದ ಒಂದು ವರುಷದ ಕಾಲಾವಧಿಯಲ್ಲಿಯ ವರುಷಶ್ರಾದ್ಧ ಮುಂತಾದ ಇತರ ಸಮಾರಾಧನೆಗಳ ವೆಚ್ಚವೂ ಸಮಾವೇಶವಾಗುವುದು. ಈ ವೆಚ್ಚವು ಒಂದು ಸಾವಿರದ ಮಟ್ಟಿಗೆ ಎಂದು ಮಿತಿ ಹಾಕಲಾಗಿದೆ. ಹೆಚ್ಚು ವೆಚ್ಚವು ನಿಜವಾಗಿ ಆದರೂ ವಿನಾಯತಿ ದೊರೆವುದು ಕೇವಲ ಒಂದು ಸಾವಿರ ರೂಪಾಯಿಯಷ್ಟಾಗುವ ವೆಚ್ಚಗಳಿಗೆ ಮಾತ್ರ. ಸದ್ಭಾವದಿಂದ ಮಾಡಲಾಗಿರದೆ ಇದ್ದ ಸಾಲಗಳಿಗೆ ವಿನಾಯತಿ ದೊರೆವುದಿಲ್ಲ. ಅಂದರೆ ವಿನಾಯತಿಯ ಲಾಭ ಸಿಕ್ಕಬೇಕಾದರೆ ಸಾಲಗಳನ್ನು ಸದ್ಭಾವದಿಂದ ಮಾಡಿರಲೇಬೇಕು. ಮೃತನ ಆಸ್ತಿಯೊಳಗಿಂದ ಕಾಯಿದೆಯ ಪ್ರಕಾರವಾಗಿ ಕೊಡಬೇಕಾದ ಎಲ್ಲ ಸಾಲಗಳು ಮತ್ತು ಋಣ ಭಾರಗಳು ವಿನಾಯತಿ ಪಡೆವುವು. ಆದರೆ ಈ ಕೆಳಗಿನ ಸಾಲಗಳಿಗೆ ವಿನಾಯತಿ ದೊರೆವುದಿಲ್ಲಃ

(೧) (ಅ) ಮೃತನಿಂದ ಸದ್ಭಾವದಿಂದ ಮಾಡಲ್ಪಡದೆ ಇದ್ದ ಯಾವುದೇ ಸಾಲ ಇಲ್ಲವೆ ಋಣಭಾರ; (ಬ) ಹಣ ಇಲ್ಲವೆ ಹಣದ ಕಿಮ್ಮತ್ತಿನ ಪ್ರತಿಬೆಲೆಗಾಗಿ ಮಾಡದೆ ಇದ್ದ ಸಾಲ; (ಕ) ಇಡಿಯಾಗಿ ಮೃತನ ಸ್ವಂತದ ಉಪಯೋಗ ಇಲ್ಲವೆ ಲಾಭಕ್ಕಾಗಿ ಮಾಡದೆ ಇದ್ದ ಸಾಲ.

(೨) ಒಂದು ಸಾಲವಿದೆ. ಅದರ ಪುನರ್ಭರತಿಯನ್ನು ಬೇರೆ ಯಾವುದೇ ಆಸ್ತಿಯಿಂದ ಇಲ್ಲವೆ ವ್ಯಕ್ತಿಯಿಂದ ಮಾಡಲ್ಪಡುವ ಹಕ್ಕು ಇದೆ. ಇಂತಹ ಪುನರ್ಭರತಿ ಮಾಡಲ್ಪಡಲಾಗದಿದ್ದಕ್ಕೆ ವಿನಾಯತಿ ದೊರೆವುದಿಲ್ಲ.

ಆಸ್ತಿಯ ಬೆಲೆಯ ಬಗ್ಗೆ ವ್ಯಾಜ್ಯ ಬಂದರೆ ಅಪೀಲು ಮಾಡಿಕೊಂಡವನು ಆ ವಿಷಯವನ್ನು ಮಧ್ಯಸ್ಥಿಕೆಗೆ ಹಾಕಲು ಕೇಳಿಕೊಳ್ಳಬಹುದು. ಆ ಇಬ್ಬರು ಮೌಲ್ಯ ಮಾಪಕರು ಮಧ್ಯಸ್ಥಿಗಾರರೆಂದು ಒಬ್ಬರು ಬೋರ್ಡಿನಿಂದ ಇನ್ನೊಬ್ಬರು ಅಪೀಲು ಮಾಡಿದವರಿಂದ ನಾಮಕರಣ ಮಾಡಲ್ಪಡಬೇಕು. ಈ ಇಬ್ಬರಲ್ಲಿ ಭಿನ್ನಾಭಿಪ್ರಾಯ ವುಂಟಾದರೆ ಮೂರನೆಯ ಮೌಲ್ಯಮಾಪಕನನ್ನು ನೇಮಿಸಬಹುದು. ಮತ್ತು ಅವನ ನಿರ್ಣಯ ಕೊನೆಯದು. ಅಪೀಲಿನಲ್ಲಿ ಅಪೀಲು ಮಾಡಿಕೊಂಡವನು ಯಶಸ್ವಿ ಯಾದರೂ ಬೋರ್ಡು ನಿರ್ದಿಷ್ಟಪಡಿಸುವಷ್ಟು ವೆಚ್ಚವನ್ನು ಅವನೇ ವಹಿಸ ಬೇಕಾಗುವುದು.

ಅಪೀಲು ಮಾಡಿದ್ದರೂ ಯಾವುದರ ಬಗ್ಗೆ ವ್ಯಾಜ್ಯವಿಲ್ಲವೋ ಆ ಪಾರನಾಕರ ವನ್ನು ಅಪೀಲಿನ ನಿರ್ಣಯದ ದಾರಿ ನೋಡದೆ ಕೊಡಬೇಕು.

**೩೪ ಹಾಯಕೋರ್ಟಿಗೆ ಬೋರ್ಡಿನಿಂದ ಪ್ರಕರಣದ ಆವೇದನ.**

(೧) ಕಲಮು ೬೨ ರ ಉಪಕಲಮು (೩) ರನ್ವಯವಾಗಿರುವ ಆಜ್ಞೆಯನ್ನು ಯಾವ ತಾರೀಖಿಗೆ ಜಾರಿ ಮಾಡಲಾಗಿರುವುದೋ ಆ ತಾರೀಖಿನಿಂದ ತೊಂಬತ್ತು ದಿವಸಗಳಲ್ಲಿ ಲೆಕ್ಕ ಒಪ್ಪಿಸಲು ಬಾಧ್ಯನಾದವನು ಗೊತ್ತುಪಡಿಸಿದ ನಮೂನೆಯಲ್ಲಿ ಒಂದು ನೂರು ರೂಪಾಯಿಯ ಫೀಯೊಂದಿಗೆ ಆ ಆಜ್ಞೆಯಲ್ಲಿಂದ ಉದ್ಭೂತವಾಗುವ ಕಾಯಿದೆಯ ಯಾವುದೇ ಪ್ರಶ್ನೆಯನ್ನು ಬೋರ್ಡು ಹಾಯಕೋರ್ಟಿಗೆ ಆವೇದನ ಮಾಡಿಕೊಳ್ಳಬೇಕೆಂದು ಅರ್ಜಿಯನ್ನು ಬೋರ್ಡಿಗೆ ಸಾದರ ಪಡಿಸಬಹುದು ಮತ್ತು ಬೋರ್ಡು, ಅದರ ಅಭಿಪ್ರಾಯದಲ್ಲಿ ಹಾಗೆ ಅಂತಹ ಆಜ್ಞೆಯಲ್ಲಿ ಕಾಯಿದೆಯ ಪ್ರಶ್ನೆಯು ಅಡಕವಾಗಿದೆಯೆಂದು ತಿಳಿದರೆ, ಹಾಯಕೋರ್ಟಿನ ಅಭಿಪ್ರಾಯಕ್ಕಾಗಿ ಪ್ರಕರಣವನ್ನು ಸಾದರ ಪಡಿಸಬಹುದು.

ಆದರೆ, ಇಂತಹ ಅರ್ಜಿಯನ್ನು ನಿರ್ದಿಷ್ಟಪಡಿಸಿದ ಕಾಲಾವಧಿಯಲ್ಲಿ ಸಾದರ ಪಡಿಸದೆ ಇರಲಿಕ್ಕೆ ನಾಕಷ್ಟು ಯೋಗ್ಯ ಕಾರಣಗಳು ಇವೆಯೆಂದು ಬೋರ್ಡಿಗೆ ಸಮಾಧಾನವಾದರೆ ಬೋರ್ಡು ಆ ಅರ್ಜಿಯನ್ನು ತೊಂಬತ್ತು ದಿನ ಗಳು ಮುಗಿದ ನಂತರವೂ ಸ್ವೀಕರಿಸಬಹುದು.

(೨) ಉಪಕಲಮು (೧) ರನ್ವಯವಾಗಿ ಒಂದು ಅರ್ಜಿ ಮಾಡಲಾದ ನಂತರ. ಬೋರ್ಡು—

(ಅ) ಯಾವ ಕಾಯಿದೆಯ ಪ್ರಶ್ನೆಯು ಉದ್ಭೂತವಾಗಿಲ್ಲೆಂಬ ಕಾರಣಕ್ಕಾಗಿ ಪ್ರಕರಣವನ್ನು ಹಾಯಕೋರ್ಟಿಗೆ ಆವೇದನ ಮಾಡಲು ಒಪ್ಪದಿದ್ದರೆ, ಇಲ್ಲವೆ

(೨) ಕಾಲಮಿತಿ ಬಾಹಿರವಾಗಿದೆಯೆಂಬ ಕಾರಣಕ್ಕಾಗಿ ಅರ್ಜಿಯನ್ನು ನಿರಾಕರಿಸಿದರೆ, ಲೆಕ್ಕ ಒಪ್ಪಿಸಲು ಬಾಧ್ಯನಾದವನು ಸಂದರ್ಭಾನುಸಾರವಾಗಿ ಹಾಗೆ ನಿರಾಕರಿಸಲ್ಪಟ್ಟ ಇಲ್ಲವೆ ಒಪ್ಪದೇ ಇದ್ದ ಆಜ್ಞೆಯು ನೋಟೀಸಿನ ಮೂಲಕ ಜಾರಿಯಾದ ತಾರೀಖಿನಿಂದ ಮೂರು ತಿಂಗಳ ಒಳಗೆ ಹಾಯಕೋರ್ಟಿಗೆ ಅರ್ಜಿಮಾಡಿಕೊಳ್ಳಬಹುದು. ಮತ್ತು ಹಾಯಕೋರ್ಟು ಬೋರ್ಡಿನ ನಿರ್ಣಯವು ಸರಿಯಾಗಿದೆಯೆಂಬ ಬಗ್ಗೆ ಸಮಾಧಾನವಾಗಿರದಿದ್ದರೆ, ಪ್ರಕರಣವನ್ನು ಹಾಯಕೋರ್ಟಿಗೆ ಆವೇದನ ಮಾಡಲು ಬೋರ್ಡನ್ನು ಕೇಳಬಹುದು. ಮತ್ತು ಹಾಗೆ ಕೇಳಿಕೆಯು ಸ್ವೀಕೃತವಾದ ಮೇಲೆ ಬೋರ್ಡು ಪ್ರಕರಣವನ್ನು ನಿವೇದಿಸಬೇಕು.

ಆದರೆ, ಲೆಕ್ಕ ಒಪ್ಪಿಸಲು ಬಾಧ್ಯನಾದವನಿಂದ ಯಾವುದೊಂದು ಪ್ರಕರಣವು ನಿವೇದಿಸಲ್ಪಡಬೇಕೆಂದು ಕೇಳಿಕೊಳ್ಳಲ್ಪಟ್ಟಿದ್ದರೆ, ಯಾವ ಕಾಯಿದೆಯ ಪ್ರಶ್ನೆಯು ಉದ್ಭೂತವಾಗಿಲ್ಲೆಂಬ ಕಾರಣಕ್ಕಾಗಿ ಬೋರ್ಡು ಅದಕ್ಕೆ ಒಪ್ಪದಿದ್ದರೆ, ಹಾಗೆ ಪ್ರಕರಣ ನಿವೇದಿಸಲು ಒಪ್ಪದೇ ಇದ್ದ ಆಜ್ಞೆಯ ನೋಟೀಸು ಸ್ವೀಕೃತವಾದ ತಾರೀಖಿನಿಂದ ಮುವ್ವತ್ತು ದಿವಸಗಳಲ್ಲಿ ಆ ವ್ಯಕ್ತಿಯು ತನ್ನ ಅರ್ಜಿಯನ್ನು ಹಿಂತೆಗೆದು ಕೊಳ್ಳಬಹುದು. ಮತ್ತು ಆವನು ಹಾಗೆ ಹಿಂತೆಗೆದುಕೊಂಡರೆ ಉಪಕಲಮು (೧) ರ ನ್ವಯವಾಗಿ ಅವನು ಕೊಟ್ಟಿದ್ದ ಫೀ ಹಣವನ್ನು ಅವನಿಗೆ ಮರಳಿ ಕೊಡಲಾಗುವುದು.

(೩) ಉಪಕಲಮು (೨) ರ ನ್ವಯವಾಗಿ ಹಾಯಕೋರ್ಟಿಗೆ ಮಾಡಿಕೊಳ್ಳಲಾಗುವ ಅರ್ಜಿಗೆ ೧೯೦೮ ರ ಇಂಡಿಯನ್ ಲಿಮಿಟೇಶನ್ (೧೯೦೮ ರ ix) ಆ್ಯಕ್ಟದ ಕಲಮು ೫ ಅನ್ವಯಿಸುವುದು.

(೪) ಉಪಕಲಮು (೧) ರ ನ್ವಯವಾಗಿ ಮಾಡಿಕೊಳ್ಳಲಾದ ಅರ್ಜಿಯ ಮೂಲಕ ಆ ಪ್ರಕರಣದಲ್ಲಿ ಒಂದು ಮಹತ್ವದ ಕಾಯಿದೆಯ ಪ್ರಶ್ನೆಯು ಒಳಗೊಂಡಿದೆಯೆಂದು ಇಲ್ಲವೆ ಅದರಲ್ಲಿ ಉದ್ಭೂತವಾದ ಯಾವುದೇ ವಿಶಿಷ್ಟ ಕಾಯಿದೆಯ ಪ್ರಶ್ನೆಯ ಬಗ್ಗೆ ಬೇರೆ ಬೇರೆ ಹಾಯಕೋರ್ಟಿಗಳ ನಿರ್ಣಯದಲ್ಲಿ ತಿಕ್ಕಾಟ ಉಂಟಾಗಿರುವ ಕಾರಣದಿಂದ ಆ ಪ್ರಕರಣವನ್ನು ನೇರವಾಗಿ ಸುಪ್ರೀಮ ಕೋರ್ಟಿಗೆ ನಿವೇದಿಸುವುದು ಯೋಗ್ಯವೆಂದು ಬೋರ್ಡಿನ ಅಭಿಪ್ರಾಯವಾದರೆ ಬೋರ್ಡು ಆ ಪ್ರಕರಣವನ್ನು ನೇರವಾಗಿ ಸುಪ್ರೀಮ ಕೋರ್ಟಿಗೆ ನಿವೇದಿಸಬಹುದು.

(೫) ಆ ಪ್ರಕರಣವು ಸಂಗತಿಗಳನ್ನು ಮಂಡಿಸಬೇಕು., ಬೋರ್ಡಿನ ನಿರ್ಣಯವನ್ನು ವಿವರಿಸಬೇಕು ಮತ್ತು ಪ್ರಕರಣದಲ್ಲಿ ಉದ್ಭೂತವಾಗುವ ಕಾಯಿದೆಯ ಪ್ರಶ್ನೆಗಳನ್ನು ಮಂಡಿಸಬೇಕು.

(೬) ಉದ್ಭೂತವಾದ ಕಾಯಿದೆಯ ಪ್ರಶ್ನೆಗಳನ್ನು ನಿರ್ಣಯಿಸಲು ಸಮರ್ಥವಾಗುವಂತೆ ಮಂಡಿಸಲಾದ ಪ್ರಕರಣದಿಂದ ಹಾಯಕೋರ್ಟಾಗಲೀ ಇಲ್ಲವೆ ಸುಪ್ರೀಮ ಕೋರ್ಟಾಗಲೀ ಸಮಾಧಾನ ಪಡದಿದ್ದರೆ ಆ ಪ್ರಕರಣಕ್ಕೆ ಆವಶ್ಯಕವಾದಂತಹ ತಿದ್ದುಪಡಿ ಇಲ್ಲವೆ ಬದಲಾವಣೆ ಮಾಡಲು ಈ ಸಂಬಂಧ ದಲ್ಲಿ ಕೋರ್ಟು ನಿರ್ದೇಶಿಸುವಂತೆ ಕೋರ್ಟು ಬೋರ್ಡನ್ನು ಕೇಳಿಕೊಳ್ಳ ಬಹುದು.

(೭) ಹಾಯಕೋರ್ಟು ಇಲ್ಲವೆ ಸುಪ್ರೀಮ ಕೋರ್ಟು ಇಂತಹ ಪ್ರಕ ರಣದ ವಿಚಾರಣೆ ನಡಿಸಿ, ಅದರಲ್ಲಿ ಉದ್ಭೂತವಾದ ಕಾಯಿದೆಯ ಪ್ರಶ್ನೆಯ ಬಗ್ಗೆ ನಿರ್ಣಯಿಸುವುದು. ಮತ್ತು ಹಾಗೆ ಮಾಡುವಾಗ ಅದಕ್ಕೆ ಯೋಗ್ಯವೆನ್ನಿ ಸಿದರೆ ಕಾಯಿದೆಯ ಪ್ರಶ್ನೆಯ ರೂಪವನ್ನು ಬದಲಿಸಬಹುದು. ಮತ್ತು ಆದರ ಮೇಲೆ ತನ್ನ ನಿರ್ಣಯವನ್ನು, ಆ ನಿರ್ಣಯವು ಅವಲಂಬಿಸಿದ ಆಧಾರ ಸಹಿತ ವಾಗಿ ಕೊಡುವುದು ಮತ್ತು ಇಂತಹ ನಿರ್ಣಯದ ಪ್ರತಿಯನ್ನು ಕೋರ್ಟಿನ ಮುದ್ರೆಯೊಂದಿಗೆ ಮತ್ತು ರಜಿಸ್ಟ್ರಾರನ ಸಹಿ ಯೊಂದಿಗೆ ಬೋರ್ಡಿಗೆ ಕಳಿಸು ವುದು, ಬೋರ್ಡು ಇಂತಹ ನಿರ್ಣಯಕ್ಕೆ ಹೊಂದಿಕೊಂಡು ಪ್ರಕರಣವನ್ನು ಮುಗಿಸಲು ಆವಶ್ಯಕವಾದಂತಹ ಆಜ್ಞೆಗಳನ್ನು ಮಾಡುವುದು.

(೮) ಹಾಯ್ ಕೋರ್ಟಿಗೆ ಇಲ್ಲವೆ ಸುಪ್ರೀಮ ಕೋರ್ಟಿಗೆ ಮಾಡಿದ ನಿವೇದನೆಯ ವೆಚ್ಚವು ಕೋರ್ಟಿನ ಇಚ್ಛೆಯ ಪ್ರಕಾರ ನಿರ್ವಹಿಸಲ್ಪಡಬೇಕು.

ಆದರೆ, ಈ ಕಲಮಿನ ಉಪಕಲಮು (೪) ರನ್ವಯವಾಗಿ ಆ ಪ್ರಕರಣವು ಸುಪ್ರೀಮ ಕೋರ್ಟಿಗೆ ನಿವೇದಿಸಲಾಗಿದ್ದರೆ, ಸುಪ್ರೀಮ ಕೋರ್ಟಿನ ಬದಲು ಹಾಯ್‌ಕೋರ್ಟಿಗೆ ನಿವೇದಿಸಲಾಗಿದ್ದಂತೆ ಪಕ್ಷಕಾರನು, ಅವನೇ ಕೊಡ ಬೇಕೆಂದು ವಿಧಿಸಲಾದರೆ, ವೆಚ್ಚವನ್ನು ಕೊಡಬೇಕು.

(೯) ಈ ಕಲಮಿನನ್ವಯವಾಗಿ ಹಾಯ್ ಕೋರ್ಟಿಗೆ ಇಲ್ಲವೆ ಸುಪ್ರೀಮ ಕೋರ್ಟಿಗೆ ನಿವೇದನೆ ಮಾಡಲ್ಪಡಲಾಗಿದ್ದರೂ ಬೋರ್ಡಿನಿಂದ ನಿಶ್ಚಿತಗೊಳಿಸಲಾದ ವಾರಸಾಕರವು ಕೊಡಲ್ಪಡಬೇಕಾಗುವುದು.

(೧೦) ಈ ಕಲಮಿನ ಉದ್ದೇಶಗಳಿಗಾಗಿ "ಹಾಯ ಕೋರ್ಟು" ಎಂದರೆ, ಯಾವ ಕೋರ್ಟಿಗೆ ಪ್ರಾತಿನಿಧ್ಯ ದಯಪಾಲಿಸುವುದರ ಸಲುವಾಗಿ ಅರ್ಜಿಯನ್ನು ಮಾಡಲಾಗಿರುವುದೋ ಆ ಹಾಯಕೋರ್ಟು ಇಲ್ಲವೆ ಅದಕ್ಕೆ ಆಧೀನವಾದ ಕೊರ್ಟು ಇಲ್ಲವೆ ಎಲ್ಲಿ ಇಂತಹ ಅರ್ಜಿಯು ಮಾಡಲ್ಪಟ್ಟಿಲ್ಲವೊ ಅಲ್ಲಿ ಅಂತಹ ಅರ್ಜಿಯನ್ನು ಸ್ವೀಕರಿಸಲು ಅಧಿಕಾರ ಕ್ಷೇತ್ರ ಇರುವ ಹಾಯ ಕೋರ್ಟು ಎಂದು ಅರ್ಥವಾಗುವುದು.

ಆದರೆ, ಕ ಭಾಗದ ರಾಜ್ಯಗಳ ಸಂದರ್ಭದಲ್ಲಿ "ಹಾಯ ಕೋರ್ಟು" ಎಂದರೆ

(ಅ) ಅಜಮೀರ ಮತ್ತು ವಿಂಧ್ಯಪ್ರದೇಶದ ಸಂಬಂಧವಾಗಿ ಅಲಾಹಾಬಾದದಲ್ಲಿಯ ಹಾಯಕೋರ್ಟು,

(ಬ) ಭೋಪಾಳದ ಸಂಬಂಧವಾಗಿ ನಾಗಪೂರದಲ್ಲಿಯ ಹಾಯ ಕೋರ್ಟು,

(ಕ) ಬಿಲಾಸಪೂರ, ದಿಲ್ಲಿ, ಮತ್ತು ಹಿಮಾಚಲ ಪ್ರದೇಶದ ಸಂಬಂಧವಾಗಿ ಪಂಜಾಬದ ಹಾಯಕೋರ್ಟು,

(ಡ) ಕೊಡಗಿನ ಸಂಬಂಧವಾಗಿ ಮೈಸೂರಿನ ಹಾಯಕೋರ್ಟು,

(ಇ) ಕಚ್ಛದ ಸಂಬಂಧವಾಗಿ ಮುಂಬಯಿಯಲ್ಲಿಯ ಹಾಯ ಕೋರ್ಟು,

(ಫ) ಮಣಿಪೂರ ಮತ್ತು ತ್ರಿಪ್ಪುರಾದ ಸಂಬಂಧವಾಗಿ ಆಸಾಮದ ಹಾಯಕೋರ್ಟು, ಮತ್ತು

(ಗ) ಅಂದಮಾನ ಮತ್ತು ನಿಕೋಬಾರ ದ್ವೀಪಗಳ ಸಂಬಂಧವಾಗಿ ಕಲಕತ್ತೆಯಲ್ಲಿಯ ಹಾಯಕೋರ್ಟು.

**ವಿವೇಚನೆ :**

ಬೋರ್ಡು ಮಾಡಿದ ಆಜ್ಞೆಗಳಲ್ಲಿ ಉದ್ಭೂತವಾದ ಕಾಯಿದೆಯ ಪ್ರಶ್ನೆಗಳನ್ನು ಹಾಯಕೋರ್ಟಿಗೆ ನಿವೇದಿಸಲಿಕ್ಕೆ ಈ ಕಲಮು ಅನುಕೂಲತೆ ಒದಗಿಸುವುದು. ಕಾಯಿದೆಯಲ್ಲಿಯ ಯಾವುದೊಂದು ಶಬ್ದ ಇಲ್ಲವೆ ಪದ ಇದರ ಅರ್ಥ-ವಿವರಣೆಯು ವಾದಕ್ಕೆ ಬಿದ್ದರೆ ಅದು ಕಾಯಿದೆಯ ಪ್ರಶ್ನೆಯೆಂದಾಗುವುದು. ವಾರಸಾಕರದ ಅಧಿಕಾರಿಗಳು ಪ್ರಾಸಂಗಿಕ ಸಂಗತಿಗಳನ್ನು ಅನುಲಕ್ಷಿಸಿ ನಿರ್ಣಯ ತೆಗೆದುಕೊಂಡದೋ ಇಲ್ಲವೊ ಇಲ್ಲವೆ ಲಕ್ಷಕ್ಕೆ ತೆಗೆದುಕೊಂಡ ಸಂಗತಿಗಳು ಪ್ರಾಸಂಗಿಕವಾಗಿರುವುವೊ ಇದು ಕಾಯಿದೆಯ ಪ್ರಶ್ನೆ.

ಈ ಕಲಮಿನ ಉಪಕಲಮು (೪) ರ ಪ್ರಕಾರ ಯಾವುದೊಂದು ಕಾಯಿದೆಯ ಪ್ರಶ್ನೆಯನ್ನು ನೇರವಾಗಿ ಸುಪ್ರೀಮ ಕೋರ್ಟಿಗೆ ಒಯ್ಯಲು ಅನುಕೂಲತೆ ಒದಗಿಸಲಾಗಿದೆ. ಆದರೆ ಈ ಪ್ರಶ್ನೆಯು ಸಾಕಷ್ಟು ಮಹತ್ವದ್ದು ಇರಬೇಕು. ಇಲ್ಲವೆ ಬೇರೆ ಬೇರೆ ಹಾಯಕೋರ್ಟುಗಳ ನಿರ್ಣಯಗಳಲ್ಲಿ ಆ ಪ್ರಶ್ನೆಯ ಬಗ್ಗೆ ಭಿನ್ನಾಭಿಪ್ರಾಯವಾಗಿರಬೇಕು.

ಹಾಯಕೋರ್ಟಿಗೆ ನಿವೇದಿಸಲು ೩೦ ದಿವಸದ ಕಾಲಮಿತಿಯಿದೆ.

'ಹಾಯಕೋರ್ಟು' ಅಂದರೆ ಬೇರೆ ಬೇರೆ ಕ್ಷೇತ್ರಗಳಿಗೆ ಬೇರೆ ಬೇರೆ ಹಾಯಕೋರ್ಟ ಎಂದೂ 'ಕ' ಭಾಗದ ರಾಜ್ಯಗಳಿಗೆ ನಿರ್ದಿಷ್ಟಪಡಿಸಿದ ಹಾಯಕೋರ್ಟು ಎಂದೂ ಉಪ ಕಲಮು (೧೦) ರಲ್ಲಿ ಸ್ಪಷ್ಟಪಡಿಸಲಾಗಿದೆ.

ಕಾಯಿದೆಯ ಪ್ರಶ್ನೆಯು ಎದ್ದು ಹಾಯಕೋರ್ಟಿಗೆ ಇಲ್ಲವೆ ಸುಪ್ರೀಮ ಕೋರ್ಟಿಗೆ ಪ್ರಕರಣವು ಒಯ್ಯಲ್ಪಟ್ಟರೂ ಬೋರ್ಡಿನವರು ನಿಶ್ಚಿತ ಗೊಳಿಸಿದಷ್ಟು ವಾರಸಾಕರವನ್ನು ಕೊಡುವುದಕ್ಕೆ ತಡೆಯಲಾಗದು. ಅದನ್ನು ತತ್‌ಕ್ಷಣ ಕೊಡಲೇ ಬೇಕಾಗುವುದು.

**೬೫ ಹಾಯಕೋರ್ಟುಗಳಲ್ಲಿ ಇಬ್ಬರು ಇಲ್ಲವೆ ಹೆಚ್ಚು ನ್ಯಾಯಮೂರ್ತಿಗಳಿಂದ ಪ್ರಕರಣವು ಚೌಕಶಿ ಮಾಡಲ್ಪಡಬೇಕು. ಮತ್ತು ಕೆಲವು ಸಂದರ್ಭಗಳಲ್ಲಿ ಸುಪ್ರೀಮ ಕೋರ್ಟಿಗೆ ಅಪೀಲು ಮಾಡಿಕೊಳ್ಳಬಹುದು.**

(೧) ಕಲಮು ೬೪ ರನ್ವಯವಾಗಿ ಹಾಯಕೋರ್ಟಿಗೆ ಪ್ರಕರಣವು ಮುಂಡಿಸಲ್ಪಟ್ಟಾಗ ಅದು ಇಬ್ಬರು ನ್ಯಾಯಮೂರ್ತಿಗಳಕಿಂತ ಕಡಿಮೆಯಿಲ್ಲದಷ್ಟು ಇರುವ ನ್ಯಾಯಮೂರ್ತಿಗಳ ನ್ಯಾಯಾಲಯದಲ್ಲಿ ಚೌಕಶಿ ಮಾಡಲ್ಪಡಬೇಕು. ಮತ್ತು ಇಂತಹ ನ್ಯಾಯಮೂರ್ತಿಗಳ ಇಲ್ಲವೆ ಅವರಲ್ಲಿಯ ಬಹುಸಂಖ್ಯಾಕರ (ಹಾಗೆ ಇದ್ದರೆ) ಅಭಿಮತದನುಸಾರವಾಗಿ ಅದು ನಿರ್ಣಯಿಸಲ್ಪಡಬೇಕು:

ಆದರೆ, ಎಲ್ಲಿ ಇಂತಹ ಬಹುಸಂಖ್ಯಾಕರು ಇರುವುದಿಲ್ಲವೊ ಅಲ್ಲಿ ನ್ಯಾಯಮೂರ್ತಿಗಳು ಕಾಯಿದೆಯ ಯಾವ ಮುದ್ದೆಯ ಬಗ್ಗೆ ತಾವು ಭಿನ್ನಾಭಿಪ್ರಾಯದವರು ಆಗಿರುವರು ಎಂಬುದನ್ನು ಹೇಳಬೇಕು, ಮತ್ತು ಆ ಒಂದು ಮುದ್ದೆಯ ಮೇಲೆ ಮಾತ್ರ ಅದೇ ಹಾಯಕೋರ್ಟಿನ ಒಬ್ಬರು ಇಲ್ಲವೆ ಹೆಚ್ಚು ಬೇರೆ ನ್ಯಾಯಮೂರ್ತಿಗಳಿಂದ ಚೌಕಶಿ ಮಾಡಲ್ಪಡಬೇಕು. ಮತ್ತು ಇಂತಹ ಮುದ್ದೆಯು ಮೊಟ್ಟಮೊದಲು ಪ್ರಕರಣವನ್ನು ಚೌಕಶಿ ಮಾಡಿದವರನ್ನು ಒಳಗೊಂಡು ಒಟ್ಟಿನಲ್ಲಿ ಆ ಮುದ್ದೆಯು ಬಗ್ಗೆ ಬಹುಸಂಖ್ಯಾಕ ನ್ಯಾಯ ಮೂರ್ತಿಗಳ ಅಭಿಪ್ರಾಯವು ಏನಾಗುವುದೋ ಆ ಪ್ರಕಾರ ನಿರ್ಣಯಿಸಲ್ಪಡಬೇಕು.

(೨) ಕಲಮು ೬೪ ರನ್ವಯವಾಗಿ ಹಾಯಕೋರ್ಟಿಗೆ ಮುಂಡಿಸಲಾದ ಪ್ರಕರಣದ ಮೇಲೆ ಕೊಡಲಾದ ಯಾವುದೇ ನಿರ್ಣಯದ ಮೇಲೆ ಅದು ಸುಪ್ರೀಮ ಕೋರ್ಟಿಗೆ ಹೋಗಲು ಯೋಗ್ಯವಾಗಿದೆಯೆಂದು ಹಾಯಕೋರ್ಟು ಶಿಫಾರಸು ಮಾಡಿದರೆ ಸುಪ್ರೀಮ ಕೋರ್ಟಿಗೆ ಅಪೀಲು ಮಾಡಿಕೊಳ್ಳಬಹುದು.

(೩) ಹಾಯಕೋರ್ಟಿನ ನಿರ್ಣಯಗಳ ಮೇಲೆ ಸುಪ್ರೀಮ ಕೋರ್ಟಿಗೆ ಸಾಮಾನ್ಯವಾಗಿ ಅಪೀಲು ಮಾಡಲು ಬರುವಂತೆ ಈ ಕಲಮಿನ ಅನ್ವಯವಾಗಿ

ರುವ ಅಪೀಲುಗಳಿಗೂ ಅದೇ ರೀತಿಯಲ್ಲಿ ಶಕ್ಯವಿದ್ದ ಮಟ್ಟಿಗೆ ಸುಪ್ರೀಮು ಕೋರ್ಟಿಗೆ ಮಾಡಬಹುದಾದ ಅಪೀಲುಗಳ ಸಂಬಂಧವಾಗಿರುವ ಸಿವಿಲ ಪ್ರೊಸೀಜರ (೧೯೦೮ ರ v) ಕೋಡದ ಕಕ್ಷೆಗಳು ಅನ್ವಯಿಸುವವು.

ಆದರೆ, ಕಲಮು ೬೪ ರ ಉಪಕಲಮು ೭ ರ ಕಕ್ಷೆಗಳಿಗೆ ಈ ಉಪ ಕಲಮಿನಲ್ಲಿ ಹೇಳಿದ ಯಾವುದೂ ಬಾಧಿಸುತ್ತದೆಂದು ಗಣಿಸಲ್ಪಡಲಾಗದು.

ಮತ್ತೂ ಆದರೆ, ಸುಪ್ರೀಮು ಕೋರ್ಟಿನಿಂದ ಯಾವುದೇ ನೆಚ್ಚದ ವಿಷಯ ವಾಗಿ ಮಾಡಲಾದ ಆಜ್ಞೆಯನ್ನು ಜಾರಿ ಮಾಡುವುದರ ಸಲುವಾಗಿ ಮಾಡಿ ಕೊಂಡ ಅರ್ಜಿಯನ್ನು ಹಾಯಕೋರ್ಟು ತನ್ನ ಅಧೀನದಲ್ಲಿದ್ದ ಬೇರೆ ಯಾವುದೇ ಕೋರ್ಟಿಗೆ ಅಮಲ ಬಜಾವಣೆಗಾಗಿ ಕಳಿಸಬಹುದು.

(೪) ಎಲ್ಲಿ ಹಾಯಕೋರ್ಟಿನ ನಿರ್ಣಯವು ಭಿನ್ನಭಿಪ್ರಾಯವುಳ್ಳದ್ದು ಇದೆ, ಇಲ್ಲವೆ ಈ ಕಲಮಿನನ್ವಯವಾಗಿ ಅಪೀಲಿಗೆಂದು ಕಾದಿಡಲ್ಪಟ್ಟಿದೆ, ಅಲ್ಲಿ ಸುಪ್ರೀಮ ಕೋರ್ಟಿನ ಆಜ್ಞೆಯನ್ನು ಕಲಮು ೬೪ ರ ಉಪಕಲಮು (೭) ರಲ್ಲಿ ಅನುಕೂಲಿಸಿದ ರೀತಿಯಲ್ಲಿ ಪರಿಣಾಮಕಾರಿಯಾಗುವಂತೆ ಮಾಡಬೇಕು.

**ವಿವೇಚನೆ :**

ಕಲಮು ೬೪ ರಲ್ಲಿ ಹೇಳಿದ ಮಾತನ್ನು ಮುಂದುವರಿಸಿ ೬೫ ರಲ್ಲಿ ಹೇಳಲಾಗಿದೆ. ಅಪೀಲುಗಳ ಸಂಬಂಧವಾಗಿ ಸಿವಿಲ ಪ್ರೊಸೀಜರ ಕೋಡದಲ್ಲಿಯ ಕಕ್ಷೆಗಳು ಈ ಕಾಯಿದೆಯನ್ವವಾಗಿರುವ ಅಪೀಲುಗಳಿಗೂ ಅನ್ವಯಿಸುವುವು, ಎಂದು ಹೇಳಲಾಗಿದೆ. ಈ ಸಾಮಾನ್ಯ ಸದರಿನಲ್ಲಿ ಆ ರೀತಿಯಲ್ಲಿಯೆ ಅಪೀಲುಗಳನ್ನು ಮಾಡಬೇಕು, ಎಂದು ಸೂಚಿಸುತ್ತದೆ. ಅಂದರೆ ಈ ಕಾಯಿದೆಯಿಂದ ಹಳೆಯ ಕಾಯಿದೆಯ ರೀತಿಯನ್ನು ಬದ ಲಿಸಬೇಕಾಗಿಲ್ಲವೆಂದು ಹೇಳಿದ ಹಾಗಾಯಿತು.

ಆದರೂ ಈ ಕಾಯಿದೆಯನ್ವಯವಾಗಿ ಬರುವ ಪ್ರಕರಣಗಾಗಿ ಚೌಕಶಿಯನ್ನು ಇಬ್ಬರು ಇಲ್ಲವೆ ಹೆಚ್ಚು ನ್ಯಾಯಮೂರ್ತಿಗಳು ಕೂಡಿ ಮಾಡಬೇಕೆಂದು ಹೇಳಿದೆ. ಸುಪ್ರೀಮ ಕೋರ್ಟಿಗೆ ಯಾವುದೊಂದು ವಿಷಯವು ಹೋಗಲಿಕ್ಕೆ ಯೋಗ್ಯವಿದೆ ಯೆಂದು ಹಾಯಕೋರ್ಟು ಶಿಫಾರಸು ಮಾಡಿದರೆ ಹಾಯಕೋರ್ಟಿನ ನಿರ್ಣಯದ ಮೇಲೆ ಸುಪ್ರೀಮ ಕೋರ್ಟಿಗೆ ಅಪೀಲು ಮಾಡಬಹುದು.

**೬೬ ಹಾಯಕೋರ್ಟಿಗೆ ನಿವೇದಿಸಿದೆಯೆಂದು ಪ್ರಾತಿನಿಧ್ಯ ದಯಪಾಲಿಸಲು ವಿಲಂಬ ವಾಗಬಾರದು.**

ಕಲಮು ೬೪ ರನ್ವಯವಾಗಿ ಯಾವುದೊಂದು ವಿಷಯದ ಬಗ್ಗೆ ಹಾಯ ಕೋರ್ಟಿಗೆ ನಿವೇದಿಸಲಾಗಿದೆಯೆಂಬ ಕಾರಣಕ್ಕಾಗಿ ಪ್ರಾತಿನಿಧ್ಯ ದಯಪಾಲಿ ಸಲು ಅರ್ಜಿಯನ್ನು ಮಾಡಿಕೊಂಡಿರುವಾಗ ಅದನ್ನು ದಯಪಾಲಿಸಲು ವಿಲಂಬ ಮಾಡಕೂಡದು.

**ವಿವೇಚನೆ:**

ಹಾಯಕೋರ್ಟಿಗೆ ಯಾವುದೊಂದು ವಿಷಯದ ಬಗ್ಗೆ ನಿವೇದಿಸಲಾಗಿದೆಯೆಂದು ಕಾರಣ ತೋರಿಸಿ ಪ್ರಾತಿನಿಧ್ಯ ದಯಪಾಲಿಸುವುದಕ್ಕಾಗಿ ಮಾಡಿಕೊಂಡ ಅರ್ಜಿಯ ಬಗ್ಗೆ ಆಜ್ಞೆಕೊಡುವುದನ್ನು ತಡೆಯಲಾಗದು. ಹಾಗೆ .ತಡೆಯುವುದರಿಂದ ಮೃತನ ಆಸ್ತಿಯ ಬಗ್ಗೆ ಹಾನಿಯಾಗುವ ಸಂಭವವಿರುವುದು. ಹಾಯಕೋರ್ಟಿಗೆ ನಿವೇದಿಸಿದ ಪ್ರಶ್ನೆಯು ಬೇಕಾದಾಗ ನಿರ್ಣಯವಾಗಲಿ. ಪ್ರಾತಿನಿಧ್ಯಕ್ಕಾಗಿ ಮಾಡಿಕೊಂಡ ಅರ್ಜಿಯನ್ನು ತಡೆಯದೆ ಪ್ರಾತಿನಿಧ್ಯ ದಯಪಾಲಿಸಬೇಕು ಎಂದು ಈ ಕಲಮು ಹೇಳುತ್ತದೆ.

**೬೭ ವಾರಸಾಕರ ಕೊಟ್ಟ ಬಗ್ಗೆ ಮತ್ತು ಕೊಡದೆ ಇದ್ದ ಬಗ್ಗೆ, ಕೊಟ್ಟ ದಂಡದ ಬಗ್ಗೆ ಸರ್ಟಿಫಿಕೇಟು.**

(೧) ಕಲಮು ೬೧ ರ ಉಪಕಲಮು (೧) ರನ್ವಯವಾಗಿ ನಿಯಂತ್ರಕನಿಂದ ಕೇಳಿಕೊಳ್ಳಲಾದ ಮೂಲಕ ಲೆಕ್ಕ ಒಪ್ಪಿಸಲು ಬಾಧ್ಯನಾದವನಿಂದ ಬೆಲೆಕಟ್ಟುವಿಕೆಯು ತಿದ್ದುಪಡಿ ಮಾಡಲ್ಪಟ್ಟಿರುವಾಗ ಇಲ್ಲವೆ ಕಲಮು ೬೪ ರನ್ವಯವಾಗಿ ಬೋರ್ಡಿನಿಂದ ನಿವೇದಿಸಲ್ಪಟ್ಟು ಕೋರ್ಟಿನಿಂದ ಬೆಲೆಕಟ್ಟುವಿಕೆಯು ಹೆಚ್ಚಿಸಲ್ಪಟ್ಟಿರುವಾಗ ಮತ್ತು ಯಾವುದೇ ಸಂದರ್ಭದಲ್ಲಿ ಮೂಲತಃ ಕಟ್ಟಿದ ಬೆಲೆಯು ತೀರ ಕಡಿಮೆಯಾಗಿರುವುದೆಂದು ಕಂಡು ಬಂದಿರುವಾಗ ತಿದ್ದುಪಡಿ ಮಾಡಿದ ಇಲ್ಲವೆ ಹೆಚ್ಚಿದ ಇಲ್ಲವೆ ಕಂಡುಹಿಡಿದ ಎರಡು ತಿಂಗಳಲ್ಲಿ ಆ ವ್ಯಕ್ತಿಯು ಆ ಆಸ್ತಿಯ ವಿಷಯವಾಗಿ ತಿದ್ದುಪಡಿ ಮಾಡಿದ ಇಲ್ಲವೆ ಹೆಚ್ಚಿಗೆ ಮಾಡಿದ ಇಲ್ಲವೆ ಪೂರ್ಣ ಬೆಲೆಯಷ್ಟು ಆಗಿರುವ ಹಣಕ್ಕೆ ಕಡಿಮೆಯಾಗಿರುವ ವಾರಸಾರವನ್ನು ಕೊಡಬೇಕು. ಮತ್ತು ಆ ನಂತರ ನಿಯಂತ್ರಕನು ಆ ಬಗ್ಗೆ ಅವನಿಗೆ ಸರ್ಟಿಫಿಕೇಟನ್ನು ಕೊಡಬೇಕು.

(೨) ಕಲಮು ೬೪ ರನ್ವಯವಾಗಿ ಬೋರ್ಡಿನ ನಿವೇದನೆಯ ಮೂಲಕ ಕೋರ್ಟಿನಿಂದ ಬೆಲೆಕಟ್ಟುವಿಕೆಯು ಕಡಿಮೆ ಮಾಡಲ್ಪಟ್ಟಿರುವಾಗ ಲೆಕ್ಕ ಒಪ್ಪಿಸಲು ಬಾಧ್ಯನಾದವನು ಕೊಟ್ಟಿದ್ದ ಯಾವುದೇ ಹೆಚ್ಚಿನ ಕರವನ್ನು ನಿಯಂತ್ರಕನು ತಾನು ಆಜ್ಞೆಯನ್ನು ಸ್ವೀಕರಿಸಿದ ತಾರೀಖಿನಿಂದ ಎರಡು ತಿಂಗಳ ಒಳಗೆ ಆ ವ್ಯಕ್ತಿಗೆ ಮರಳಿ ಕೊಡಬೇಕು. ಮತ್ತು ಆ ಆಸ್ತಿಯ ಬಗ್ಗೆ ಕೊಡಬೇಕಾಗಿದ್ದ ಪೂರ್ಣ ವಾರಸಾಕರವು ಪೂರ್ತಿಯಾಗಿ ಕೊಡಲ್ಪಟ್ಟಿದೆಯೆಂಬ ಸರ್ಟಿಫಿಕೇಟನ್ನು ಕೊಡಬೇಕು.

(೩) ಯಾವುದೇ ಸಂದರ್ಭದಲ್ಲಿ, ಕಲಮು ೫೩ ಇಲ್ಲವೆ ೫೭ ರ ವಾಕ್ಯಾವಳಿ (ಅ) ದ ಪ್ರಕಾರ ಕೊಡಬೇಕಾಗಿದ್ದ ಲೆಕ್ಕವು ಕೊಡಲ್ಪಡದೆ ಇರುವಾಗ

ಕಲಮು ೬೧ ರ ಉಪಕಲಮು (೨) ರನ್ವಯವಾಗಿ ನಿಯಂತ್ರಕನಿಂದ ಸಿದ್ಧ ಮಾಡಲ್ಪಟ್ಟ ಲೆಕ್ಕವನ್ನು ಒಪ್ಪಿಕೊಳ್ಳಲು ಆಹ್ವಾನಿಸಲ್ಪಟ್ಟ ವ್ಯಕ್ತಿಯು, ಒಪ್ಪಿಕೊಂಡ ಎರಡು ತಿಂಗಳ ಒಳಗೆ ಇಲ್ಲವೆ ಸಂದರ್ಭಾನುಸಾರವಾಗಿ ಕಲಮು ೬೪ರ ಉಪಕಲಮು (೧)ರನ್ವಯವಾಗಿ ಮಾಡಿದ ನಿವೇದನೆಯ ಕೊನೆಯ ನಿರ್ಣಯವಾದಂದಿನಿಂದ ಎರಡು ತಿಂಗಳ ಒಳಗೆ, ಆ ಆಸ್ತಿಯ ಬಗ್ಗೆ ಕೊಡಬೇಕಾದ ಪೂರ್ಣ ಕರವನ್ನು ಕೊಡಬೇಕು. ಮತ್ತು ನಿಯಂತ್ರಕನು ಆ ಬಗ್ಗೆ ಅವನಿಗೆ ಒಂದು ಸರ್ಟಿಫಿಕೇಟು ಕೊಡಬೇಕು.

(೪) ಉಪಕಲಮು (೧) ರ ಇಲ್ಲವೆ ಉಪಕಲಮು (೩) ರನ್ವಯವಾಗಿ ಕೊಡಬೇಕಾಗಿದ್ದ ವಾರಸಾಕರದ ಹಣವನ್ನು ಲೆಕ್ಕ ಒಪ್ಪಿಸಲು ಬಾಧ್ಯನಾದವನು ಅದರಲ್ಲಿ ನಿರ್ದಿಷ್ಟಪಡಿಸಿದ ಕಾಲಾವಧಿಯಲ್ಲಿ ಕೊಡದಿದ್ದರೆ, ಅವನು ಒಂದು ಸಾವಿರ ರೂಪಾಯಿಯ ದಂಡವನ್ನು ಇಲ್ಲವೆ ಬಾಕಿ ಉಳಿದಿರುವ ವಾರಸಾಕರದ ಹಣದ ಎರಡರಷ್ಟು ದಂಡವನ್ನು ನಿಯಂತ್ರಕನು ಆದೇಶಿಸುವಂತೆ ಕೊಡಲು ಪಾತ್ರನಾಗುವನು.

ಆದರೆ, ಯಾವುದೇ ವಿಶಿಷ್ಟ ಪ್ರಕರಣದಲ್ಲಿ ನಿಯಂತ್ರಕನು ದಂಡವನ್ನು ಕಡಿಮೆ ಮಾಡಬಹುದು.

(೫) ಒಂದು ಮರಣದ ಮೂಲಕ ಇಳಿದು ಒರುವ ಯಾವುದೇ ಆಸ್ತಿಯ ವಿಷಯವಾಗಿ ವಾರಸಾಕರಕ್ಕಾಗಿ ಲೆಕ್ಕ ಒಪ್ಪಿಸಲು ಬಾಧ್ಯನಾದವನು ಯಾವುದೇ ಕಾಲಕ್ಕೆ ನಿಯಂತ್ರಕನಿಗೆ ಅರ್ಜಿ ಮಾಡಿಕೊಂಡಿರುವಾಗ, ಮತ್ತು ಇಂತಹ ಮರಣದ ಮೂಲಕ ಇಳಿದು ಬಂದಿರುವ ಎಲ್ಲ ಆಸ್ತಿಯ ಬಗ್ಗೆ ತನಗೆ ತಿಳಿದ ಮತ್ತು ತಾನು ನಂಬಿದ ಸಂಗತಿಗಳ ಮತ್ತು ಆ ಆಸ್ತಿಗೆ ಬಾಧ್ಯರಾದ ವ್ಯಕ್ತಿಗಳ ವಿವರವುಳ್ಳ ಹೇಳಿಕೆಯನ್ನು ಕೊಟ್ಟು ಮತ್ತು ಅದು ಸರಿಯಾಗಿದೆಯೆಂದು ಪ್ರಮಾಣ ಮಾಡಿರುವಾಗ ನಿಯಂತ್ರಕನು ಆ ಆಸ್ತಿಯ ಬಗ್ಗೆ ಕೊಡಬೇಕಾದ ವಾರಸಾಕರವನ್ನು ನಿಶ್ಚಿತಗೊಳಿಸಬಹುದು. ಮತ್ತು ನಿಶ್ಚಿತಗೊಳಿಸಿದ ವಾರಸಾಕರವು ಕೊಡಲ್ಪಟ್ಟ ಮೇಲೆ ನಿಯಂತ್ರಕನು ಆ ಬಗ್ಗೆ ಒಂದು ಸರ್ಟಿಫಿಕೇಟವನ್ನು ಅವನಿಗೆ ಕೊಡಬೇಕು.

**ವಿವೇಚನೆ :**

ವಾರಸಾಕರ ಕೊಡಲು ಯೋಗ್ಯವಾಗಿರುವಷ್ಟು ದೊಡ್ಡ ಆಸ್ತಿಯಿದ್ದ ಮಾಲಕನು ಮರಣ ಹೊಂದಿದ ಕೂಡಲೆ, ವಾರಸಾಕರಕ್ಕಾಗಿ ಲೆಕ್ಕ ಒಪ್ಪಿಸಲು ಬಾಧ್ಯನಾದವನು ಕಲಮು ೫೩ ಉಪಕಲಮು (೩) ರನ್ವಯವಾಗಿ ಮೊದಲು ಲೆಕ್ಕವನ್ನು ಸಾದರಪಡಿಸುವನು. ಮತ್ತು ಆ ಲೆಕ್ಕದಲ್ಲಿ ಸಮಾವೇಶವಾದ ಆಸ್ತಿಯ ಬಗ್ಗೆ ವಾರಸಾಕರ

## ಭಾಗ ಏಳು

## ವಾರಸಾಕರದ ವಸೂಲಿ

**೫೧ ವಾರಸಾಕರ ವಸೂಲಿಯ ಪದ್ಧತಿ**

ಬೋರ್ಡು ಗೊತ್ತುಮಾಡಬಹುದಾದಂತಹ ರೀತಿಯಲ್ಲಿ ಮತ್ತು ಅಂತಹ ಸಾಧನೆಗಳಿಂದ ವಾರಸಾಕರವು ವಸೂಲಿ ಮಾಡಲ್ಪಡಬಹುದು.

**ವಿವೇಚನೆ:**

ವಾರಸಾಕರವನ್ನು ವಸೂಲಿ ಮಾಡಲು ಬೋರ್ಡು ನಿಯಮಗಳನ್ನು ಮಾಡಲು ಈ ಕಲಮು ಸೂಚಿಸುವುದು. ಆ ನಿಯಮಗಳ ಪ್ರಕಾರ ವಸೂಲಿಯ ಸಾಧನಗಳು ಮತ್ತು ನೀತಿಗಳು ನಿರ್ಣಯಿತವಾಗುವುವು.

**೫೨ ವಾರಸಾಕರವನ್ನು ಗೊತ್ತುಮಾಡಿದ ಸರಕಾರಿ ಆಶ್ವಾಸನ ಪತ್ರಗಳ ರೂಪದಲ್ಲಿ ಸ್ವೀಕರಿಸಬಹುದು.**

ವಾರಸಾಕರವನ್ನು ಕೊಡುವಾಗ ತನಗೆ ಸರಿ ಕಂಡಂತಹ ಕರಾರುಗಳ ನ್ವಯವಾಗಿ ಬೋರ್ಡು ಸರಕಾರಿ ಆಶ್ವಾಸನ ಪತ್ರಗಳನ್ನು ಸ್ವೀಕರಿಸಬೇಕೆಂದು ಗೊತ್ತುಮಾಡಬಹುದು.

**ವಿವೇಚನೆ:**

ವಾರಸಾಕರವನ್ನು ಯಾವ ರೀತಿಯಲ್ಲಿ ಯಾವ ರೂಪದಲ್ಲಿ ಕೊಡಬೇಕೆಂಬ ಬಗ್ಗೆ ಬೋರ್ಡು ನಿರ್ದಿಷ್ಟಪಡಿಸಬಹುದು ಎಂದು ಈ ಕಲಮು ಹೇಳುತ್ತದೆ. ಸರಕಾರದ ಆಶ್ವಾಸನ ಪತ್ರಗಳನ್ನು ಸ್ವೀಕರಿಸಬಹುದು ಎಂದು ಬೋರ್ಡು ಗೊತ್ತು ಮಾಡಬಹುದು. "ಸರಕಾರ ಆಶ್ವಾಸನ ಪತ್ರ" ಈ ಶಬ್ದದ ವ್ಯಾಖ್ಯೆಯನ್ನು ೧೮೯೭ರ ಜನರಲ್ ಕ್ಲಾಜಿಸ್ ಆ್ಯಕ್ಟದಲ್ಲಿ ಮಾಡಲಾಗಿದೆ. ಅದು ಇಂತಿದೆ:

"ಸರಕಾರೀ ಆಶ್ವಾಸನ ಪತ್ರಗಳು" ಎಂದರೆ ಕೇಂದ್ರ ಸರಕಾರದ ಇಲ್ಲವೆ ಯಾವುದೇ ರಾಜ್ಯ ಸರಕಾರಗಳ ಆಶ್ವಾಸನ ಪತ್ರಗಳು, ಆದರೆ ಸಂವಿಧಾನವು ಜಾರಿಯಲ್ಲಿ ಬರುವ ಮೊದಲು ಮಾಡಲಾದ ಯಾವುದೇ ಕಾಯಿದೆ ಇಲ್ಲವೆ ಕ್ರಮದಲ್ಲಿ ಹೇಳಿದ ಯಾವುದೇ 'ಬ' ಭಾಗದ ರಾಜ್ಯದ ಸರಕಾರದ ಆಶ್ವಾಸನ ಪತ್ರಗಳನ್ನು ಒಳಗೊಳ್ಳುವುದಿಲ್ಲ."

೫೩ ಲೆಕ್ಕ ಒಪ್ಪಿಸಲು ಬಾಧ್ಯರಾದ ವ್ಯಕ್ತಿಗಳು ಮತ್ತು ಅವರ ಕರ್ತವ್ಯಗಳು ಮತ್ತು ಹೊಣೆಗಾರಿಕೆಗಳು.

(೧) ಮೃತನ ಮರಣದ ಮೂಲಕ ಎಲ್ಲಿ ಯಾವುದೇ ಆಸ್ತಿಯು ಇಳಿದು ಬಂದಿರುವುದು ಅಲ್ಲಿ—

(ಅ) ಸ್ವಾಧೀನತೆಯಲ್ಲಿಯ ಲಾಭದಾಯಕ ಯಾವುದೇ ಹಿತ ಸಂಬಂಧಕ್ಕಾಗಿ ಹಾಗೆ ಆಸ್ತಿ ಯಾರಿಗೆ ಇಳಿದು ಬರುವುದೋ ಅಂತಹ ಪ್ರತಿಯೊಬ್ಬ ನ್ಯಾಯಿಕ ಪ್ರತಿನಿಧಿ ಇಲ್ಲವೆ ಹಾಗೆ ಇಳಿದು ಬರುವ ಆಸ್ತಿಯು ಯಾರಲ್ಲಿ ಯಾವುದೇ ಕಾಲಕ್ಕೆ ಯಾವುದೇ ಹಿತಸಂಬಂಧವು ಅಂತರ್ಗತ ವಾಗಿದ್ದಿತೋ ಅಂತಹ ಪ್ರತಿಯೊಬ್ಬ ನ್ಯಾಯಿಕ ಪ್ರತಿನಿಧಿ.

(ಬ) ಹಾಗೆ ಇಳಿದು ಬರುವ ಆಸ್ತಿಯಲ್ಲಿ ಯಾವುದೇ ಹಿತ ಸಂಬಂಧವು ಯಾವುದೇ ಕಾಲಕ್ಕೆ ಯಾರಲ್ಲಿ ಅಂತರ್ಗತವಾಗಿರುವುದೋ ಇಲ್ಲವೆ ಅದರ ಸಂಚಾಲಕತ್ವವು ಯಾರಲ್ಲಿ ಅಂತರ್ಗತವಾಗಿರುವುದೋ ಅಂತಹ ಪ್ರತಿಯೊಬ್ಬ ಧರ್ಮದರ್ಶಿ, ಪಾಲಕ, ಸಮಿತಿ ಇಲ್ಲವೆ ಬೇರೆ ವ್ಯಕ್ತಿ, ಮತ್ತು.

(ಕ) ಹಾಗೆ ಇಳಿದು ಬರುವ ಆಸ್ತಿಯಲ್ಲಿಯ ಯಾವುದೇ ಹಿತ ಸಂಬಂಧವು ಹಸ್ತಾಂತರದಿಂದ ಇಲ್ಲವೆ ಬೇರೆ ರೀತಿಯಿಂದ ಬಂದ ಹಕ್ಕಿನಿಂದ ಸ್ವಾಧೀನತೆಯಲ್ಲಿ ಯಾರಲ್ಲಿ ಅಂತರ್ಗತವಾಗಿರುವುದೋ ಅಂತಹ ಪ್ರತಿಯೊಬ್ಬ ವ್ಯಕ್ತಿಯು ಮರಣದ ಮೂಲಕ ಇಳಿದು ಬರುವ ಆಸ್ತಿಯ ಮೇಲಿನ ಎಲ್ಲ ವಾರಸಾಕರಕ್ಕಾಗಿ ಲೆಕ್ಕ ಒಪ್ಪಿಸಲು ಬಾಧ್ಯನಾಗುವನು. ಆದರೆ ಮೃತನ ಸೊತ್ತುಗಳಕಿಂತ ಯಾವುದನ್ನು ಅವನು ಪ್ರತ್ಯಕ್ಷವಾಗಿ ಪಡೆದಿರುವನೊ ಇಲ್ಲವೆ ಅವನ ಅಲಕ್ಷ್ಯ ಇಲ್ಲವೆ ದುರ್ಲಕ್ಷವಿಲ್ಲದಿದ್ದರೆ ಅವನು ಪಡೆಯಬಹುದಾಗಿದ್ದಿತೋ ಅಂತಹ ಹೆಚ್ಚಾಗಿ ಇರುವ ಯಾವುದೇ ಆಸ್ತಿಯ ವಿಷಯವಾಗಿ ಲೆಕ್ಕ ಒಪ್ಪಿಸಲು ಪಾತ್ರನಾಗಲಾರನು.

ಆದರೆ ಆಸ್ತಿಯ ಸಂಚಾಲಕತ್ವದಲ್ಲಿ ಮತ್ತೊಬ್ಬನಿಗಾಗಿ ಕೇವಲ ಏಜೆಂಟನೆಂದು ಇಲ್ಲವೆ ಬೇಲಿಫನೆಂದು ಯಾರು ವರ್ತಿಸುವರೋ ಆ ವ್ಯಕ್ತಿಯನ್ನು ವಾರಸಾಕರಕ್ಕಾಗಿ ಲೆಕ್ಕ ಒಪ್ಪಿಸಲು ಹೊಣೆಗಾರನನ್ನಾಗಿ ಮಾಡಲು ಈ ಕಲಮಿನಲ್ಲಿ ಯಾವುದೂ ಸಮರ್ಥವಾಗಿಲ್ಲ.

(೨) ಉಪಕಲಮು (೧) ರಲ್ಲಿ ಏನೇ ಹೇಳಲಾಗಿದ್ದರೂ ಮೃತನ ಯಾವುದೇ ಸೊತ್ತುಗಳು ಇನ್ನೊಬ್ಬನ ಕೈಯಲ್ಲಿ ಪ್ರತಿಕೂಲ ಸ್ವಾಧೀನತೆಯಲ್ಲಿವೆ

ಯೆಂದು ನಿಯಂತ್ರಕನಿಗೆ ಸಮಾಧಾನವಾಗುವಂತೆ ಕಾಯಿದೆ ಪ್ರಕಾರ ಉತ್ತರಾಧಿಕಾರಿಯಾದವನು ಸಿದ್ಧಮಾಡಿ ತೋರಿದರೆ, ಅಂತಹ ಯಾವುದೇ ಸೊತ್ತುಗಳ ವಿಷಯವಾಗಿ ಕೊಡಬೇಕಾದ ವಾರಸಾಕರದ ಭಾಗಕ್ಕಾಗಿ ಕಾಯಿದೆಯ ಪ್ರಕಾರ ಉತ್ತರಾಧಿಕಾರಿಯಾದವನು ಲೆಕ್ಕ ಒಪ್ಪಿಸಲು ಪಾತ್ರನಲ್ಲ. ಆದರೆ, ಅಂತಹ ಸೊತ್ತುಗಳ ಸ್ವಾಧೀನತೆಯನ್ನು ಅವನು ತದನಂತರದಲ್ಲಿ ಪಡೆದರೆ, ಮತ್ತು ಎಷ್ಟು ಮಟ್ಟಿಗೆ ಪಡೆಯುವನೋ ಅಷ್ಟರ ಮಟ್ಟಿಗೆ ಲೆಕ್ಕ ಒಪ್ಪಿಸಲು ಪಾತ್ರನಾಗುವನು.

(೩) ಈ ಕಲಮಿನ ಪ್ರಕಾರ ಲೆಕ್ಕ ಒಪ್ಪಿಸಲು ಪಾತ್ರನಾದ ಪ್ರತಿಯೊಬ್ಬ ವ್ಯಕ್ತಿಯು ಮೃತನ ಮರಣದಿಂದ ಆರು ತಿಂಗಳ ಒಳಗೆ ಇಲ್ಲವೆ ನಿಯಂತ್ರಕನು ಅನುಮತಿಸುವಷ್ಟು ತಡೆದ ಕಾಲಾವಧಿಯಲ್ಲಿ ನಿಯಂತ್ರಕನಿಗೆ ವಾರಸಾಕರವನ್ನು ಕೊಡಬೇಕಾಗಿರುವ ಎಲ್ಲ ಆಸ್ತಿಯ ಲೆಕ್ಕವನ್ನು ಕೊಡಬೇಕು. ಮತ್ತು ತನಗೆ ತಿಳಿದ ಮತ್ತು ತಾನು ನಂಬಿದ ಎಲ್ಲ ವಿಷಯಗಳ ಬಗ್ಗೆ ಪ್ರಮಾಣ ಮಾಡಬೇಕು.

(೪) ಲೆಕ್ಕ ಒಪ್ಪಿಸಲು ಪಾತ್ರನಾದವನು ತಾನು ಒಪ್ಪಿಸಿದ ಲೆಕ್ಕದಲ್ಲಿ ಯಾವುದೇ ಆಸ್ತಿಯನ್ನು ಅದರ ಬೆಲೆ ಇಲ್ಲವೆ ಹಣದ ಮೊತ್ತವು ತಿಳಿದಿಲ್ಲವೆಂಬ ಕಾರಣಕ್ಕಾಗಿ ಸಮಾವೇಶ ಮಾಡಿಲ್ಲವೆಂದು ತಿಳಿದಿದ್ದರೆ, ಅಂತಹ ಆಸ್ತಿಯು ಅಸ್ತಿತ್ವದಲ್ಲಿದೆಯೆಂದು, ಆದರೆ ಅದರ ಬೆಲೆಯಾಗಲೀ ಹಣದ ಮೊತ್ತವಾಗಲೀ ತಿಳಿದಿಲ್ಲವೆಂದು, ಅದರ ಬೆಲೆ ಇಲ್ಲವೆ ಹಣದ ಮೊತ್ತವು ನಿಶ್ಚಿತವಾಗಿ ಗೊತ್ತಾದ ಕೂಡಲೆ ಅದರ ಬಗ್ಗೆ ಪೂರಕವಾದ ಲೆಕ್ಕವನ್ನು ಒಪ್ಪಿಸುವುದಾಗಿ ಆಶ್ವಾಸನ ಕೊಡುವುದಾಗಿಯೂ ಹೇಳಬಹುದು. ಮತ್ತು ಇಂತಹ ಆಸ್ತಿಯ ವಿಷಯವಾಗಿ ತಾನು ಪಾತ್ರನಾಗಿರುವ ವಾರಸಾಕರ ಕೊಡಲು ಮತ್ತು ಅದರ ಬಗ್ಗೆ ಹೆಚ್ಚಿನದನ್ನು ಕೊಡಬೇಕಾಗಿ ಬಂದರೆ ಅದನ್ನು ಮೂಲ ಲೆಕ್ಕದಲ್ಲಿ ವಿಶದ ಮಾಡಲಾದ ಆಸ್ತಿಯ ಬಗ್ಗೆ ಕೊಡಬೇಕಾದ ವಾರಸಾಕರವನ್ನು ಕೊಡುವುದಾಗಿ ಆಶ್ವಾಸನ ಕೊಡಬಹುದು.

(೫) ಮೃತನ ಮರಣದ ಮೂಲಕ ಇಳಿದು ಬರುವ ಆಸ್ತಿಯ ವಿಷಯವಾಗಿ ಇಬ್ಬರು ಇಲ್ಲವೆ ಹೆಚ್ಚು ವ್ಯಕ್ತಿಗಳು ಲೆಕ್ಕ ಒಪ್ಪಿಸಲು ಪಾತ್ರರಾಗಿದ್ದರೆ, ಅವರು ಪ್ರತ್ಯೇಕವಾಗಿಯೂ ಮತ್ತು ಜತೆಯಾಗಿಯೂ ಹಾಗೆ ಇಳಿದು ಬರುವ ಆಸ್ತಿಯ ಬಗ್ಗೆ ಆಗುವ ಎಲ್ಲ ವಾರಸಾಕರಕ್ಕಾಗಿ ಲೆಕ್ಕ ಒಪ್ಪಿಸಲು ಪಾತ್ರರಾಗುವರು.

**ವಿವೇಚನೆ:**

ವಾರಸಾಕರಕ್ಕಾಗಿ ಲೆಕ್ಕ ಒಪ್ಪಿಸಲು ಯಾರು ಯಾರು ಎಷ್ಟು ಮಟ್ಟಿಗೆ ಪಾತ್ರರು ಎಂಬುದನ್ನು ಈ ಕಲಮು ವಿಶದ ಮಾಡುತ್ತದೆ. ಲೆಕ್ಕ ಒಪ್ಪಿಸಲು ಹೊಣೆಗಾರರಾಗಿರುವವರು ಮೂರು ವರ್ಗದವರು: (೧) ನ್ಯಾಯಿಕ ಪ್ರತಿನಿಧಿಗಳು (೨) ಧರ್ಮದರ್ಶಿಗಳು, ಪಾಲಕರು ಮುಂತಾದವರು ಮತ್ತು (೩) ಹಸ್ತಾಂತರ ಪಡೆದವರು. ಆದರೆ ಕೇವಲ ಏಜೆಂಟರೆಂದು ಇಲ್ಲವೆ ಬೇಲೀಫರೆಂದು ಕೆಲಸ ಮಾಡುವವರು ಹೊಣೆಗಾರರಲ್ಲ, ಎಂದು ಹೇಳಿದೆ.

ಮೃತನ ಮರಣದ ಸಮಯಕ್ಕೆ ಆಸ್ತಿಯು ಇನ್ನೊಬ್ಬರ ಕೈಯಲ್ಲಿ ಪ್ರತಿಕೂಲ ಸ್ವಾಧೀನತೆಯಲ್ಲಿದ್ದರೆ, ವಾರಸದಾರರು ಹಾಗೆ ನಿಯಂತ್ರಕನಿಗೆ ಸಮಾಧಾನವಾಗುವಂತೆ ತೋರಿದರೆ, ಅಂತಹ ಆಸ್ತಿಯ ಸಂಬಂಧವಾಗಿ ವಾರಸದಾರರು ಆ ಆಸ್ತಿಯ ಸ್ವಾಧೀನತೆ ಪಡೆವ ತನಕ ಲೆಕ್ಕ ಒಪ್ಪಿಸಲು ಪಾತ್ರರಲ್ಲ. ಆಗ ನಿಯಂತ್ರಕನು ಹಾಗೆ ಪ್ರತಿಕೂಲ ಸ್ವಾಧೀನತೆಯುಳ್ಳ ವ್ಯಕ್ತಿಯಿಂದ ಲೆಕ್ಕ ಪಡೆಯುವನು.

ಹೀಗೆ ಲೆಕ್ಕ ಒಪ್ಪಿಸಲು ೬ ತಿಂಗಳ ಕಾಲಾವಧಿ, ಒಂದು ವೇಳೆ ನಿಯಂತ್ರಕನು ಅನುಮತಿಸಿದರೆ ಇನ್ನು ಹೆಚ್ಚಿನ ಕಾಲಾವಧಿಯು ಇದೆ. ಲೆಕ್ಕ ಒಪ್ಪಿಸುವಾಗ ಕೆಲವೊಂದು ಆಸ್ತಿಯ ಮೊತ್ತವಾಗಲೀ ಬೆಲೆಯಾಗಲೀ ತಿಳಿಯದಿದ್ದರೆ ತಿಳಿದಷ್ಟರ ಮಟ್ಟಿಗೆ ಹೇಳಿಕೆಯನ್ನು ಮೊದಲು ಕೊಟ್ಟು ತಿಳಿಯದಿದ್ದರ ಬಗ್ಗೆಯೂ ತಾನು ಅದರ ಬೆಲೆ ತಿಳಿದಿಲ್ಲವೆಂದೂ ತಿಳಿದ ಕೂಡಲೆ ಪೂರಕ ಹೇಳಿಕೆಯನ್ನು ಕೊಡುವುದಾಗಿಯೂ ಮೊದಲಿನ ಹೇಳಿಕೆಯನ್ವಯವಾಗಿ ಮತ್ತು ಪೂರಕ ಹೇಳಿಕೆಯನ್ವಯವಾಗಿ, ವಾರಸಾಕರ ಕೊಡುತ್ತೇನೆಂದು ಆಶ್ವಾಸನವನ್ನೂ ಕೊಡಬೇಕು.

ಒಂದು ಆಸ್ತಿಯ ಬಗ್ಗೆ ಇಬ್ಬರು ಇಲ್ಲವೆ ಹೆಚ್ಚು ಜನರು ಲೆಕ್ಕ ಒಪ್ಪಿಸಲು ಬಾಧ್ಯರಾಗುತ್ತಿದ್ದರೆ, ಅವರು ಪ್ರತ್ಯೇಕವಾಗಿಯೂ ಜತೆಗೂಡಿಯೂ ಬಾಧ್ಯರಾಗುತ್ತಾರೆ.

ಈ ಕಲಮಿನ ವ್ಯಾಪ್ತಿಯು ದೊಡ್ಡದಿದೆ. ಯಾವುದೇ ವ್ಯಕ್ತಿಯು ಎಂದಾದರೂ ಆ ಕರಪಾತ್ರವಾದ ಆಸ್ತಿಯಲ್ಲಿ ಹಿತಸಂಬಂಧವುಳ್ಳವನಾಗಿದ್ದರೆ ಅವನು ಲೆಕ್ಕ ಒಪ್ಪಿಸಲು ಪಾತ್ರನಾಗುವನೆಂದು ಹೇಳಿದೆ. (ಅ)(ಬ)ದಲ್ಲಿ ಹೇಳಲಾದ ವ್ಯಕ್ತಿಗಳಿಗೆ ಇದು ಹೆಚ್ಚಾಗಿ ಅನ್ವಯಿಸುವುದು. ಅಂದರೆ ಅಂತಹ ವ್ಯಕ್ತಿಗಳಿಗೆ ಮೃತನ ಮರಣದ ಕಾಲಕ್ಕೆ ಆಸ್ತಿಗೆ ಸಂಬಂಧವಿಲ್ಲದಿದ್ದರೂ ಅವರು ಲೆಕ್ಕ ಒಪ್ಪಿಸಲು ಬಾಧ್ಯರಾಗುತ್ತಾರೆ.

ಈ ಕಲಮಿನಲ್ಲಿಯ ಬರುವ ನ್ಯಾಯಿಕ ಪ್ರತಿನಿಧಿಯ ವ್ಯಾಖ್ಯೆಯನ್ನು ೨ ನೆಯ ಕಲಮಿನ ಉಪಕಲಮು (೧೨) ರಲ್ಲಿ ಮಾಡಲಾಗಿದೆ. ಈ ಪದವು ಬಹು ವ್ಯಾಪಕ

ವಾಗಿದೆ. ಇದರಲ್ಲಿ ವಾರಸದಾರರು ಮೃತ್ಯುಲೇಖಾಧಿಕಾರಿಗಳು, ಆಡಳಿತಗಾರರು, ಹಿಂದು ಕುಟುಂಬದ ಕರ್ತಾ, ಇವರೆಲ್ಲರೂ ಬರುವರು. ಇವರಲ್ಲಿ ಯಾವನೊಬ್ಬನನ್ನು ಲೆಕ್ಕ ಒಪ್ಪಿಸಲು ಪಾತ್ರನನ್ನಾಗಿ ಮಾಡಬೇಕಾದರೆ ಅವನಲ್ಲಿ ಮೃತನ ಮರಣದ ಮೂಲಕ ಇಳಿದು ಬಂದ ಆಸ್ತಿಯಲ್ಲಿಯ ಹಿತಸಂಬಂಧವು ಯಾವುದೇ ಕಾಲಕ್ಕೆ ಅಂತರ್ಗತವಾಗಿದ್ದಿತೆಂದು ತೋರಬೇಕಾಗುವುದು.

ಈ ಕಲಮಿನ ಉಪಕಲಮು (೧) (ಬ) ದ ಪ್ರಕಾರ ಧರ್ಮದರ್ಶಿಗಳು, ಪಾಲಕರು, ಮತ್ತು ಬೇರೆ ವ್ಯಕ್ತಿಗಳೂ ಬಾಧ್ಯರಾಗುವರು. (ಕ) ದ ಪ್ರಕಾರ ಹಸ್ತಾಂತರ ಪಡೆದ ವ್ಯಕ್ತಿಗಳೂ ಬಾಧ್ಯರಾಗುವರು. ಲೆಕ್ಕ ಒಪ್ಪಿಸುವವರೆಲ್ಲರೂ ಲೆಕ್ಕವು ಸರಿಯಾಗಿದೆಯೆಂದು ಪ್ರಮಾಣ ಪೂರ್ವಕ ಸಾರಿ ಹೇಳಬೇಕಾಗುವುದು.

**೫೪ ಕೆಲ ಸಂದರ್ಭಗಳಲ್ಲಿ, ಲೆಕ್ಕ ಒಪ್ಪಿಸಲು ಬಾಧ್ಯರಾದ ವ್ಯಕ್ತಿಗಳಲ್ಲಿ ಧರ್ಮದರ್ಶಿಗಳೂ ಸಮಾವೇಶವಾಗಬಹುದು.**

(೧) ಸ್ವಾಧೀನತೆಯಲ್ಲಿಯ ಹಿತಸಂಬಂಧವೆಂದು ಪರಿವರ್ತನವಾದ ಮೇಲೆ ಮರಣಕ್ಕೆ ಮುಕ್ತಾಯವಾಗುವ ಹಿತಸಂಬಂಧವು ೧೧ನೆಯ ಕಲಮಿನ ಅರ್ಥದಲ್ಲಿ ಇಡಿಯಾಗಿ ಇಲ್ಲವೆ ಭಾಗವಾಗಿ ವಿನ್ಯಾಸ ಮಾಡಲ್ಪಟ್ಟರೆ ಇಲ್ಲವೆ ಮುಕ್ತಾಯವಾದರೆ, ಆ ಹಿತಸಂಬಂಧವಿದ್ದ ಆಸ್ತಿಯ ಸ್ವಭಾವವು ಏನೇ ಆಗಿದ್ದರೂ ಮರಣದ ಮೂಲಕ ವಾರಸಾಕರ ಕೊಡಲು ಈ ಕೆಳಗಿನ ವ್ಯಕ್ತಿಗಳು ಲೆಕ್ಕ ಒಪ್ಪಿಸಲು ಆ ಕಲಮಿನ ಸತ್ವದ ಪ್ರಕಾರ (ಈ ಕಲಮಿನ ಪ್ರಕಾರ ಆ ಆಸ್ತಿಯ ಸಲುವಾಗಿ ಲೆಕ್ಕ ಒಪ್ಪಿಸಲು ಪಾತ್ರರಾದವರ ಜತೆಗೂಡಿ) ಬಾಧ್ಯರಾಗುತ್ತಾರೆ: ಅವರು ಯಾರಂದರೆ—

(ಅ) ಯಾವುದರನ್ವಯವಾಗಿ ಹಿತಸಂಬಂಧವು ಅಸ್ತಿತ್ವದಲ್ಲಿದ್ದಿತೋ ಆ ನಿವೇಶನವು ಮರಣ ಸಮಯಕ್ಕೆ ಅಸ್ತಿತ್ವದಲ್ಲಿದ್ದರೆ, ಆ ನಿವೇಶನದ ಆ ಕಾಲದ ಧರ್ಮದರ್ಶಿಗಳು; ಮತ್ತು

(ಬ) ಹಾಗೆ ಅಸ್ತಿತ್ವದಲ್ಲಿರದಿದ್ದರೆ, ಆ ನಿವೇಶನದ ಧರ್ಮದರ್ಶಿಗಳೆಂದು ಆ ಹಿಂದೆ ಯಾರು ಆಗಿದ್ದರೋ ಆ ವ್ಯಕ್ತಿಗಳು.

(೨) ಎಲ್ಲಿ:

(ಅ) ಯಾವುದೇ ಆಸ್ತಿಯ ವಿಷಯವಾಗಿ ೧೧ನೆಯ ಕಲಮಿನ ಸತ್ವದ ಪ್ರಕಾರ ವಾರಸಾಕರ ಕೊಡಲು ಒಂದು ನಿವೇಶನದ ಧರ್ಮದರ್ಶಿಗಳು ಲೆಕ್ಕ ಒಪ್ಪಿಸಲು ಬಾಧ್ಯರಾಗುತ್ತಿದ್ದರೋ; ಮತ್ತು

(ಬ) ಆ ಆಸ್ತಿಯು ಇಲ್ಲವೆ ಅದರ ಭಾಗವು ನಿವೇಶನದಲ್ಲಿ ಒಳಗೊಂಡಿರುವುದು ಮುಕ್ತಾಯವಾಗಬೇಕೆಂದು ಉದ್ದೇಶವಿರುವುದೋ

ಅಲ್ಲಿ, ಯಾವುದು ಭಾವೀ ವಾರಸಾಕರದ ಮೊತ್ತವೆಂದು ಸರಿಯಾಗಿ ತಿಳಿಯಲ್ಪಡಬೇಕೆಂದು ನಿಯಂತ್ರಕನ ಅಭಿಪ್ರಾಯವಾಗಿರುವುದೋ ಆ ಮೊತ್ತಕ್ಕಾಗಿ ನಿಯಂತ್ರಕನಿಂದ ಧರ್ಮದರ್ಶಿಗಳು ಒಂದು ಪ್ರಮಾಣ ಪತ್ರವನ್ನು ಪಡೆದರೆ, ಆ ಪ್ರಮಾಣಪತ್ರದ ಅರ್ಜಿಯ ಸಂಬಂಧವಾಗಿ ನಿಯಂತ್ರಕನಿಂದ ಅಪೇಕ್ಷಿಸಲಾದ ಎಲ್ಲ ಮಾಹಿತಿಯನ್ನು ಮತ್ತು ಪುರಾವೆಯನ್ನು ನಿಯಂತ್ರಕನಿಗೆ ಕೊಟ್ಟರೆ, ಆ ನಿವೇಶನದ ಧರ್ಮದರ್ಶಿಯೆಂದು ಯಾವ ವ್ಯಕ್ತಿಯೂ ಆ ಪ್ರಮಾಣ ಪತ್ರವು ಸಂಬಂಧಿಸುವ ವಾರಸಾಕರಕ್ಕಾಗಿ, ಪ್ರಮಾಣ ಪತ್ರದಲ್ಲಿ ಹೇಳಿದ್ದರಕಿಂತ ಹೆಚ್ಚಿನ ಹಣಕ್ಕಾಗಿ ಲೆಕ್ಕ ಒಪ್ಪಿಸಲು ಬಾಧ್ಯನಾಗಲಾರನು.

(೩) ಕಲಮು ೧೧ರ ಸತ್ವದ ಪ್ರಕಾರ ವಾರಸಾಕರ ಕೊಡಲು ಒಂದು ನಿವೇಶನದ ಧರ್ಮದರ್ಶಿಯೆಂದು ಲೆಕ್ಕ ಒಪ್ಪಿಸಲು ಬಾಧ್ಯನಾಗಿರುವ ವ್ಯಕ್ತಿಗೆ ಆ ನಿವೇಶನದ ಆಸ್ತಿಯ ಮೇಲೆ, ಭಾವೀ ವಾರಸಾಕರದ ಹಣಕ್ಕಾಗಿ, ಮತ್ತು ಅದರ ವೆಚ್ಚಕ್ಕಾಗಿ, ಅವನ ಕೈಯಲ್ಲಿದ್ದ ಬೇರೆ ಯಾವುದೇ ಆಸ್ತಿಯ ಮೇಲೆ ಭಾರಹಾಕಲು ಅಧಿಕಾರವಿರುತ್ತದೆ.

**ವಿವರಣೆ:** ಈ ಕಲಮಿನಲ್ಲಿ ನಿರ್ದೇಶಿಸಲಾದ ಭಾವೀ ವಾರಸಾಕರದ ಹಣ ಎಂಬುದನ್ನು ಅದು ಮುಂದೆ ಕರ ಹಾಕಲ್ಪಡುವುದೆಂದು ಗೃಹೀತ ಹಿಡಿದುಕೊಂಡು ನಿರ್ದೇಶಿಸಿದ ಭಾವೀ ವಾರಸಾಕರದ ಹಣವೆಂದು ತಿಳಿಯಲ್ಪಡಬೇಕು.

**ವಿವೇಚನೆ:**

ಕಲಮು ೧೧ ರ ಸತ್ವದ ಪ್ರಕಾರ ಆಗುವುದನ್ನು ಈ ಕಲಮು ವಿಶದ ಮಾಡುತ್ತದೆ. ನಿವೇಶಿತ ಆಸ್ತಿಯ ಬಗ್ಗೆ ಧರ್ಮದರ್ಶಿಗಳು ಕೆಲವೊಂದು ಸಂದರ್ಭಗಳಲ್ಲಿ ಲೆಕ್ಕ ಒಪ್ಪಿಸಲು ಹೇಗೆ ಬಾಧ್ಯರಾಗುವರೆಂಬುದನ್ನು ಈ ಕಲಮು ಹೇಳುತ್ತದೆ. ಮತ್ತು ಭಾವೀ ವಾರಸಾಕರ ಕೊಡುವದರ ಸಲುವಾಗಿ ಧರ್ಮದರ್ಶಿಯು ತನ್ನ ಕೈಯಲ್ಲಿದ್ದ ಇತರ ಆಸ್ತಿಯ ಮೇಲೆ ಇನ್ನೊಂದು ಆಸ್ತಿಯ ಮೇಲೆ ಕರ ಕೊಡುವುದಕ್ಕಾಗಿ ಇತರ ವೆಚ್ಚಕ್ಕಾಗಿ ಭಾರ ಹಾಕಬಹುದೆಂದು ಅವನಿಗೆ ಅಧಿಕಾರಕೊಡಲಾಗಿದೆ.

**೫೫ ಸ್ವಾಧೀನತೆಯಲ್ಲಿರುವನೆಂದು ನಂಬಲಾದ ಪ್ರತಿಯೊಬ್ಬ ವ್ಯಕ್ತಿಯು ನಿಯಂತ್ರಕನಿಗೆ ಬೇಕಾಗುವ ಆಸ್ತಿಯ ವಿವರಗಳ ಹೇಳಿಕೆಯನ್ನು ಕೊಡಬೇಕು.**

ವಾರಸಾಕರದ ಲೆಕ್ಕವನ್ನು ಒಪ್ಪಿಸಲು ಬಾಧ್ಯನಾದ ಪ್ರತಿಯೊಬ್ಬ ವ್ಯಕ್ತಿಯು, ೧೭ನೆಯ ಕಲಮಿನಲ್ಲಿ ಹೇಳಿದ ಪ್ರಕಾರ ಮೃತನಿಂದ ಆಸ್ತಿಯ

ಹಸ್ತಾಂತರವನ್ನು ಯಾವುದಕ್ಕೆ ಮಾಡಲಾಗಿದೆಯೆಂದು ನಿಯಂತ್ರಕನ ಅಭಿಪ್ರಾಯವಾಗಿರುವುದೋ ಅಂತಹ ಪ್ರತಿಯೊಂದು ಕಂಪನಿ, ಯಾವುದೇ ಕಾಲಕ್ಕೆ ಇಂತಹ ಕಂಪನಿಯ ಲೆಕ್ಕ ತಪಾಸಿಗನಾಗಿರುವ ಇಲ್ಲವೆ ಆಗಿದ್ದ ಪ್ರತಿಯೊಬ್ಬ ವ್ಯಕ್ತಿಯು, ಮತ್ತು ಮೃತನ ಮರಣದ ಮೂಲಕ ವಾರಸಾಕರವು ಯಾವ ಆಸ್ತಿಯ ಬಗ್ಗೆ ಹಾಕಲಾಗುವುದೋ ಆ ಆಸ್ತಿಯ ಸ್ವಾಧೀನತೆಯನ್ನು ಪಡೆದಿರುವನೆಂದು ಇಲ್ಲವೆ ಆಡಳಿತವನ್ನು ನಡೆಸಿರುವ ಇಲ್ಲವೆ ಆ ಆಸ್ತಿಯ ಯಾವುದೇ ಭಾಗದ ಉತ್ಪನ್ನವನ್ನು ತೆಗೆದುಕೊಂಡಿರುವನೆಂದು ಯಾವನನ್ನು ನಿಯಂತ್ರಕನು ನಂಬುವನೋ ಅಂತಹ ಪ್ರತಿಯೊಬ್ಬ ವ್ಯಕ್ತಿಯು, ನಿಯಂತ್ರಕನಿಂದ ಅಪೇಕ್ಷಿಸಲ್ಪಟ್ಟರೆ ಮೃತನ ಮರಣದ ಮೂಲಕ ಯಾವ ಆಸ್ತಿಗೆ ಕರ ಹಾಕಲು ಯೋಗ್ಯವಾಗಿದೆಯೋ ಆ ಆಸ್ತಿಯಲ್ಲಿ ಭಾಗವಾಗಿದೆಯೆಂದು ನಿಯಂತ್ರಕನಿಗೆ ನಂಬಲರ್ಹವಾಗಿದೆಯೋ ಅಂತಹ ಆಸ್ತಿಯ ಬಗ್ಗೆ ನಿಯಂತ್ರಕನಿಗೆ ಬೇಕಾಗುವಂತಹ ವಿವರಗಳನ್ನುಳ್ಳ ಹೇಳಿಕೆಯನ್ನು ಕೊಟ್ಟು ಅದು ತನ್ನ ತಿಳಿವಳಿಗೆ ಮತ್ತು ನಂಬಿಕೆಗೆ ಅರ್ಹವಾಗಿದೆಯೆಂದು ಪ್ರತಿಜ್ಞಾಪೂರ್ವಕ ಸಾರಿ, ಅದರ ಜತೆಗೆ ಆವಶ್ಯಕವಾದ ಕಾಗದ ಪತ್ರಗಳನ್ನು, ದಸ್ತೈವಜಗಳನ್ನು, ಪುರಾವೆಗಳನ್ನು ಇಲ್ಲವೆ ಮಾಹಿತಿಯನ್ನು ಕೊಡಬೇಕು.

**ವಿವೇಚನೆ:**

ವಾರಸಾಕರ ಹಾಕುವುದು. ನಿಯಂತ್ರಕನ ಕಾರ್ಯ; ಆದರೆ ಅವನಿಗೆ ಯೋಗ್ಯ ಮಾಹಿತಿ ಬೇಕಾಗುವುದು. ಆ ಮಾಹಿತಿಯನ್ನು ವಾರಸಾಕರ ಪಾತ್ರವಾದ ಆಸ್ತಿಯ ಬಗ್ಗೆ ಲೆಕ್ಕ ಒಪ್ಪಿಸಲು ಬಾಧ್ಯರಾದವರು ಕೊಡಬೇಕಾಗುವುದು. ಆ ಆಸ್ತಿಯ ಬಗ್ಗೆ ಯಾರಿಗೆ ಸತ್ವತಃ ಸಂಬಂಧ ಬಂದಿದೆಯೊ ಅವರು ಮಾಹಿತಿಯನ್ನು ಕೊಡಬೇಕು. ಅವರು ಕೊಟ್ಟ ಮಾಹಿತಿಯ ಮೇಲಿಂದ ನಿಯಂತ್ರಕನು ಕರದ ಆಕರಣೆ ಮಾಡಿ ವಸೂಲು ಮಾಡುವನು. ಆ ಬಗ್ಗೆ ಅನುಕೂಲ ಕಲ್ಪಿಸುವುದಕ್ಕೆ ಈ ಕಲಮು ಇದೆ. ಆಸ್ತಿಗೆ ಸಂಬಂಧ ಪಟ್ಟ ಎಲ್ಲ ವಿವರಗಳನ್ನು ಲೆಕ್ಕ ಒಪ್ಪಿಸಲು ಬಾಧ್ಯರಾದವರು ನಿಯಂತ್ರಕನಿಗೆ ಕೊಡಬೇಕು, ಎಂದು ಈ ಕಲಮು ಹೇಳುವುದು.

**೫೬ ತಪ್ಪಿದರೆ ದಂಡ**

ಕಲಮು ೫೩ ಇಲ್ಲವೆ ೫೫ ಇವುಗಳ ಕಕ್ಷೆಗಳ ಪ್ರಕಾರ ನಡೆಯಲು ಯಾವುದೇ ವ್ಯಕ್ತಿಯು ಯಾವುದೇ ಯೋಗ್ಯ ಕಾರಣಗಳಿಲ್ಲದೆ ತಪ್ಪಿದರೆ, ಇಲ್ಲವೆ ನಿಶ್ಚಿತ ಕಾಲಾವಧಿಯಲ್ಲಿ ಪೂರೈಸಲು ತಪ್ಪಿದರೆ, ಅವನು ಒಂದು ಸಾವಿರ ರೂಪಾಯಿ ದಂಡವನ್ನು ಇಲ್ಲವೆ ಯಾವುದರ ಬಗ್ಗೆ ಲೆಕ್ಕ ಒಪ್ಪಿಸಲು ಬಾಧ್ಯ

ನಾಗಿರುವನೋ ಆ ವಾರಸಾಕರದಲ್ಲಿ ಕೊಡಲಾಗದೆ ಉಳಿದಿದ್ದ ಹಣದ ಎರಡ ರಷ್ಟು ಆಗುವ ಹಣದಷ್ಟು ದಂಡವನ್ನು, ನಿಯಂತ್ರಕನು ನಿರ್ದೇಶಿಸುವಂತೆ ಕೊಡಲು ಪಾತ್ರನಾಗುವನು.

ಆದರೆ, ಯಾವುದೇ ಪ್ರಕರಣದಲ್ಲಿ ನಿಯಂತ್ರಕನು ದಂಡದ ಮೊತ್ತವನ್ನು ಕಡಿಮೆ ಮಾಡಬಹುದು.

**ವಿವೇಚನೆ:**

ಕಲಮು ೫೩ ಮತ್ತು ೫೫ ರ ಪ್ರಕಾರ ಲೆಕ್ಕ ಒಪ್ಪಿಸುವುದಕ್ಕೆ ಯಾರಾದೂ ತಪ್ಪಿದರೆ ಇಲ್ಲವೆ ಕೊಟ್ಟ ಕಾಲಾವಧಿಯಲ್ಲಿ ಲೆಕ್ಕವನ್ನು ಕೊಡದಿದ್ದರೆ ೧೦೦೦ ರೂಪಾಯಿ ದಂಡ ಕೊಡಬೇಕಾಗುವುದು. ಕೆಲ ಮಟ್ಟಿಗೆ ವಾರಸಾಕರ ಕೊಟ್ಟು ಇನ್ನೂ ಕೊಡುವುದು ಉಳಿದಿದ್ದರೆ ಆ ಹಣದ ಎರಡರಷ್ಟು ದಂಡವನ್ನು, ನಿಯಂತ್ರಕನು ನಿರ್ದೇಶಿಸಿದಂತೆ ಕೊಡಬೇಕಾಗುವುದು. ಈ ದಂಡದ ಮೊತ್ತದಲ್ಲಿ ಕಡಿಮೆ ಮಾಡಲು ನಿಯಂತ್ರಕನಿಗೆ ಅಧಿಕಾರವನ್ನು ಕೊಡಲಾಗಿದೆಯೆಂಬುದು ಲಕ್ಷಿಸಲು ಯೋಗ್ಯವಾಗಿದೆ.

**೫೭ ಕರಯೋಗ್ಯವಾದ ಎಲ್ಲ ಆಸ್ತಿಯನ್ನು ಮೌಲ್ಯಮಾಪನ ಪ್ರತಿಜ್ಞಾಪತ್ರದೊಂದಿಗೆ ಮೃತ್ಯುಲೇಖಾಧಿಕಾರಿಯು ನಿರ್ದಿಷ್ಟಪಡಿಸಬೇಕು.**

ಮೃತನ ಮರಣದ ನಂತರ ಆರು ತಿಂಗಳಲ್ಲಿ ಪ್ರಾತಿನಿಧ್ಯಕ್ಕಾಗಿ ಅರ್ಜಿ ಮಾಡಲಾದ ಎಲ್ಲ ಸಂದರ್ಭಗಳಲ್ಲಿ,

(ಅ) ಮೃತನ ಮೃತ್ಯುಲೇಖಾಧಿಕಾರಿಯು, ತನ್ನ ಉತ್ತಮ ತಿಳಿವಳಿಕೆ ಮತ್ತು ನಂಬಿಕೆಯಲ್ಲಿದ್ದುದನ್ನು (೧೮೭೦ ರ) ಕೋರ್ಟ ಫೀ (೧೮೭೦ ರ vii) ಆ್ಯಕ್ಟದ ಕಲಮು ೧೯–೧ರನ್ವಯವಾಗಿ ಕೋರ್ಟಿನಲ್ಲಿ ಹಾಜರು ಮಾಡಿದ ಮೌಲ್ಯಮಾಪನ ಪ್ರತಿಜ್ಞಾಪತ್ರದೊಂದಿಗೆ ಕೊಟ್ಟ ಸರಿಯಾದ ಲೆಕ್ಕದಲ್ಲಿ, ಮೃತನ ಮರಣದ ಮೂಲಕ ಯಾವ ಆಸ್ತಿಯ ಬಗ್ಗೆ ವಾರಸಾಕರ ಕೊಡಬೇಕಾಗಿದೆಯೋ ಆ ಎಲ್ಲ ಆಸ್ತಿಯನ್ನು ನಿರ್ದಿಷ್ಟ ಪಡಿಸಬೇಕು, ಮತ್ತು ಲೆಕ್ಕ ಸಹಿತವಾಗಿರುವ ಪ್ರತಿಜ್ಞಾಪತ್ರದ ಪ್ರತಿಯನ್ನು ನಿಯಂತ್ರಕನಿಗೆ ಕೊಡಬೇಕು, ಮತ್ತು

(ಬ) ವಾಕ್ಯಾವಳಿ (ಅ) ದಲ್ಲಿ ಗೊತ್ತು ಮಾಡಿದ ಲೆಕ್ಕವನ್ನು ಕೊಡುವ ತನಕ ಮತ್ತು ಲೆಕ್ಕದಲ್ಲಿ ಸಮಾವೇಶವಾದ ಆಸ್ತಿಯ ವಿಷಯವಾಗಿ ಕೊಡಬೇಕಾದ ವಾರಸಾಕರವು ಕೊಡಲಾಗಿದೆ ಇಲ್ಲವೆ ಕೊಡಲ್ಪಡುವುದು ಇಲ್ಲವೆ ಕೊಡುವುದು ಬಾಕಿ ಉಳಿದಿಲ್ಲವೆಂದು ಸಂದರ್ಭಾನುಸಾರವಾಗಿ

ಹೇಳುವಂತಹ ಕಲಮು ೬೦ ಇಲ್ಲವೆ ಕಲಮು ೬೭ ಇದರನ್ವಯವಾಗಿ ನಿಯಂತ್ರಕನಿಂದ ಪ್ರಮಾಣ ಪತ್ರವನ್ನು ಹಾಜರು ಮಾಡುವ ತನಕ ಪ್ರಾತಿನಿಧ್ಯಕ್ಕಾಗಿ ಮಾಡಿದ ಅರ್ಜಿಯ ಸಂಬಂಧವಾಗಿ ಪ್ರಾತಿನಿಧ್ಯಕ್ಕೆ ಬಾಧ್ಯನೆಂದು ಯಾವ ಆಜ್ಞೆಯನ್ನು ಮಾಡಲಾಗದು.

**ವಿವೇಚನೆ:**

ಮೃತನು ಮೃತ್ಯುಲೇಖ ಬರೆದಿಟ್ಟು ಮರಣ ಹೊಂದಿದರೆ ಮೃತ್ಯುಲೇಖ ನಡಸು ವವನು ಪ್ರಾತಿನಿಧ್ಯಕ್ಕಾಗಿ ಅರ್ಜಿ ಮಾಡಿಕೊಳ್ಳಬೇಕಾಗುವುದು. ಆ ಮೃತ್ಯುಲೇಖಾಧಿ ಕಾರಿಯು ಮೃತನ ಆಸ್ತಿಯ ಎಲ್ಲ ವಿವರಗಳನ್ನು ಮೌಲ್ಯಮಾಪನ ಪ್ರತಿಜ್ಞಾಪತ್ರ ದೊಂದಿಗೆ ಲೆಕ್ಕಸಹಿತ ಮತ್ತು ಆ ಆಸ್ತಿಯ ಬಗ್ಗೆ ಕೊಡಬೇಕಾದ ಕರ ಕೊಡಲಾಗಿದೆ, ಕೊಡಲ್ಪಡುವುದು ಇಲ್ಲವೆ ಬಾಕಿ ಉಳಿದಿಲ್ಲವೆಂದು ನಿಯಂತ್ರಕನಿಂದ ಒಂದು ಪ್ರಮಾಣ ಪತ್ರ ಕೋರಿಸುವ ತನಕ ಮೃತ್ಯುಲೇಖ ನಡೆಸಲು ಅಧಿಕಾರವನ್ನು ಕೊಡುವ ಯಾವ ಆಜ್ಞೆಯನ್ನು ದಯಪಾಲಿಸಲಾಗದೆಂದು ನಿರ್ಬಂಧ ಹಾಕಲಾಗಿದೆ. ಇದರಿಂದ ಮೊದಲು ವಾರಸಾಕರದ ಹಣವನ್ನು ಸುರಕ್ಷಿತ ಮಾಡಿಕೊಂಡಂತಾಗುವುದು.

**೫೮ ವಾರಸಾಕರವು ಯಾವಾಗ ಕೊಡಲು ಯೋಗ್ಯವಾಗುವುದು ಮತ್ತು ಹೇಗೆ ಮತ್ತು ಯಾವಾಗ ವಸೂಲಿ ಮಾಡಲ್ಪಡಬೇಕು.**

(೧) ಮೃತನ ಮರಣದ ತಾರೀಖಿಗೆ ವಾರಸಾಕರವು ಕೊಡಲು ಯೋಗ್ಯವಾಗುವುದು. ಮತ್ತು ಕಲಮು ೫೩ ರನ್ವಯವಾಗಿ ಇಲ್ಲವೆ ಕಲಮು ೫೭ ರ ವಾಕ್ಯಾವಳಿ (ಅ) ದನ್ವಯವಾಗಿ ಲೆಕ್ಕ ಒಪ್ಪಿಸಿದ ನಂತರ ವಸೂಲಿ ಮಾಡಲ್ಪಡಲಾಗುವುದು ಇಲ್ಲವೆ ಕಲಮು ೬೧ ರ ಉಪಕಲಮು (೨) ರನ್ವಯ ವಾಗಿ ಲೆಕ್ಕ ಸಿದ್ಧವಾದ ನಂತರ ವಸೂಲಿ ಮಾಡಲ್ಪಡಲಾಗುವುದು.

(೨) ಈ ಕಾಯಿದೆಯನ್ವಯವಾಗಿ ಇಲ್ಲವೆ ಕಾಯಿದೆಯ ಅನುಸಾರ ವಾಗಿ ಮಾಡಲ್ಪಟ್ಟ ಯಾವುದೇ ಆಜ್ಞೆಯ ಪರಿಣಾಮವಾಗಿ, ಈ ಕಾಯಿದೆಯ ನ್ವಯವಾಗಿ ಹಾಕಲ್ಪಟ್ಟ ಯಾವುದೇ ವಾರಸಾಕರವು, ದಂಡವು, ಬಡ್ಡಿಯು ಇಲ್ಲವೆ ಬೇರೆ ಯಾವುದೇ ಹಣವು ನಿಶ್ಚಿತಗೊಳಿಸಲ್ಪಟ್ಟಾಗ, ಲೆಕ್ಕ ಒಪ್ಪಿಸಲು ಬಾಧ್ಯನಾದ ವ್ಯಕ್ತಿಯ ಮೇಲೆ ಗೊತ್ತುಮಾಡಿದ ನಮೂನೆಯಲ್ಲಿ ಕೊಡಬೇಕಾದ ಹಣವನ್ನು ಮತ್ತು ಎಷ್ಟು ಕಾಲಾವಧಿಯಲ್ಲಿ ಕೊಡಬೇಕೆಂಬು ದನ್ನು ಮತ್ತು ಯಾವ ಸ್ಥಳದಲ್ಲಿ ಕೊಡಬೇಕೆಂಬುದನ್ನು ಸ್ಪಷ್ಟಪಡಿಸಿ ವಾರಸಾ ಕರ ಬೇಡಿಕೆಯ ನೋಟೀಸನ್ನು ನಿಯಂತ್ರಕನು ಜಾರಿಮಾಡಬೇಕು.

**ವಿವೇಚನೆ:**

ಇದು ವಾರಸಾಕರ ಇರುವುದರಿಂದ ಕರವು ಮರಣದ ಮೂಲಕವೇ ಕೊಡಲು ಯೋಗ್ಯವಾಗುವುದು. ಆದುದರಿಂದ ಮರಣದ ತಾರೀಖಿಗೆ ಕರವು ಬಾಕಿ ಎಂದಾಗುವುದು. ಆ ತಾರೀಖಿನಿಂದ ೬ ತಿಂಗಳ ಒಳಗೆ ಇಲ್ಲವೆ ನಿಯಂತ್ರಕನು ಅನುಮತಿಸಿದ ಹೆಚ್ಚಿನ ಕಾಲಾವಧಿಯ ಒಳಗೆ ಕರಯೋಗ್ಯವಾದ ಆಸ್ತಿಯ ಲೆಕ್ಕವನ್ನು ಲೆಕ್ಕ ಒಪ್ಪಿಸಲು ಬಾಧ್ಯರಾದವರು ಕೊಡಬೇಕು. ಮೌಲ್ಯಮಾಪನ ಪ್ರಮಾಣ ಪತ್ರದೊಂದಿಗೆ ಹಾಜರು ಮಾಡಿದ ಲೆಕ್ಕದ ಮೇಲಿಂದ ಆಸ್ತಿಯ ಬೆಲೆಯು ನಿರ್ಣಯಿತವಾಗುವುದು. ಆಸ್ತಿಯ ಬೆಲೆಯೂ ಕರಯೋಗ್ಯವಾದ ಆಸ್ತಿಯೂ ಆದರ ದರವೂ ನಿರ್ಣಯಿತವಾದ ಮೇಲೆ ಕರವು ಎಷ್ಟು ಎಂಬುದು ಗೊತ್ತಾಗುವುದು. ಗೊತ್ತಾದ ಮೇಲೆ ನಿಯಂತ್ರಕನು ನೋಟೀಸೊಂದನ್ನು ಲೆಕ್ಕಒಪ್ಪಿಸಲು ಬಾಧ್ಯನಾದವನ ಮೇಲೆ ಜಾರಿಮಾಡಬೇಕು. ಅದರಲ್ಲಿ, ಅವನು ಕೊಡಬೇಕಾದ ವಾರಸಾಕರದ ಹಣ, ಎಷ್ಟು ಕಾಲಾವಧಿಯಲ್ಲಿ ಕೊಡಬೇಕೆಂಬ ಕಾಲಮಿತಿ; ಮತ್ತು ಯಾವ ಸ್ಥಳದಲ್ಲಿ ಕೊಡಬೇಕೆಂಬ ನಿರ್ದೇಶನ ಇವು ಇರಬೇಕು. ಈ ವಿಷಯವನ್ನು ಈ ಕಲಮು ಹೇಳುತ್ತದೆ.

**೫೯ ವಾರಸಾಕರ ಹಾಕುವ ವಿಷಯವಾಗಿ ನ್ಯಾಯಿಕ ಕಾರ್ಯಕಲಾಪಗಳನ್ನು ಪ್ರಾರಂಭಿಸಲು ಕಾಲಮಿತಿ.**

ಯಾರ ಆಸ್ತಿಯ ಸಂಬಂಧವಾಗಿರುವ ವಾರಸಾಕರವು ಹಾಕಲ್ಪಡಲು ಯೋಗ್ಯವಾಗಿದೆಯೊ ಆ ವ್ಯಕ್ತಿಯ ಮರಣದ ತಾರೀಖಿನ ನಂತರ ಹನ್ನೆರಡು ವರುಷಗಳು ಮುಗಿದ ನಂತರ ಈ ಕಾಯಿದೆಯನ್ವಯವಾಗಿ ಯಾವುದೇ ವಾರಸಾಕರ ಸಂಬಂಧವಾದ ನ್ಯಾಯಿಕ ಕಾರ್ಯಕಲಾಪಗಳನ್ನು ಪ್ರಾರಂಭಿಸಲಾಗದು.

**ವಿವೇಚನೆ:**

ಮೃತನ ಮರಣದ ತಾರೀಖಿನಿಂದ ೧೨ ವರುಷಗಳು ಮುಗಿದು ಹೋಗಿದ್ದು ವಾರಸಾಕರದ ಬಗ್ಗೆ ಯಾವುದೇ ಕ್ರಮ ತೆಗೆದು ಕೊಳ್ಳದಿದ್ದರೆ ಆನಂತರ ವಸೂಲಿಯ ಸಲುವಾಗಿ ಯಾವ ಕ್ರಮ ಪ್ರಾರಂಭಿಸಲು ಬರುವುದಿಲ್ಲೆಂದು ಈ ಕಲಮು ಸಾರುತ್ತದೆ. ಲೆಕ್ಕ ಒಪ್ಪಿಸಲು ಬಾಧ್ಯರಾದವರಿಗೆ ೬ ತಿಂಗಳ ಕಾಲಮಿತಿ ಹಾಕಿದಂತೆ ಸರಕಾರವು ಕರವಸೂಲಿ ಮಾಡಲು ೧೨ ವರುಷ ಕಾಲಮಿತಿ ಹಾಕಲಾಗಿದೆ. ಆ ಅವಧಿಯೊಳಗೆ ವಸೂಲು ಮಾಡದಿದ್ದರೆ ಆ ಬಗ್ಗೆ ಕ್ರಮ ಕೈಕೊಳ್ಳಲು ಅಧಿಕಾರ ಹಾರಿಹೋಗುವುದು.

**೬೦ ಲೆಕ್ಕ ಒಪ್ಪಿಸಿದ ಕೂಡಲೆ ವಾರಸಾಕರ ಕೊಡಲ್ಪಡಬೇಕು ಇಲ್ಲವೆ ಕೊಡುವ ಬಗ್ಗೆ ಜಾಮೀನು ಕೊಡಲ್ಪಡಬೇಕು. ಮತ್ತು ಆ ನಂತರ ಆ ಬಗ್ಗೆ ಸರ್ಟಿಫಿಕೇಟು ಕೊಡಲ್ಪಡಬೇಕು.**

ಕಲಮು ೫೩ ರನ್ವಯವಾಗಿ ಇಲ್ಲವೆ ೫೭ ರ ವಾಕ್ಯಾವಳಿ (ಅ) ದನ್ವಯವಾಗಿ ಲೆಕ್ಕವನ್ನು ಒಪ್ಪಿಸಿಕೊಡಲಾದ ಕೂಡಲೆ, ಲೆಕ್ಕ ಒಪ್ಪಿಸಿ ಕೊಟ್ಟವನು

ಲೆಕ್ಕದಲ್ಲಿ ಸಮಾವೇಶವಾದ ಆಸ್ತಿಯ ಬಗ್ಗೆ ಏನಾದರೂ ಕೊಡಬೇಕಾಗಿದ್ದರೆ ಆ ವಾರಸಾಕರವನ್ನು ನಿಯಂತ್ರಕನಿಗೆ ಕೊಡಬೇಕು. ಇಲ್ಲವೆ ಕೊಡುವ ಬಗ್ಗೆ ನಿಯಂತ್ರಕನಿಗೆ ಸಮಾಧಾನವಾಗುವಂತೆ ಜಾಮೀನು ಕೊಡಬೇಕು. ಮತ್ತು ಆ ನಂತರ ಲೆಕ್ಕ ಒಪ್ಪಿಸಿದವನಿಗೆ ಸಂದರ್ಭಾನುಸಾರವಾಗಿ ನಿಯಂತ್ರಕನು ವಾರಸಾಕರವು ಕೊಡಲ್ಪಡುವುದೆಂದು ಇಲ್ಲವೆ ಕೊಡುವುದಿದೆಯೆಂದು ಇಲ್ಲವೆ ಬಾಕಿ ಏನೂ ಉಳಿದಿಲ್ಲವೆಂದು ಸರ್ಟಿಫಿಕೇಟು ಕೊಡಬೇಕು.

**ವಿವೇಚನೆ:**

ಮೊದಲು ಲೆಕ್ಕ ಒಪ್ಪಿಸಬೇಕು. ಅದನ್ನು ಕಲಮು ೫೩ ಇಲ್ಲವೆ ೫೭ ರನ್ವಯವಾಗಿ ಮಾಡಬೇಕು. ಲೆಕ್ಕ ಒಪ್ಪಿಸಿದ ನಂತರ ವಾರಸಾಕರವನ್ನು ಕೊಡಬೇಕು. ಕೊಡಲು ಆಗದಿದ್ದರೆ ಕೊಡುವ ಬಗ್ಗೆ ಜಾಮೀನು ಕೊಡಬೇಕು. ಹೀಗೆ ಕರ ಕೊಟ್ಟ ಬಗ್ಗೆ ನಿಯಂತ್ರಕನು ಲೆಕ್ಕ ಒಪ್ಪಿಸಿದವನಿಗೆ ಒಂದು ಸರ್ಟಿಫಿಕೇಟು ಕೊಡಬೇಕು.

**೬೧ ಬೆಲೆ ಕಟ್ಟುವಿಕೆಯ ವಿಷಯವಾಗಿ ನಿಯಂತ್ರಕನ ಅಧಿಕಾರಗಳು.**

(೧) ಯಾವ ಆಸ್ತಿಯ ವಿಷಯವಾಗಿ ವಾರಸಾಕರವು ಕೊಡಲ್ಪಬೇಕಾಗಿರುವುದೋ, ಆ ಆಸ್ತಿಯ ಬಗ್ಗೆ ಲೆಕ್ಕ ಒಪ್ಪಿಸುವಾಗ ಆ ಆಸ್ತಿಯ ಬೆಲೆಯನ್ನು (ಲೆಕ್ಕದಲ್ಲಿ ಸಮಾವೇಶ ಮಾಡಿದ ಆಸ್ತಿಯ ಬೆಲೆಯನ್ನು ತೀರ ಕಡಿಮೆ ಹಿಡಿದು ಇಲ್ಲವೆ ಸಮಾವೇಶ ಮಾಡಬೇಕಾಗಿದ್ದ ಆಸ್ತಿಯನ್ನು ಸಮಾವೇಶಮಾಡುವುದನ್ನು ಬಿಟ್ಟು) ಲೆಕ್ಕ ಒಪ್ಪಿಸುವವನು ಕಡಿಮೆ ಅಂದಾಜು ಮಾಡಿರುವನೆಂದು ನಿಯಂತ್ರಕನು ಅಭಿಪ್ರಾಯವುಳ್ಳವನಾದರೆ, ನಿಯಂತ್ರಕನು ತನಗೆ ಯೋಗ್ಯ ಕಂಡ ಸಾಧನಗಳಿಂದ ಮತ್ತು ಯೋಗ್ಯ ಕಂಡ ರೀತಿಯಲ್ಲಿ ಆ ವಿಷಯದಲ್ಲಿ ವಿಚಾರಣೆ ನಡಸಬಹುದು ಮತ್ತು ನಂತರವೂ ಆ ಆಸ್ತಿಯ ಬೆಲೆಯು ಕಡಿಮೆ ಅಂದಾಜು ಮಾಡಲ್ಪಟ್ಟಿದೆಯೆಂಬ ಅಭಿಪ್ರಾಯವುಳ್ಳವನಾದರೆ, ಲೆಕ್ಕ ಒಪ್ಪಿಸಿದವನು ಆ ಬೆಲೆ ಕಟ್ಟುವಿಕೆಯನ್ನು ತಿದ್ದುವಂತೆ ಮಾಡಬಹುದು, ಮತ್ತು ಆ ವ್ಯಕ್ತಿಯು ನಿಯಂತ್ರಕನಿಗೆ ಸಮಾಧಾನವಾಗುವಂತೆ ಬೆಲೆ ಕಟ್ಟುವಿಕೆಯಲ್ಲಿ ತಿದ್ದುಪಡಿ ಮಾಡದಿದ್ದರೆ, ಆ ವ್ಯಕ್ತಿಗೆ ತನ್ನ ಪಕ್ಷ ಮಂಡನೆಗಾಗಿ ಅವಕಾಶವನ್ನು ಕಲ್ಪಿಸಿಕೊಟ್ಟು ನಿಯಂತ್ರಕನು ಯಾವ ತಳಹದಿಯ ಮೇಲೆ ವಾರಸಾರ ಕೊಡಬೇಕಾಗುದೋ ಅದರನ್ವಯವಾಗಿ ಬೆಲೆ ಕಟ್ಟಬಹುದು.

(೨) ಯಾವುದೇ ಸಂದರ್ಭದಲ್ಲಿ, ಕಲಮು ೫೩ ಇಲ್ಲವೆ ೫೭ ರ ವಾಕ್ಯಾವಳಿ (ಅ) ದಲ್ಲಿ ನಿರ್ದೇಶಿಸಲಾದಂತೆ ಲೆಕ್ಕವು ಒಪ್ಪಿಸಲಾಗಿರದಿದ್ದರೆ, ನಿಯಂತ್ರಕನು ತನಗೆ ಯೋಗ್ಯ ಕಂಡ ಸಾಧನಗಳಿಂದ ಮತ್ತು ಯೋಗ್ಯ ಕಂಡ ರೀತಿ

ಯಲ್ಲಿ ಮೃತನ ಮರಣದ ಮೂಲಕ ಇಳಿದು ಬರುವ ಆಸ್ತಿಯ ಲೆಕ್ಕವನ್ನು ತಯಾರು ಮಾಡಿಸಬಹುದು. ಮತ್ತು ಅವನ ಅಭಿಪ್ರಾಯದಲ್ಲಿ ವಾರಸಾಕರ ಕೊಡಲು ಯಾವನು ಲೆಕ್ಕ ಒಪ್ಪಿಸಲು ಆ ಆಸ್ತಿಯ ವಿಷಯವಾಗಿ ಬಾಧ್ಯನಾಗುವನೆಂದು ಅನ್ನಿಸುವುದೋ ಅವನನ್ನು ನಿಯಂತ್ರಕನು ಸಿದ್ಧಮಾಡಿದ ಲೆಕ್ಕವನ್ನು ಒಪ್ಪುವಂತೆ ಸ್ವೀಕರಿಸಲು ಆಹ್ವಾನಿಸಬಹುದು. ಮತ್ತು ಆ ವ್ಯಕ್ತಿಯು ಹಾಗೆ ಒಪ್ಪಿಸಿದ ಲೆಕ್ಕವನ್ನು ಸ್ವೀಕರಿಸದಿದ್ದರೆ, ಇಲ್ಲವೆ ತನ್ನ ಹೊಣೆಗಾರಿಕೆಯನ್ನು ಒಪ್ಪಿಕೊಳ್ಳದಿದ್ದರೆ, ಆ ವ್ಯಕ್ತಿಯು ಕೊಡಬೇಕಾಗಿರುವ ವಾರಸಾಕರವನ್ನು ನಿಯಂತ್ರಕನು ನಿರ್ಧರಿಸಬಹುದು.

**ವಿವೇಚನೆ:**

ವಾರಸಾಕರ ಕೊಡುವುದಕ್ಕಾಗಿ ಆಸ್ತಿಯ ಲೆಕ್ಕವನ್ನು ಒಪ್ಪಿಸುವುದು ಲೆಕ್ಕ ಒಪ್ಪಿಸಲು ಬಾಧ್ಯಸ್ಥರಾದವರ ಕರ್ತವ್ಯ. ಕಲಮು ೫೩ ಇಲ್ಲವೆ ೫೭ನೆಯ ಕಲಮಿನ ವಾಕ್ಯಾವಳಿ (ಅ) ದ ಪ್ರಕಾರ ಅವರು ಲೆಕ್ಕ ಒಪ್ಪಿಸಬೇಕು. ಒಂದು ವೇಳೆ ಅವರು ಲೆಕ್ಕ ಒಪ್ಪಿಸದಿದ್ದರೆ ಇಲ್ಲವೆ ಲೆಕ್ಕದ ಅಂದಾಜಿನಲ್ಲಿ ಕಡಿಮೆ ಮಾಡಿದರೆ, ನಿಯಂತ್ರಕನು ತಾನೇ ಲೆಕ್ಕ ತಯಾರಿಸಿ ಅದನ್ನು ಅವರು ಒಪ್ಪುವಂತೆ ಮಾಡಬೇಕು. ಅವರಿಗೆ ಒಪ್ಪದಿರಲು ಸಬಲ ಕಾರಣವಿದ್ದರೆ, ಅವರ ಪಕ್ಷಮಂಡನೆಗೆ ಅವಕಾಶ ಮಾಡಿಕೊಟ್ಟು ಕೊನೆಗೆ ಆ ನಿಯಂತ್ರಕನು ವಾರಸಾಕರ ಎಷ್ಟಾಗುವುದು ಎಂಬುದನ್ನು ತಾನೇ ನಿರ್ಧರಿಸಬೇಕು. ಹಾಗೆ ನಿರ್ಧರಿಸಲು ಈ ಕಲಮು ನಿಯಂತ್ರಕನಿಗೆ ಅಧಿಕಾರ ಕೊಡುತ್ತದೆ.

**೬೧ ವಾರಸಾಕರದ ಸಲುವಾಗಿ ಮಾಡಿದ ಬೆಲೆ ಕಟ್ಟುವಿಕೆಯ ಸಂಬಂಧವಾಗಿ ಆದ ತಪ್ಪುಗಳನ್ನು ಸರಿಪಡಿಸುವುದು.**

(೧) ಯಾವುದೇ ಆಸ್ತಿಯ ವಿಷಯವಾಗಿ ಕೊಡಬೇಕಾಗಿರುವ ವಾರಸಾಕರವನ್ನು ನಿರ್ದಿಷ್ಟ ಪಡಿಸಿದ ನಂತರ, ಕಾಗದ ಪತ್ರಗಳಿಂದ ಕಾಣುವ ಹಾಗೆ ಯಾವುದೇ ತಪ್ಪು ಇದೆಯೆಂಬ ಕಾರಣಕ್ಕಾಗಿ ಇಲ್ಲವೆ ಈ ಕಾಯಿದೆಯನ್ವಯವಾಗಿ ಮಾಡಿಕೊಂಡ ಅಪೀಲಿನಲ್ಲಿ ಬೆಲೆ ಕಟ್ಟುವಿಕೆಯ ನಿರ್ಣಾಯಕ ವಿಷಯವಾಗಿರುವ ಪ್ರಕರಣಗಳು ಆಗಿರದ ಬೇರೆ ಯಾವುದೇ ಸಂದರ್ಭದಲ್ಲಿ ಯಾವುದೇ ಆಸ್ತಿಯ ಬೆಲೆ ಕಟ್ಟುವಿಕೆಯಲ್ಲಿಯ ಯಾವುದೇ ತಪ್ಪು ಇದೆ ಎಂಬ ಕಾರಣಕ್ಕಾಗಿ ಇಲ್ಲವೆ ಯಾವುದೇ ಆಸ್ತಿಯು ಸೇರಿಸಲ್ಪಡದೆ ಉಳಿದಿದೆಯೆಂಬ ಕಾರಣಕ್ಕಾಗಿ ಆ ಆಸ್ತಿಯ ಮೇಲೆ ಕೊಡಲಾದ ವಾರಸಾಕರವು ನಿಜವಾಗಿಯೂ ಕೊಡಬೇಕಾದುದರಕಿಂತ ಹೆಚ್ಚಿಗೆ ಇಲ್ಲವೆ ಕಡಿಮೆ ಕೊಡಲಾಗಿದೆಯೆಂದು ನಿಯಂತ್ರಕನಿಗೆ ಕಂಡು ಬಂದರೆ, ಅವನು ತಾನಾಗಿಯೆ ಇಲ್ಲವೆ ಲೆಕ್ಕ ಒಪ್ಪಿಸಲು ಬಾಧ್ಯನಾದ

ವನು ಮಾಡಿದ ಅರ್ಜಿಯ ಮೂಲಕವಾಗಿ ಮತ್ತು ನೊಟ್ಟಮೊದಲು ವಾರಸಾ ಕರ ನಿರ್ಣಯಿಸಿದ ತಾರೀಖಿನಿಂದ ಮೂರು ವರುಷಗಳ ಒಳಗೆ ಯಾವ್ಯದೇ ಕಾಲಕ್ಕೆ ಬೋರ್ಡಿನ ಪೂರ್ವಸಮ್ಮತಿಯನ್ನು ಪಡೆದು—

(ಅ) ಹೆಚ್ಚಿಗೆ ಕೊಡಲಾದ ವಾರಸಾಕರವನ್ನು ಮರಳಿಸಬಹುದು; ಇಲ್ಲವೆ ಸಂದರ್ಭಾನುಸಾರವಾಗಿ,

(ಬ) ಆ ಆಸ್ತಿಯ ಮೇಲ್ ಕೊಡಬೇಕಾಗಿರುವ ಹೆಚ್ಚಿನ ಕರವನ್ನು ನಿರ್ಣಯಿಸಬಹುದು.

ಆದರೆ ಲೆಕ್ಕ ಒಪ್ಪಿಸಲು ಬಾಧ್ಯನಾದವನು ಯಾವುದೇ ಆಸ್ತಿಯ ಬೆಲೆಯನ್ನು ವಂಚನಾತ್ಮಕವಾಗಿ ಕಡಿಮೆ ಅಂದಾಜು ಮಾಡಿದ್ದರೆ ಇಲ್ಲವೆ ಯಾವುದೇ ಆಸ್ತಿಯನ್ನು ಸೇರಿಸದೆ ಬಿಟ್ಟಿದ್ದರೆ ಕಾಲಾವಧಿಯು ಆರು ವರುಷ ವಾಗುವುದು:

ಮತ್ತು ಆದರೆ, ಲೆಕ್ಕಒಪ್ಪಿಸಲು ಬಾಧ್ಯನಾದವನಿಗೆ ಅವನ ಪಕ್ಷ ಮಂಡನೆಗೆ ಅವಕಾಶ ಮಾಡಿಕೊಡಲ್ಪಡದೆ ಈ ಉಪಕಲಮಿನನ್ವಯವಾಗಿ ಯಾವುದೇ ಆಜ್ಞೆಯನ್ನು ಮಾಡಲಾಗದು.

(೨) ಲೆಕ್ಕ ಒಪ್ಪಿಸಲು ಬಾಧ್ಯನಾದವನು ವಂಚನಾತ್ಮಕವಾಗಿ ಪ್ರಥ ಮತಃ ವಾರಸಾಕರದ ಯಾವುದೇ ಭಾಗವನ್ನು ತಪ್ಪಿಸುವ ಪ್ರಯತ್ನಮಾಡಿರ ದಿದ್ದರೆ ವಾರಸಾಕರವು ಕೊಡಲ್ಪಟ್ಟಿದೆಯೆಂದು ಲೆಕ್ಕಒಪ್ಪಿಸಲು ಬಾಧ್ಯನಾದವ ನಿಗೆ ಸರ್ಟಿಫಿಕೇಟು ಯಾವನಿಗೆ ಕೊಡಲಾಗಿದೆಯೊ ಅವನನ್ನು ಅವನ ಹತ್ತಿರ ಇನ್ನೂ ಸ್ವಾಧೀನತೆಯಲ್ಲಿದ್ದ ಹೆಚ್ಚಿಗೆ ಮೃತನ ಸೊತ್ತುಗಳ ಬಗ್ಗೆ ಹೆಚ್ಚಿನ ಯಾವುದೇ ಕರವನ್ನು ಕೊಡಲು ಉಪಕಲಮು (೧) ರಲ್ಲಿ ಹೇಳಿದ ಯಾವುದು ಹೊಣೆಗಾರನನ್ನಾಗಿ ಮಾಡುವುದಿಲ್ಲ.

**ವಿವೇಚನೆ :**

ಲೆಕ್ಕ ಒಪ್ಪಿಸುವಾಗ ತಪ್ಪು ತಡೆಗಳು ಆಗುವ ಸಂಭವವಿರುವುದು. ಹಾಗೆ ಆದ ತಪ್ಪುಗಳು ನಂತರ ಕಂಡು ಬಂದರೆ, ನಿಯಂತ್ರಕನು ತಾನಾಗಿಯೆ ಇಲ್ಲವೆ ಪಕ್ಷಕಾರರ ಅರ್ಜಿಯ ಮೂಲಕ ತಿದ್ದುಪಡಿಮಾಡಬಹುದು. ಹೀಗೆ ತಿದ್ದುಪಡಿ ಮಾಡಲು ಅವನು ಬೋರ್ಡಿನ ಪೂರ್ವಸಮ್ಮತಿ ಪಡೆಯಬೇಕು. ಇದಕ್ಕೆ ಮೂರುವರುಷದ ಕಾಲಾವಧಿಯ ಮಿತಿ ಹಾಕಲಾಗಿದೆ. ಅಷ್ಟು ಕಾಲಾವಧಿಯ ಒಳಗೆ ತಿದ್ದುಪಡಿಮಾಡಬೇಕು. ತಪ್ಪು ಗಳು ಕಾಗದಪತ್ರಗಳಲ್ಲಿ ಆಗಿರಬಹುದು; ಬೆಲೆಕಟ್ಟುವಿಕೆಯಲ್ಲಿ ಆಗಿರಬಹುದು. ಬೆಲೆ

ಕಟ್ಟುವಿಕೆಯ ಸಂಬಂಧವಾಗಿ ವ್ಯಾಜ್ಯವೆಂದು ಆ ವಿಷಯವು ಅಪೀಲಿಗೆ ಹೋಗಿದ್ದರೆ ಆ ವಿಷಯವು ಈ ಕಲಮಿನಲ್ಲಿ ಬರಲಾರದು. ಆ ವಿಷಯ ಬಿಟ್ಟು ತಪ್ಪು ಕಂಡು ಬಂದು ವಾರಸಾಕರವು ಹೆಚ್ಚಿಗೆ ಕೊಡಲ್ಪಟ್ಟಿದ್ದರೆ ಅದನ್ನು ಮರಳಿ ಕೊಡಬೇಕು. ಕಡಿಮೆ ಕೊಡಲಾಗಿದ್ದರೆ ಅವನ್ನು ಅಷ್ಟು ಮಟ್ಟಿಗೆ ಹೆಚ್ಚಿನ ಕರ ತೆಗೆದುಕೊಳ್ಳಬೇಕು.

ಆದರೆ ಬೆಲೆಕಟ್ಟುವಿಕೆಯಲ್ಲಿ ವಂಚನಾತ್ಮಕವಾಗಿ ಕಡಿಮೆ ಅಂದಾಜು ಮಾಡಲಾಗಿದೆಯೆಂದು ಕಂಡು ಬಂದರೆ ನಿಯಂತ್ರಕನು ಆರು ವರುಷಗಳಲ್ಲಿ ಅದನ್ನು ಸರಿಪಡಿಸಲು ಕಾಲಾವಧಿ ಹಿಗ್ಗಿಸಲಾಗಿದೆ. ಆದರೆ ಯಾವುದೇ ಆಜ್ಞೆಯನ್ನು ಈ ಸಂಬಂಧದಲ್ಲಿ ಮಾಡಬೇಕಾದರೆ, ಪಕ್ಷಕಾರನಿಗೆ ಅವನ ಪಕ್ಷ ಮಂಡಿಸಲು ಅವಕಾಶ ಕಲ್ಪಿಸಿ ಕೊಡಬೇಕು.

ಈ ಕಲಮಿನಲ್ಲಿ ಇನ್ನೂ ಒಂದು ಮಾತು ಇದೆ. ಯಾವನೊಬ್ಬನು ವಾರಸಾಕರವನ್ನು ಕೊಟ್ಟು ಆ ಬಗ್ಗೆ ನಿಯಂತ್ರಕನಿಂದ ಸರ್ಟಿಫೀಕೇಟು ಪಡೆದಿದ್ದರೆ, ಹಾಗೆ ಪಡೆವಾಗ ಅವನು ವಂಚನಾತ್ಮಕವಾಗಿ ವ್ಯವಹರಿಸಿರದಿದ್ದರೆ, ಅವನ ಹತ್ತಿರ ಮೃತನ ಆಸ್ತಿಯು ಇನ್ನೂ ಸ್ವಾಧೀನತೆಯಲ್ಲಿ ಇದೆಯೆಂಬ ಕಾರಣಕ್ಕಾಗಿ ಅವನನ್ನು ಹೆಚ್ಚಿನ ವಾರಸಾಕರವನ್ನು ಕೊಡಲು ಹೊಣೆಗಾರನನ್ನಾಗಿ ಮಾಡಲಾಗದು. ಅಂದರೆ ಒಮ್ಮೆ ವಾರಸಾಕರ ಕೊಟ್ಟದೆಯೆಂದು ಸರ್ಟಿಫಿಕೀಟು ಕೊಡಲಾದರೆ, ಆ ವ್ಯವಹಾರವು ಸದ್ಭಾವದಿಂದ ಆಗಿದ್ದರೆ, ನಿರ್ಣಾಯಕವಾದಂತೆಯೆ. ಆ ಪ್ರಕರಣವನ್ನು ಮತ್ತೆ ಎತ್ತಲಾಗದು, ಎಂದು ಈ ಕಲಮು ಹೇಳಿದೆ. ಸರ್ಟಿಫಿಕೀಟು ಕೊಡುವ ಮೊದಲೆ ನಿಯಂತ್ರಕನು ಸಾರಾಸಾರ ವಿಚಾರ ಮಾಡಬೇಕು ಎಂದು ಸೂಚಿಸಿದಂತಾಗುವುದು.

**೬೩ ನಿಯಂತ್ರಕನ ನಿರ್ಣಯದ ವಿರುದ್ಧ ನಿವೇದನೆ ( ಅಪೀಲು )**

(೧) ಯಾವುದೇ ವ್ಯಕ್ತಿಯು—

(ಅ) (i) ನಿಯಂತ್ರಕನಿಂದ ಮಾಡಲ್ಪಟ್ಟ ಯಾವುದೇ ಬೆಲೆ ಕಟ್ಟುವಿಕೆಗೆ, ಇಲ್ಲವೆ

(ii) ಕೊಡಬೇಕಾಗಿದ್ದ ವಾರಸಾಕರವನ್ನು ನಿರ್ಣಯಿಸಲು ನಿಯಂತ್ರಕನಿಂದ ಮಾಡಲ್ಪಟ್ಟ ಯಾವುದೇ ಆಜ್ಞೆಗೆ, ಇಲ್ಲವೆ

(iii) ಕಲಮು ೫೮ ರನ್ವಯವಾಗಿ ನಿಯಂತ್ರಕನಿಂದ ಹಾಕಲ್ಪಟ್ಟ ಯಾವುದೇ ದಂಡಕ್ಕೆ, ಇಲ್ಲವೆ

(iv) ಯಾವುದೇ ಆಸ್ತಿಯ ವಿಷಯವಾಗಿ ವಾರಸಾಕರ ಕೊಡಲು ಹೊಣೆಗಾರಿಕೆಯನ್ನು ಇಲ್ಲವೆ ಕರ್ತವ್ಯವನ್ನು ಹೇರುವ ಪರಿಣಾಮವುಳ್ಳ ಯಾವುದೇ ನಿರ್ಣಾಯಕ ಆಜ್ಞೆಗೆ ಇಲ್ಲವೆ ನ್ಯಾಯ ನಿರ್ಣಯಕ್ಕೆ ವಿರೋಧಿಸುವವನು, ಇಲ್ಲವೆ

(ಬ) ಯಾವುದೇ ಆಸ್ತಿಯ ವಿಷಯವಾಗಿ ಕೊಡಬೇಕಾದ ವಾರಸಾ ಕರಕ್ಕಾಗಿ ಲೆಕ್ಕಒಪ್ಪಿಸುವ ಹೊಣೆಗಾರಿಕೆಯನ್ನು ಅಲ್ಲಗಳೆಯುವವನು, ಇಲ್ಲವೆ

(ಕ) ಈ ಕಾಯಿದೆಯನ್ವಯವಾಗಿ ಹೊಣೆಮುಕ್ತತೆಯ ಸರ್ಟಿಫಿಕೇಟು ಇಲ್ಲವೆ ಬೇರೆ ಯಾವುದೇ ಸರ್ಟಿಫಿಕೇಟು ದಯಪಾಲಿಸಲು ಒಲ್ಲೆನ್ನುವ ಹಾಗೆ ಇರುವ ನಿಯಂತ್ರಕನಿಂದ ಮಾಡಲಾದ ಯಾವುದೇ ಆಜ್ಞೆಗೆ ವಿರೋಧಿಸುವವನು

ವಾಕ್ಯಾವಳಿ (ಅ) ಮತ್ತು (ಬ) ದಲ್ಲಿ :ನಿರ್ದಿಷ್ಟಪಡಿಸಿದ ಪ್ರಕರಣಗಳಲ್ಲಿ ೫೮ ನೆಯ ಕಲಮಿನನ್ವಯವಾಗಿ ಬೇಡಿಕೆಯ ನೋಟೀಸು ಮುಟ್ಟಿದ ತಾರೀಖಿನಿಂದ ತೊಂಬತ್ತು ದಿವಸಗಳಲ್ಲಿ, ಮತ್ತು ವಾಕ್ಯಾವಳಿ (ಕ) ದಲ್ಲಿ ನಿರ್ದಿಷ್ಟಪಡಿಸಲಾದ ಪ್ರಕರಣಗಳಲ್ಲಿ ಆಜ್ಞೆಮಾಡಿದ ತಾರೀಖಿನಿಂದ ತೊಂಬತ್ತು ದಿವಸಗಳಲ್ಲಿ ಗೊತ್ತುಮಾಡಿದ ನಮೂನೆಯಲ್ಲಿ ಬೋರ್ಡಿಗೆ ಅಪೀಲು ಮಾಡಿಕೊಳ್ಳಬಹುದು; ಅದು ಗೊತ್ತುಮಾಡಿದ ರೀತಿಯಲ್ಲಿ ಪ್ರತಿಜ್ಞಾಪೂರ್ವಕವಾಗಿ ಸರಿಯೆಂದು ಸಾರಲ್ಪಟ್ಟಿರಬೇಕು.

(೨) ಉಪಕಲಮು (೧) ರಲ್ಲಿ ಹೇಳಲಾದ ತೊಂಬತ್ತು ದಿವಸಗಳು ಮುಗಿದ ನಂತರವೂ ಆ ಕಾಲಾವಧಿಯಲ್ಲಿ ಅಪೀಲು ಸಾದರ ಪಡಿಸಲು ಆಗದುದಕ್ಕೆ ಸಾಕಷ್ಟು ಯೋಗ್ಯ ಕಾರಣವಿದೆಯೆಂದು ಅದಕ್ಕೆ ಸಮಾಧಾನವಾದರೆ ಬೋರ್ಡು ಅಪೀಲನ್ನು ಸ್ವೀಕರಿಸಬಹುದು.

(೩) ಯಾವುದೇ ಅಪೀಲನ್ನು ನಿರ್ಣಯಿಸುವಾಗ ಬೋರ್ಡು ತನಗೆ ಯೋಗ್ಯ ಕಂಡ ಹಾಗೆ ಹೆಚ್ಚಿನ ವಿಚಾರಣೆ ಮಾಡಬಹುದು ಇಲ್ಲವೆ ಮಾಡಿಸಬಹುದು ಮತ್ತು ಅಪೀಲು ಮಾಡಿದವನಿಗೆ ಪಕ್ಷಮಂಡಿಸುವ ಯೋಗ್ಯ ಅವಕಾಶವನ್ನು ಕೊಟ್ಟ ನಂತರ ಉಪಕಲಮು (೪) ರ ಕಕ್ಷೆಗಳಂಕಿತವಾಗಿ, ಆ ಅಪೀಲಿನ ಮೇಲೆ ತನಗೆ ಯೋಗ್ಯಕಂಡ ಆಜ್ಞೆಗಳನ್ನು ಮಾಡಬಹುದು. ಮತ್ತು ಇಂತಹ ಆಜ್ಞೆಗಳ ಪ್ರತಿಯನ್ನು ಅಪೀಲು ಮಾಡಿದವನಿಗೆ ಮತ್ತು ನಿಯಂತ್ರಕನಿಗೆ ಕಳಿಸಬೇಕು.

(೪) ಎಲ್ಲಿ ವ್ಯಾಜ್ಯವು ಆಸ್ತಿಯ ಯಾವುದೇ ಬೆಲೆ ಕಟ್ಟುವಿಕೆಗೆ ಸಂಬಂಧಿಸಿರುವುದೋ ಅಲ್ಲಿ ಬೋರ್ಡು ವ್ಯಾಜ್ಯವುಂಟಾದ ಬೆಲೆಯನ್ನು ಇಬ್ಬರು ಮೌಲ್ಯ ಮಾಪಕರ ಮಧ್ಯಸ್ತಿಕೆಗೆ ಕಳಿಸಬಹುದು. ಮತ್ತು ಆಪೀಲು ಮಾಡಿದವನು ಅಪೇಕ್ಷಿಸಿದರೆ ಕಳಿಸಲೇಬೇಕು. ಇಬ್ಬರು ಮೌಲ್ಯಮಾಪಕ ಮಧ್ಯಸ್ಥಗಾರರಲ್ಲಿ ಒಬ್ಬನು ಬೋರ್ಡಿನಿಂದ ಇನ್ನೊಬ್ಬನು ಅಪೀಲು ಮಾಡಿದವನಿಂದ

ನಾಮಕರಣ ಮಾಡಲ್ಪಡಬೇಕು. ಮತ್ತು ಇಂತಹ ಮಧ್ಯಸ್ಥಗಾರಿಕೆಯ ವೆಚ್ಚವು ಯಾರ ಅರ್ಜಿಯಿಂದ ಮೌಲ್ಯಮಾಪಕರ ಮಧ್ಯಸ್ಥಿಕೆಗೆ ವಿಷಯವನ್ನು ಹಾಕಲಾಗಿರುವುದೋ ಸಂದರ್ಭಾನುಸಾರವಾಗಿ ಬೋರ್ಡಿನಿಂದ ಇಲ್ಲವೆ ಅಪೀಲು ಮಾಡಿದವನಿಂದ ವಹಿಸಲ್ಪಡಬೇಕು.

ಆದರೆ, ಎಲ್ಲಿ ಮಧ್ಯಸ್ಥಿಕೆಯು ಅಪೀಲು ಮಾಡಿದವನ ಅರ್ಜಿಯ ಮೂಲಕ ನಡೆದಿರುವುದೋ ಅಲ್ಲಿ ಅವನು ಪೂರ್ತಿಯಾಗಿ ಇಲ್ಲವೆ ಭಾಗವಾಗಿ ಯಶಸ್ವಿಯಾದರೆ ಅವನಿಂದ ಎಷ್ಟು ಮಟ್ಟಿಗೆ ವೆಚ್ಚವು ವಹಿಸಲ್ಪಡಬೇಕೆಂಬುದು ಬೋರ್ಡಿನ ವಿವೇಕಕ್ಕೆ ಬಿಡಬೇಕಾಗುವುದು.

ಮತ್ತೂ ಆದರೆ, ಆ ಇಬ್ಬರು ಮೌಲ್ಯಮಾಪಕರ ಅಭಿಪ್ರಾಯದಲ್ಲಿ ವ್ಯತ್ಯಾಸವುಂಟಾದರೆ, ಆ ವಿಷಯವನ್ನು ಪರಸ್ಪರರು ಒಪ್ಪಿಕೊಂಡು ನಾಮಕರಣ ಮಾಡಿದ ಮೂರನೆಯ ಮೌಲ್ಯಮಾಪಕನ ಕಡೆಗೆ ಕಳಿಸಬೇಕು. ಇಲ್ಲವೆ ಕೇಂದ್ರ ಸರಕಾರದಿಂದ ಒಪ್ಪಿಗೆ ಸಾಧ್ಯವಾಗದಿದ್ದರೆ ಬೆಲೆ ಕಟ್ಟುವಿಕೆಯ ವಿಷಯದ ಮೇಲೆ ಆ ಮೂರನೆಯ ಮೌಲ್ಯಮಾಪಕನ ನಿರ್ಣಯವು ಕೊನೆಯದು.

(೫) ಉಪಕಲಮು (೪) ರನ್ವಯವಾಗಿ ಮಧ್ಯಸ್ಥಿಕೆಗೆ ಹಾಕಲಾದ ಯಾವುದೇ ವಿಷಯವನ್ನು ನಿರ್ಣಯಿಸುವಾಗ ಮೌಲ್ಯಮಾಪಕರು ತಮಗೆ ಯೋಗ್ಯ ಕಂಡಂತಹ ವಿಚಾರಣೆ ಮಾಡಬಹುದು ಇಲ್ಲವೆ ಮಾಡಿಸಬಹುದು, ಮತ್ತು ಅಪೀಲು ಮಾಡಿದವನಿಗೆ ಮತ್ತು ನಿಯಂತ್ರಕನಿಗೆ ಪಕ್ಷಮಂಡಿಸಲು ಅವಕಾಶ ಕಲ್ಪಿಸಿಕೊಟ್ಟು ಆ ವಿಷಯದ ಬಗ್ಗೆ ತಮಗೆ ಯೋಗ್ಯಕಂಡ ಆಜ್ಞೆಗಳನ್ನು ಮಾಡಬಹುದು. ಮತ್ತು ಇಂತಹ ಆಜ್ಞೆಯ ಪ್ರತಿಯನ್ನು ಅಪೀಲು ಮಾಡಿದವನಿಗೆ ಮತ್ತು ಬೋರ್ಡಿಗೆ ಕಳಿಸಬೇಕು.

(೬) ಬೋರ್ಡಿನೆದುರು ಅಪೀಲು ಮಾಡಲಾಗಿದ್ದರೂ ಯಾವುದರ ಬಗ್ಗೆ ವ್ಯಾಜ್ಯವು ಇಲ್ಲವೊ ಅಷ್ಟು ಮಟ್ಟಿಗಿನ ಸಾರಸಾಕರವನ್ನು ಅಪೀಲು ಮಾಡಿದವನಿಂದ ಕೊಡಲ್ಪಡಬೇಕಾಗುವುದು.

**ವಿವೇಚನೆ:**

ನಿಯಂತ್ರಕನು ಮಾಡಿದ ನಿರ್ಣಯ ಇಲ್ಲವೆ ಆಜ್ಞೆಗಳ ವಿರುದ್ಧ ಬೋರ್ಡಿಗೆ ಅಪೀಲು ಮಾಡಿಕೊಳ್ಳಲು ಈ ಕಲಮು ಅವಕಾಶ ಮಾಡಿಕೊಟ್ಟಿದೆ. ನಿರ್ಣಯ ಇಲ್ಲ ಆಜ್ಞೆ ಆದ ತಾರೀಖಿನಿಂದ ೯೦ ದಿವಸಗಳ ಒಳಗೆ ಅಪೀಲು ಮಾಡಿಕೊಳ್ಳಬೇಕು.

(ಇ) ಆಸ್ತಿಯ ಬೇರೆ ಬೇರೆ ಭಾಗಗಳ ಮೇಲೆ ಭಾರ ಹಾಕಲಾದ ಸಾಲ ಇಲ್ಲವೆ ಋಣಭಾರ.

ಇವಲ್ಲದೆ ಇನ್ನೂ ಮೂರು ಮಾದರಿಯ ಸಾಲಗಳಿಗೆ ವಿನಾಯತಿ ದೊರೆವುದಿಲ್ಲ. ಒಂದರ ಬಗ್ಗೆ ಕಲಮು ೨೭ ರಲ್ಲಿ ಹೇಳಲಾಗಿದೆ; ಇನ್ನೆರಡು ಮಾದರಿಗಳು ಕಲಮು ೪೫ ಮತ್ತು ೪೬ ರಲ್ಲಿ ಹೇಳಲ್ಪಟ್ಟಿವೆ.

**೪೫ ಕಡಿತಯೋಗ್ಯವಾದ ಸಾಲಗಳಿಗೆ ನಿರ್ಬಂಧಮಿತಿ**

ಮರಣದ ಮೂಲಕ ಇಳಿದು ಬರುವ ಇಲ್ಲವೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವ ಯಾವುದೇ ಆಸ್ತಿಯಲ್ಲಿಯ ನಿರೀಕ್ಷಣೆಯಲ್ಲಿದ್ದ ಯಾವುದೇ ಹಿತಸಂಬಂಧವನ್ನು ಕಾಯಿದೆಯ ಕ್ರಿಯೆಂದಾಗಲಿ ಇಲ್ಲವೆ ಬೇರೆ ರೀತಿ ಯಿಂದಾಗಲೀ ಪಡೆಯುವ ಇಲ್ಲವೆ ನಾಶಮಾಡುವ ಉದ್ದೇಶದಿಂದ ಇಲ್ಲವೆ ಕೊಂಡುಕೊಳ್ಳುವ ಉದ್ದೇಶದಿಂದ ಇಡಿಯಾಗಿ ಇಲ್ಲವೆ ಭಾಗವಾಗಿ ಯಾವುದೇ ಸಾಲ ಇಲ್ಲವೆ ಋಣಭಾರವು ಮಾಡಲ್ಪಟ್ಟಿರುವಾಗ ಇಲ್ಲವೆ ನಿರ್ಮಿ ಸಲ್ಪಟ್ಟಿರುವಾಗ ಮತ್ತು ನಿರೀಕ್ಷಣೆಯಲ್ಲಿದ್ದ ಯಾರ ಹಿತಸಂಬಂಧವು ಹೀಗೆ ಕೊಂಡುಕೊಳ್ಳಲ್ಪಟ್ಟಿದೆಯೋ ಇಲ್ಲವೆ ಪಡೆಯಲಾಗಿದೆಯೋ ಇಲ್ಲವೆ ನಾಶಮಾಡ ಲ್ಪಟ್ಟಿದೆಯೋ ಅಂತಹ ಯಾವುದೇ ವ್ಯಕ್ತಿಯು ( ಮೃತನಿಂದ ಮಾಡಲ್ಪಟ್ಟ ಯಾವುದೇ ವಿನ್ಯಾಸದನ್ವಯವಾಗಿ ಇಲ್ಲವೆ ಕಾಯಿದೆಯ ಪ್ರಕಾರ ಬರುವ ಅಧಿಕಾರದನ್ವಯವಾಗಿ ಇಲ್ಲವೆ ಮೃತನು ಮೃತ್ಯುಲೇಖ ಮಾಡದೇ ಇರುವದ ರಿಂದ ಹುಟ್ಟುವ ಅಧಿಕಾರದನ್ವಯವಾಗಿ ) ಆ ಆಸ್ತಿಯಲ್ಲಿಯ ಯಾವುದೇ ಹಿತ ಸಂಬಂಧಕ್ಕೆ ಬಾಧ್ಯಸ್ಥನಾಗುತ್ತಿದ್ದರೆ, ವಾರಸಾಕರದ ಉದ್ದೇಶಕ್ಕಾಗಿ ಆಸ್ತಿಯ ಬೆಲೆಯನ್ನು ನಿರ್ಧರಿಸುವಾಗ ಇಂತಹ ಸಾಲ ಇಲ್ಲವೆ ಋಣಭಾರದ ವಿಷಯ ವಾಗಿ ಯಾವದೇ ವಿನಾಯತಿ ಮಾಡತಕ್ಕದ್ದಲ್ಲ. ಮತ್ತು ಇಂತಹ ಸಾಲ ಇಲ್ಲವೆ ಋಣಭಾರಗಳಿಂದ ಭಾರಹಾಕಲ್ಪಟ್ಟ ಯಾವುದೇ ಆಸ್ತಿಯು ಆ ಸಾಲ ಇಲ್ಲವೆ ಋಣಭಾರಮುಕ್ತವಾಗಿ ಇಳಿದು ಬರುವದೆಂದು ಗಣಿಸಲ್ಪಡಲಾಗುವುದು.

ಆದರೆ,

(ಅ) ಇಂತಹ ಉದ್ದೇಶಕ್ಕಾಗಿ ಇಲ್ಲವೆ ಮೇಲ್ಕಾಣಿಸಿದ ಇಂತಹ ಪ್ರತಿ ಬೆಲೆಗಾಗಿ ಆ ಸಾಲದ ಇಲ್ಲವೆ ಋಣಭಾರದ ಭಾಗ ಮಾತ್ರ ಮಾಡಲಾಗಿದ್ದರೆ ಇಲ್ಲವೆ ನಿರ್ಮಿಸಲಾಗಿದ್ದರೆ, ಈ ಕಲಮಿನ ಕಕ್ಷೆಗಳು ಆ ಸಾಲದ ಇಲ್ಲವೆ ಋಣ ಭಾರದ ಆ ಭಾಗಕ್ಕೆ ಮಾತ್ರ ಅನ್ವಯಿಸುವುದು. ಮತ್ತು

(ಬ) ಹಾಗೆ ಕೊಂಡುಕೊಂಡ, ಪಡೆದ ಇಲ್ಲವೆ ನಾಶಮಾಡಿದ ನಿರೀಕ್ಷಣೆಯಲ್ಲಿದ್ದ ಯಾರ ಹಿತಸಂಬಂಧವನ್ನು ಯಾವುದೇ ವ್ಯಕ್ತಿಯು ಆ ಆಸ್ತಿಯಲ್ಲಿಯ ಯಾವುದೊಂದು ಭಾಗದಲ್ಲಿಯ ಹಿತಸಂಬಂಧಕ್ಕೆ ಮಾತ್ರ ಬಾಧ್ಯಸ್ಥನಾಗುತ್ತಿದ್ದರೆ ಇಡಿ ಆಸ್ತಿಯ ಬೆಲೆಗೆ ಆ ವ್ಯಕ್ತಿಯು ಬಾಧ್ಯಸ್ಥನಾಗುವ ಹಿತಸಂಬಂಧವಿರುವ ಭಾಗದ ಬೆಲೆಯು ಯಾವ ಪ್ರಮಾಣ ತೋರುವುದೋ ಇಡಿ ಋಣ ಭಾರ ಇಲ್ಲವೆ ಸಾಲವು ಆ ಸಾಲದ ಇಲ್ಲವೆ ಋಣಭಾರಕ್ಕೆ ಆಗುವ ಪ್ರಮಾಣದಲ್ಲಿ ಆಗುವ ಭಾಗಕ್ಕೆ ಈ ಕಕ್ಷೆಯು ಅನ್ವಯಿಸುವುದು.

**ವಿವೇಚನೆ:**

ಭಾವೀ ಹಿತಸಂಬಂಧವನ್ನು ಕೊಂಡುಕೊಳ್ಳಲು ಇಲ್ಲವೆ ಕಡಿಮೆ ಮಾಡಲು ನಿರ್ಮಿಸಲಾದ ಸಾಲಗಳನ್ನು ಮತ್ತು ಋಣಭಾರಗಳನ್ನು ಆ ಭಾವೀ ಹಿತಸಂಬಂಧವು ಮೃತನಿಂದ ಇನ್ನೊಂದು ರೂಪದಲ್ಲಿ ನಿರ್ಮಿಸಲಾದರೆ ಈ ಕಲಮಿನ ಮೂಲಕ ಅದನ್ನು ತಡೆಗಟ್ಟಲಾಗುವುದು. **ಉದಾಹರಣೆ:** ಒಂದು ಆಸ್ತಿಯನ್ನು **ಅ**ನಿಗೆ ಜೀವಮಾನದವರೆಗೆ ನಿವೇಶನ ಮಾಡಿದ್ದು ಶೇಷಭೋಗವು ಅವನ ಒಬ್ಬನೆ ಒಬ್ಬ ಮಗನಾದ **ಬ**ನಿಗೆ ಹೋಗಬೇಕೆಂದು ವ್ಯವಸ್ಥೆ ಮಾಡಲಾಗಿದೆ. **ಅ**ನು ಬೇನೆ ಬಿದ್ದು ಮರಣೋನ್ಮುಖನಾದಾಗ, **ಬ**ನ ಶೇಷಭೋಗವನ್ನು ಆ ಆಸ್ತಿಯ ಬೆಲೆಗೆ ಮಾರಲಿಕ್ಕೆ ತೆಗೆದುಕೊಳ್ಳುತ್ತಾನೆ. ಆ ಮಾರುಬೆಲೆಯ ಹಣಕ್ಕೆ ಒಂದು ಪ್ರಾಮಿಸರಿ ನೋಟು ಬರೆದು ಕೊಡುತ್ತಾನೆ. **ಅ**ನು ಮರಣ ಹೊಂದುತ್ತಾನೆ. **ಅ**ನ ಮರಣದ ಮೂಲಕ **ಅ**ನ ವಾರಸದಾರನಾದ **ಬ**ನಿಗೆ ಆಸ್ತಿಯು ಇಳಿದು ಬರುವುದು. ಈ ಕಲಮು ಇಲ್ಲದಿದ್ದರೆ ಆ ಸಾಲದ ಹಣವು ಕಡಿತಯೋಗ್ಯವಾಗುತ್ತಿದ್ದಿತು. ಈ ಕಲಮು ಇರುವುದರಿಂದ ಕಡಿತಕ್ಕೆ ಅನುಮತಿ ದೊರೆವುದಿಲ್ಲ.

ಈ ಕೆಳಗಿನ ಸಂಗತಿಗಳು ಅಸ್ತಿತ್ವದಲ್ಲಿದ್ದರೆ ಈ ಕಲಮು ಅನ್ವಯಿಸುವುದು.

(೧) ಮೃತನ ಮರಣಕ್ಕೆ ಇಳಿದು ಬರುವ ಇಲ್ಲವೆ ಇಳಿದು ಬರುವುದೆಂದು ಗಣಿಸಲ್ಪಡಲಾಗುವ ಯಾವುದೇ ಆಸ್ತಿಯಿರಬೇಕು; ಆ ಆಸ್ತಿಯಲ್ಲಿ ನಿರೀಕ್ಷಣೆಯಲ್ಲಿದ್ದ ಹಿತಸಂಬಂಧವಿರಬೇಕು; ಆ ಹಿತಸಂಬಂಧವನ್ನು ಕೊಂಡುಕೊಳ್ಳಲು ಇಲ್ಲವೆ ಕಡಿಮೆ ಮಾಡಲು ಪ್ರತಿ ಬೆಲೆಯೆಂದು ಮೃತನು ಸಾಲಗಳನ್ನು ಇಲ್ಲವೆ ಋಣಭಾರಗಳನ್ನು ನಿರ್ಮಿಸಿರಬೇಕು.

(೨) ಯಾರಿಂದ ಆ ನಿರೀಕ್ಷಣೆಯಲ್ಲಿದ್ದ ಹಿತಸಂಬಂಧವನ್ನು ಕೊಂಡುಕೊಳ್ಳಲಾಗುವುದೋ ಇಲ್ಲವೆ ಕಡಿಮೆ ಮಾಡಲಾಗುವುದೋ ಆ ವ್ಯಕ್ತಿಗೆ ಆ ಆಸ್ತಿಯಲ್ಲಿ ಹಕ್ಕು ಇರಬೇಕು.

ಹೀಗೆ ಸಂಗತಿಗಳು ಇದ್ದರೆ, ಆ ತರಹದ ಸಾಲಗಳನ್ನು ಇಲ್ಲವೆ ಋಣಭಾರ ಗಳನ್ನು ಮರಣ ಸಮಯಕ್ಕೆ ಇಳಿದು ಬರುವ ಆಸ್ತಿಯ ಬೆಲೆಯಿಂದ ಕಡಿದು ಕಳೆಯಲು ಈ ಕಲಮು ತಡೆಯುತ್ತದೆ. ಮೃತನೇ ಆ ಸಾಲವನ್ನು ಇಲ್ಲವೆ ಋಣಭಾರವನ್ನು ನಿರ್ಮಿಸಿರಬೇಕೆಂಬುದು ಮಹತ್ವದ ಮಾತು. ಮತ್ತು ಈ ಸಾಲವಾದರೂ ಮೃತನ ಮರಣದಿಂದ ಇಳಿದು ಬರುವ ಆಸ್ತಿಯಲ್ಲಿಯ ನಿರೀಕ್ಷಣೆಯಲ್ಲಿ ಹಿತಸಂಬಂಧವನ್ನು ಕೊಳ್ಳಲು ಮಾಡಿದುದಾಗಿರಬೇಕು. ಮತ್ತು ಯಾವ ವ್ಯಕ್ತಿಯಿಂದ ಕೊಳ್ಳಲಾ ಗಿದೆಯೋ ಆ ವ್ಯಕ್ತಿಯು ಆ ನಿರೀಕ್ಷಣೆಯಲ್ಲಿದ್ದ ಹಿತಸಂಬಂಧಕ್ಕೆ ಮೃತನ ಮರಣದ ಮೂಲಕ ಹಕ್ಕುದಾರನಾಗಿರಬೇಕು. ಆ ವ್ಯಕ್ತಿಯು ಮೃತನಿಂದ ಮಾಡಲಾದ ವಿನ್ಯಾಸದ ಮೂಲಕವಾಗಿ, ಇಲ್ಲವೆ ಕಾಯಿದೆಯ ಪ್ರಕಾರ ಉತ್ತರಾಧಿಕಾರಿತ್ವದಿಂದ ಇಲ್ಲವೆ ಮೃತನು ಮೃತ್ಯುಲೇಖ ಮಾಡದೇ ಇದ್ದರೆ, ಹಕ್ಕುದಾರನಾಗುವಂತಹನಿರ ಬೇಕು. ಹೀಗೆ ಆದರೆ ಈ ಕಲಮು ಅನ್ವಯಿಸುವುದು. ಮತ್ತು ಆಸ್ತಿಯ ಬೆಲೆಯಿಂದ ಈ ಸಾಲಗಳ ಬೆಲೆಯನ್ನು ಕಡಿಯುವುದಕ್ಕೆ ಅನುಮತಿ ದೊರೆಯದು.

**೪೬** ಇನ್ನೂ ಹೆಚ್ಚಿನ ನಿರ್ಬಂಧಮಿತಿಗಳು

(೧) ಈ ಕಕ್ಷೆಯಿಲ್ಲದಿದ್ದರೆ, ಯಾವುದೇ ವಿನಾಯತಿಯು ೪೪ ನೆಯ ಕಲಮಿನನ್ವಯವಾಗಿ ಆ ಕಲಮಿನ ವಾಕ್ಯಾವಳಿ (ಅ) ದಲ್ಲಿ ಹೇಳಲಾದಂತೆ ಮೃತನಿಂದ ಮಾಡಲ್ಪಟ್ಟ ಸಾಲದ ಸಲುವಾಗಿ ಮಾಡಬಹುದಾಗಿದ್ದಿತೋ ಇಲ್ಲವೆ ಅಲ್ಲಿಯೆ ಹೇಳಲಾದಂತೆ ಮೃತನಿಂದ ಮಾಡಲಾದ ವಿನ್ಯಾಸದಿಂದ ನಿರ್ಮಿತ ವಾದ ಋಣಭಾರದ ಸಲುವಾಗಿ ಮಾಡಬಹುದಾಗಿದ್ದಿತೋ ಅದು ಆ ಸಾಲ ಇಲ್ಲವೆ ಋಣಭಾರಕ್ಕಾಗಿ ಕೊಡಲಾದ ಯಾವುದೇ ಪ್ರತಿಬೆಲೆಯು ಪ್ರಮಾಣ ದಲ್ಲಿ ಆಗುವಷ್ಟು ಬೆಲೆಯ ಮಟ್ಟಿಗೆ ಆ ಸಾಲ ಇಲ್ಲವೆ ಋಣ ಭಾರವು

(ಅ) ಮೃತನಿಂದ ಪಡೆದ ಆಸ್ತಿ; ಇಲ್ಲವೆ

(ಬ) ಮೇಲೆ ಹೇಳಲಾದಂತಹ ಆಸ್ತಿಯಾಗಿರದ ಪ್ರತಿ ಬೆಲೆ, ಆದರೆ ಯಾವುದೇ ಕಾಲಕ್ಕೆ ಬಾಧ್ಯನಾಗಿರುವ ಯಾವುದೇ ವ್ಯಕ್ತಿಯಿಂದ ಕೊಡಲ್ಪ ಟ್ಟದು, ಇಲ್ಲವೆ ಮೃತನಿಂದ ಪಡೆದ ಯಾವುದೇ ಆಸ್ತಿಯಲ್ಲಿ ಯಾವುದೇ ಕಾಲಕ್ಕೆ ಯಾವ ವ್ಯಕ್ತಿಯ ಸಂಪಾದನ ಉಗಮಗಳಲ್ಲಿ ಸಮಾವೇಶವಾಗಿ ದ್ದಿತೊ ಆ ವ್ಯಕ್ತಿಯಿಂದ ಕೊಡಲ್ಪಟ್ಟದು.

ಇವುಗಳನ್ನು ಉಳ್ಳಂತಹದು ಕಡಿತದಂಕಿತವಾಗುವುದು..

ಆದರೆ, ಈ ಉಪಕಲಮಿನ ವಾಕ್ಯಾವಳಿ (ಬ) ದಲ್ಲಿ ಹೇಳಲಾದಂತಹ ಪ್ರತಿ ಬೆಲೆಯುಳ್ಳಂತಹ ಪ್ರತಿ ಬೆಲೆಯು ಇಡಿಯಾಗಿ ಇಲ್ಲಿವೆ ಭಾಗವಾಗಿ

ಎಲ್ಲಿಯಾದರೂ ಇದ್ದರೆ ಹಾಗೆ ಕೊಡಲಾದ ಪ್ರತಿ ಬೆಲೆಯು ಇಲ್ಲವೆ ಸಂದರ್ಭಾನು ಸಾರವಾಗಿ ಅದರ ಭಾಗದ ಬೆಲೆಯುಂ ಮೃತನಿಂದ ಪಡೆದ, ಕೊಟ್ಟ ಪ್ರತಿ ಬೆಲೆ ಯಲ್ಲಿ ಸಮಾವೇಶವಾದಂತಹ ಆಸ್ತಿ, ಅಂತಹದು ಯಾವುದಾದರೂ ಇದ್ದರೆ ಅದು ಅಲ್ಲದ ಬೇರೆಯಾಗಿರುವ, ಇಲ್ಲವೆ ೧೬ನೆಯ ಕಲಮಿನ ಉಪಕಲಮು (೧) ರಲ್ಲಿ ಹೇಳಲಾದಂತೆ ವಾರ್ಷಿಕವೇತನ ಇಲ್ಲವೆ ಇತರ ಹಿತಸಂಬಂಧವನ್ನು ಕೊಂಡಕೊಳ್ಳಲು ಇಲ್ಲವೆ ವ್ಯವಸ್ಥೆ ಮಾಡುವ ಸಂಬಂಧವಾಗಿರುವ ಪ್ರತಿ ಬೆಲೆಯ ಸಂಬಂಧವಾಗಿ ಆ ಮಾದರಿಯ ಸಂಗತಿಗಳೆನ್ನುಳ್ಳ, ಎಲ್ಲ ಆಸ್ತಿಯನ್ನು ಉಪಯೋಗಿಸಿಕೊಂಡರೆ ಉಂಟಾಗುವ ಬೆಲೆಯಕಿಂತ ಹೆಚ್ಚಾಗುವುದೆಂದು ನಿಯಂತ್ರಕನಿಗೆ ಸಮಾಧಾನವಾಗುವ ಹಾಗೆ ತೋರಿದರೆ ಹಾಗೆ ಹೆಚ್ಚಾದುದರ ವಿಷಯವಾಗಿ ಯಾವುದೇ ಕಡಿತವನ್ನು ಮಾಡಲಾಗದು.

(೨) ಆ ಸಾಲ ಇಲ್ಲವೆ ಋಣಭಾರವು ಮುಟ್ಟಿಸಲ್ಪಡದಿದ್ದರೆ ಇಲ್ಲವೆ ಭಾರ ಕಡಿಮೆ ಮಾಡಲ್ಪಡದಿದ್ದರೆ, ಅವನ ಮರಣದ ಸಮಯಕ್ಕೆ ಉಪಕಲಮು (೧) ಯಾವುದಕ್ಕೆ ಅನ್ವಯಿಸಬಹುದಾಗಿದ್ದಿತೋ ಅಂತಹ ಸಾಲ ಇಲ್ಲವೆ ಋಣ ಭಾರ ಮುಟ್ಟಿಸುವುದಕ್ಕೆ ಇಲ್ಲವೆ ಭಾರ ಕಡಿಮೆ ಮಾಡುವುದಕ್ಕೆ ಇಲ್ಲವೆ ಅವನ ಮರಣದ ಮೂಲಕ ಆ ಉಪಕಲಮು ಪರಿಣಾಮಕಾರಿಯಾಗುವ ಸಂದರ್ಭ ದಲ್ಲಿ ಆ ಸಾಲ ಇಲ್ಲವೆ ಋಣಭಾರ ಕಡಿಮೆ ಮಾಡುವುದಕ್ಕೆ ಮೃತನಿಂದ ಕೊಡಲಾದ ಇಲ್ಲವೆ ಉಪಯೋಗಿಸಲಾದ ಹಣ ಇಲ್ಲವೆ ಹಣದ ಕಿಮ್ಮತ್ತು ಮರಣ ಪೂರ್ವದಲ್ಲಿ ಎರಡು ವರುಷ ಮೊದಲು ಹಾಗೆ ಕೊಡಲಾಗಿರದಿದ್ದರೆ ಇಲ್ಲವೆ ಉಪಯೋಗಿಸಲಾಗಿರದಿದ್ದರೆ, ಮರಣದ ಸಮಯಕ್ಕೆ ಇಳಿದು ಬರುವ ಆಸ್ತಿಯಲ್ಲಿ ಸಮಾವೇಶ ಮಾಡಲ್ಪಟ್ಟಿದೆಯೆಂದು ಗಣಿಸಲ್ಪಡುವ ಆಸ್ತಿಯೆಂದು ತಿಳಿಯಲ್ಪಡಲಾಗುವುದು. ಮತ್ತು ೨೫ ನೆಯ ಕಲಮಿನಲ್ಲಿ ಏನೇ ಹೇಳಲಾಗಿ ದ್ದರೂ, ಆ ಹಣ ಇಲ್ಲವೆ ಹಣದ ಕಿಮ್ಮತ್ತಿನ ವಿಷಯವಾಗಿ ವಾರಸಾಕರವು

(೩) ಕಲಮು ೧೬ ರ ಉಪಕಲಮು (೨) ಆ ಕಲಮಿನ ಉದ್ದೇಶ ಕ್ಕಾಗಿ ಪರಿಣಾಮಕಾರಿಯಾಗುವಂತೆಯೇ ಈ ಕಲಮಿನ ಉದ್ದೇಶಕ್ಕಾಗಿಯೂ ಪರಿಣಾಮಕಾರಿಯಾಗುವುದು.

**ವಿವೇಚನೆ:**

ಈ ಕಾಯಿದೆಯ ೪೪ ನೆಯ ಕಲಮಿನನ್ವಯವಾಗಿ ಸಾಲ ಇಲ್ಲವೆ ಋಣಭಾರ ಗಳಿಗೆ ಕಡಿತದ ವಿನಾಯತಿಯನ್ನು ಅನುಮತಿಸುವುದರ ಮೇಲೆ ಹೆಚ್ಚಿನ ನಿರ್ಬಂಧ

ಮಿತಿಯನ್ನು ಈ ೪೬ ನೆಯ ಕಲಮು ಹಾಕುವುದು. ಸಾಲದ ಅನುಕೂಲತೆಯನ್ನು ಒದಗಿಸುವ ಉದ್ದೇಶದಿಂದ ಸಾಹುಕಾರನೊಬ್ಬನು ಮೃತನಿಂದ ಆಸ್ತಿಯನ್ನು ಪಡೆದಿದ್ದರೆ, ಆಸ್ತಿಯ ಬೆಲೆಗೆ ಅವನು ಕೊಟ್ಟ ಪ್ರತಿ ಬೆಲೆಯ ಪ್ರಮಾಣದಲ್ಲಿ ವಿನಾಯತಿ ಕೊಡಲು ಮತ್ತು ಆ ಮಟ್ಟಿಗೆ ಒಟ್ಟಿನಲ್ಲಿಯ ವಿನಾಯತಿಯ ರೂಪದಲ್ಲಿ ಕಡಿತವನ್ನು ಕಡಿಮೆ ಮಾಡಲು ಈ ಕಲಮು ಇದೆ. ಉದಾಹರಣೆ (೧) ಅನು ತನ್ನ ಮಗನಾದ ಬನಿಗೆ ಎರಡು ಸಾವಿರ ರೂಪಾಯಿ ಕೊಡುತ್ತಾನೆ. ಕೆಲ ಸಮಯದ ನಂತರ ಬನಿಂದ ಅನು ಎರಡು ಸಾವಿರ ರೂಪಾಯಿ ಸಾಲ ತೆಗೆದು ಕೊಳ್ಳುತ್ತಾನೆ. ಈ ಸಾಲವು ಕಡಿತಯೋಗ್ಯವಾಗಲಾರದು; (೨) ಅನು ತನ್ನ ಮಗನಾದ ಬನಿಗೆ ೧೦೦೦೦ ರೂಪಾಯಿ ಕೊಡುತ್ತಾನೆ. ಮುಂದೆ ಒಂದು ವರುಷದ ನಂತರ ಬನಿಂದ ಅನು ೩೦೦೦ ರೂಪಾಯಿ ಸಾಲ ಪಡೆಯುತ್ತಾನೆ. ಮೊದಲು ದಾನ ಕೊಟ್ಟಾಗ ಹೀಗೆ ಸಾಲಪಡೆಯಬೇಕೆಂದು ವಿಚಾರ ಕೂಡ ಮಾಡಿದ್ದಿಲ್ಲವೆಂದು ಮಗನು ಸಿದ್ಧಮಾಡಿ ಕೊಡದಿದ್ದರೆ, ಆ ಸಾಲಕ್ಕೆ ಕಡಿತದ ವಿನಾಯತಿ ದೊರೆಯುವುದಿಲ್ಲ.

ದಾನ ಕೊಟ್ಟಂತೆ ಮಾಡಿ ಸಾಲ ಪಡೆದು ಸಾಲವೆಂದು ಕರಯೋಗ್ಯ ಆಸ್ತಿಯಲ್ಲಿಂದ ಕಡಿತದ ವಿನಾಯತಿ ಪಡೆಯುವ ಹವಣಿಕೆಯನ್ನು ತಪ್ಪಿಸುವುದೇ ಈ ಕಲಮಿನ ಉದ್ದೇಶವಾಗಿದೆ. ೪೪ನೆಯ ಕಲಮಿನನ್ವಯವಾಗಿ ಬರುವ ಸಾಲ ಇಲ್ಲವೆ ಋಣಭಾರಗಳ ಸಂಬಂಧವಾಗಿ ಈ ಕಲಮು ಇದೆಯೆಂಬುದನ್ನು ನೆನೆಯಬೇಕು. ದಾನ ಮತ್ತು ಸಾಲಗಳು ಎರಡು ಪ್ರತ್ಯೇಕವಾದ ವ್ಯವಹಾರಗಳಾದರೆ ಈ ಕಲಮು ಹತ್ತುವುದಿಲ್ಲ. **ಉದಾಹರಣೆ:** ಅನು ತನ್ನ ಮನೆಯೊಂದನ್ನು ಬನಿಗೆ ದಾನವಾಗಿ ಕೊಡುತ್ತಾನೆ. ಬನು ಅದನ್ನು ಪೂರ್ಣ ಪ್ರತಿಬೆಲೆಗಾಗಿ ಕನಿಗೆ ಮಾರುತ್ತಾನೆ. ಕನು ಅನಿಗೆ ಸಾಲಕೊಟ್ಟರೆ, ಮೊದಲಿನ ದಾನಕ್ಕೂ ಎರಡನೆಯ ಸಾಲಕ್ಕೂ ಸಂಬಂಧ ಬರದು. ಕನು ಅನಿಂದ ಆಸ್ತಿಯನ್ನು ಪಡೆದನೆಂದು ಆಗುವುದಿಲ್ಲ.

**೪೭ ಆ ದೇಶದಲ್ಲಿ ಕರಕೊಟ್ಟ ಆಸ್ತಿಯೊಳಗಿಂದಲ್ಲದೆ, ಪರದೇಶ ರಹಿವಾಸಿಯಾಗಿದ್ದ ವ್ಯಕ್ತಿಗೆ ಕೊಟ್ಟ ಸಾಲವನ್ನು ಪ್ರಥಮದಲ್ಲಿಯೇ ಕಡಿಯಲಾಗದು.**

ಈ ಕಾಯಿದೆಯು ಅನ್ವಯಿಸುವ ಪ್ರದೇಶಗಳ ಹೊರಗೆ ವಾಸಿಸುವ ವ್ಯಕ್ತಿಗಳಿಗೆ ಮೃತನಿಂದ ಕೊಡಲ್ಪಡಬೇಕಾಗಿರುವ ಸಾಲಗಳಿಗಾಗಿ (ಆ ಪ್ರದೇಶಗಳಲ್ಲಿಯೆ ಸಾಲ ಮುಟ್ಟಿಸಬೇಕೆಂದು ಕರಾರು ಆಗಿರದಿದ್ದರೆ ಇಲ್ಲವೆ ಆ ಪ್ರದೇಶಗಳಲ್ಲಿ ಇರುವ ಆಸ್ತಿಗಳ ಮೇಲೆ ಭಾರಹಾಕಿರದಿದ್ದರೆ) ಮೇಲೆ ಹೇಳಿದ ಪ್ರದೇಶಗಳ ಹೊರಗೆ ಇರುವ ಆಸ್ತಿಯು, ಯಾವ ಆಸ್ತಿಯ ಬಗ್ಗೆ ವಾರಸಾಕರ ಕೊಡಲ್ಪಟ್ಟಿದೆಯೋ ಆ ಆಸ್ತಿಯ ಬೆಲೆಯೊಳಗಿಂದಲ್ಲದೆ ಪ್ರಥಮತಃ ಯಾವುದೇ ಕಡಿತದ ವಿನಾಯತಿ ಮಾಡಲಾಗದು; ಇಂತಹ ಸಾಲಗಳಿಗಾಗಿ ಯಾರಿಗೆ ಸಾಲದ

ಹಣವು ಮುಟ್ಟಿಸಲ್ಪಡಬೇಕು ಆ ವ್ಯಕ್ತಿಯು ವಾಸಿಸುತ್ತಿರುವ ಪರದೇಶದಲ್ಲಿ ಇರುವ ಮೃತನ ಆಸ್ತಿಯು ಸಾಲ ಮುಟ್ಟಿಸಲು ಸಾಕಷ್ಟಾಗುವುದಿಲ್ಲವೆಂದು ನಿಯಂತ್ರಕನಿಗೆ ಸಮಾಧಾನ ವಾಗುವಂತೆ ತೋರಿಸುವಷ್ಟು ಮಟ್ಟಿಗೆ ಹೊರ ತಾಗಿ ವಾರಸಾಕರವನ್ನು ಮರಳಿ ಕೊಡಲಾಗದು.

**ವಿವೇಚನೆ :**

ಪರದೇಶದಲ್ಲಿದ್ದ ಆಸ್ತಿಯ ಬಗ್ಗೆ ಮುಕ್ತತೆ ಮತ್ತು ಒಂದೇ ಆಸ್ತಿಯ ಮೇಲೆ ಎರಡು ಸಲ ವಾರಸಾಕರ ಬೀಳದಂತೆ ತಡೆಯಲು ಈ ಮೊದಲು ಕಲಮು ೨೧ ಮತ್ತು ೩೦ ರಲ್ಲಿ ಹೇಳಲಾಗಿದೆ. ಯಾವ ದೇಶದಲ್ಲಿ ಸಾಲವಿರುವುದೋ ಆ ದೇಶದಲ್ಲಿರುವ ಸೊತ್ತುಗಳೊಳಗಿಂದಲೇ ಆ ಸಾಲವನ್ನು ಮೊದಲು ತೀರಿಸಬೇಕೆಂಬುದು ಸ್ಥಾಪಿತ ವಾದ ಕಾಯಿದೆಯ ತತ್ವ. ಅಲ್ಲಿಯ ಸಾಲ ಭಾರವನ್ನು ಪೂರೈಸಿದ ನಂತರ ಹೆಚ್ಚಾದ ಸೊತ್ತುಗಳನ್ನು ಮಾಲಕನ ರಹಿವಾಸದ ದೇಶಕ್ಕೆ ಹಸ್ತಾಂತರಿಸಬೇಕು. ಅದ ಕ್ಕಾಗಿ ಈ ಕಾಯಿದೆಯು ಅನ್ವಯಿಸುವ ಪ್ರದೇಶಗಳ ಹೊರಗೆ ಇರುವ ಪ್ರದೇಶಗಳಲ್ಲಿ ರುವ ಸಾಲಗಳಿಗೆ ಪ್ರಥಮದಲ್ಲಿಯೆ ಕಡಿತದ ವಿನಾಯತಿಯು ದೊರೆಯದು. ಪರದೇಶ ಗಳಲ್ಲಿಯ ಸಾಲಕ್ಕೆ ಪರದೇಶದ ಸೊತ್ತುಗಳು ಸಾಕಷ್ಟು ಆಗುವುದಿಲ್ಲವೆಂದು ನಿಯಂತ್ರ ಕನಿಗೆ ಸಮಾಧಾನವಾಗುವಂತೆ ತೋರಿದರೆ ಮಾತ್ರ ಮತ್ತು ಎಷ್ಟು ಮಟ್ಟಿಗೆ ಕಡಿಮೆ ಯಾಗುವುದೋ ಆ ಮಟ್ಟಿಗೆ ವಾರಸಾಕರ ಕೊಡಬೇಕಾಗುವುದು. ಆ ಮಟ್ಟಿಗೆ ಮುಖ್ಯ ಆಸ್ತಿಯ ಬೆಲೆಯಿಂದ ಕಡಿತ ಮಾಡಲಾಗುವುದು

**೪೮ ಪರದೇಶದಲ್ಲಿಯ ಆಸ್ತಿಯ ಆಡಳಿತ ನಡಸುವ ಇಲ್ಲವೆ ಅದನ್ನು ಪಡೆಯುವ ವೆಚ್ಚ ಕ್ಕಾಗಿ ಕೆಲ ನಿಶ್ಚಿತ ಮಿತಿಗಳ ವರೆಗೆ ವಿನಾಯತಿ ಕೊಡಬಹುದು.**

ಈ ಕಾಯಿದೆಯು ವ್ಯಾಪಿಸುವ ಪ್ರದೇಶಗಳ ಹೊರಗೆ ಇರುವುದೆಂಬ ಕಾರಣಕ್ಕಾಗಿ ಆ ಆಸ್ತಿಯ ಆಡಳಿತಕ್ಕಾಗಿ ಇಲ್ಲವೆ ಅದನ್ನು ಪಡೆಯುವುದ ಕ್ಕಾಗಿ ಹೆಚ್ಚಿನ ಯಾವುದೇ ವೆಚ್ಚವಾಗಿದೆಯೆಂದು ನಿಯಂತ್ರಕನಿಗೆ ಸಮಾಧಾ ನವಾದರೆ, ಇಂತಹ ವೆಚ್ಚಕ್ಕಾಗಿ ಆಸ್ತಿಯ ಬೆಲೆಯೊಳಗಿಂದ ಯಾವುದೇ ಸಂದ ರ್ಭದಲ್ಲಿ ಆ ಆಸ್ತಿಯ ಬೆಲೆಯ ಐದು ಶತಾಂಶದಕಿಂತ ಹೆಚ್ಚು ಆಗದಷ್ಟು ಕಡಿ ತಕ್ಕೆ ಅವನು ಅನುಮತಿಸಬಹುದು.

**ವಿವೇಚನೆ :**

ಕರಪಾತ್ರವಾಗಿರುವ ಆಸ್ತಿಯ ಮುಖ್ಯ ಬೆಲೆಯೊಳಗಿಂದ ಆ ಆಸ್ತಿಯ ಆಡಳಿತ ವೆಚ್ಚವನ್ನು ಕಡಿದು ಕೊಳ್ಳಲು ಸಾಮಾನ್ಯವಾಗಿ ಬರಲಾರದು. ಅದಕ್ಕಾಗಿ ಈ ಕಲ ಮಿನ ಮೂಲಕ ನಿಯಂತ್ರಕನಿಗೆ ಅಧಿಕಾರ ಕೊಡಲಾಗಿದೆ. ಆ ಆಸ್ತಿಯು ಈ ಕಾಯಿ

ವೆಯ ಅಧಿಕಾರ ಕ್ಷೇತ್ರದ ಹೊರಗಿನ ಪ್ರದೇಶದಲ್ಲಿರಬೇಕು. ಅದನ್ನು ಪಡೆಯಲು ಇಲ್ಲವೆ ಆಡಳಿತ ನಡಸಲು ಹೆಚ್ಚಿನ ವೆಚ್ಚ ಹತ್ತುತ್ತಿರಬೇಕು. ಅಂತಹದು ನಿಯಂತ್ರಕನಿಗೆ ಸಮಾಧಾನವಾಗುವಂತಿರಬೇಕು.ಅಂದರೆ ಆಸ್ತಿಯ ಬೆಲೆಯ ಐದುಶತಾಂಶದಕಿಂತ ಹೆಚ್ಚು ಆಗದಷ್ಟು ವೆಚ್ಚವಿದ್ದರೆ ಅವನ್ನು ಮುಖ್ಯ ಬೆಲೆಯೊಳಗಿಂದ ಕಡಿಯಲು ನಿಯಂತ್ರಕನು ಅನುಮತಿಸಲುಬಹುದು, ಎಂದು ಈ ಕಲಮು ಹೇಳುತ್ತದೆ.

**೪೯ ಪರಸ್ಪರ ಸಹಕಾರವಿಲ್ಲದ ದೇಶದಲ್ಲಿ ಕೊಡಲಾದ ಕರಕ್ಕಾಗಿ ಕಡಿತದ ವಿನಾಯತಿ**

ಮೃತನ ಮರಣದ ಮೂಲಕ ಇಳಿದು ಬರುವ ಯಾವುದೇ ಆಸ್ತಿಯು ಪರಸ್ಪರ ಸಹಕಾರ ಇಲ್ಲದ ದೇಶದಲ್ಲಿ ಇದ್ದರೆ, ಮತ್ತು ಇಂತಹ ಮರಣದ ಕಾರಣದಿಂದ ಆ ಆಸ್ತಿಯ ವಿಷಯವಾಗಿ ಆ ದೇಶದಲ್ಲಿ ಕರ ಕೊಡಬೇಕಾಗಿ ಬಂದಿದೆಯೆಂದು ನಿಯಂತ್ರಕನಿಗೆ ಸಮಾಧಾನವಾಗಿದ್ದರೆ, ಬೋರ್ಡು ಈ ಸಂಬಂಧದಲ್ಲಿ ಮಾಡಬಹುದಾದ ನಿಯಮಗಳಂಕಿತವಾಗಿ ಹಾಗೆ ಕೊಡಲಾದ ಕರದ ಇಡಿ ಹಣವನ್ನು ಇಲ್ಲವೆ ಅದರ ಭಾಗವನ್ನು ಆಸ್ತಿಯ ಬೆಲೆಯೊಳಗಿಂದ ಕಡಿಯಲು ಅನುಮತಿಸಬಹುದು.

**ವಿವರಣೆ:** ಈ ಕಲಮಿನಲ್ಲಿಯ "ಪರಸ್ಪರ ಸಹಕಾರ ಇಲ್ಲದ ದೇಶ" ಎಂದರೆ ಭಾರತವಲ್ಲದೆ ಬೇರೆ ದೇಶವಾಗಿದ್ದು ಈ ಕಾಯಿದೆಯ ಉದ್ದೇಶಗಳಿಗಾಗಿ ಪರಸ್ಪರ ಸಹಕಾರಿ ದೇಶವೆಂದು ಸಾರಲಾಗಿರವೆಇದ್ದ ದೇಶವೆಂದು ಅರ್ಥವಾಗುವುದು.

**ವಿವೇಚನೆ:**

ಈ ಕಾಯಿದೆಯ ೩೦ ನೆಯ ಕಲಮಿನ ವಿವರಣೆಯಲ್ಲಿ ಪರಸ್ಪರ ಸಹಕಾರಿ ದೇಶವೆಂಬುದನ್ನು ವರ್ಣಿಸಲಾಗಿದೆ. ಆ ವರ್ಣನೆಯಲ್ಲಿ ಬಾರದೇ ಇದ್ದ ದೇಶವು ಪರಸ್ಪರ ಸಹಕಾರ ಇಲ್ಲದ ದೇಶವಾಗುವುದು. ಅಂತಹ ದೇಶದಲ್ಲಿ ಮೃತನ ಆಸ್ತಿ ಇದ್ದರೆ, ಮತ್ತು ಆ ಆಸ್ತಿಯ ಮೇಲೆ ಆ ದೇಶದಲ್ಲಿ ಕರ ಹಾಕಲಾಗಿದ್ದರೆ, ಆ ಕರದ ಹಣವನ್ನು ಇಡಿಯಾಗಿ ಇಲ್ಲವೆ ಕೆಲ ಭಾಗದಷ್ಟು ಬೋರ್ಡು ಈ ಸಂಬಂಧದಲ್ಲಿ ಮಾಡುವ ನಿಯಮಗಳಂಕಿತವಾಗಿ ಆಸ್ತಿಯ ಮುಖ್ಯ ಬೆಲೆಯೊಳಗಿಂದ ಕಡಿಯಲು ನಿಯಂತ್ರಕನು ಅನುಮತಿಸಬಹುದು, ಎಂದು ಈ ಕಲಮು ಹೇಳುತ್ತದೆ. ಕಡಿತದ ವಿನಾಯತಿಯ ಬಗ್ಗೆ **ನಿಯಮ ೧೮** ವಿಶದಮಾಡುವುದು.

**೫೦ ಮೃತನ ಆಸ್ತಿಗಾಗಿ ಪ್ರತಿನಿಧಿತ್ವವನ್ನು ಪಡೆಯುವುದಕ್ಕೆ ಎಲ್ಲಿ ಕೋರ್ಟ ಫೀ ಕೊಡಲಾಗಿದೆಯೋ ಅಲ್ಲಿ ವಾರಸಾಕರದಿಂದ ಪರಿಹಾರ**

ಜಮ್ಮು ಮತ್ತು ಕಾಶ್ಮೀರ ರಾಜ್ಯವನ್ನು ಬಿಟ್ಟು ಉಳಿದ ಯಾವುದೇ ರಾಜ್ಯದಲ್ಲಿ ಜಾರಿಯಲ್ಲಿರುವ ಕೋರ್ಟ ಫೀ ಸಂಬಂಧವಾಗಿರುವ ಯಾವುದೇ

ಕಾಯಿದೆಯನ್ವಯವಾಗಿ, ಈ ಕಾಯಿದೆಯನ್ವಯವಾಗಿ ಯಾವ ಆಸ್ತಿಯ ಬಗ್ಗೆ ವಾರಸಾಕರ ಕೊಡಬೇಕಾಗಿದೆಯೋ ಆ ಆಸ್ತಿಯ ವಿಷಯವಾಗಿ ಪ್ರೋಬೇಟು ಆಡಳಿತ ಪತ್ರ ಇಲ್ಲವೆ, ಉತ್ತರಾಧಿಕಾರಿತ್ವ ಪ್ರಮಾಣ ಪತ್ರ ಪಡೆಯಲು ಕೋರ್ಟ ಫೀ ಕೊಡಲಾಗಿದ್ದರೆ, ಎಷ್ಟು ಕೋರ್ಟು ಫೀ ಕೊಡಲ್ಪಟ್ಟಿದೆಯೋ ಅಷ್ಟು ಹಣದ ಮಟ್ಟಿಗೆ, ಆ ಆಸ್ತಿಯ ಮೇಲೆ ಕೊಡಬೇಕಾದ ವಾರಸಾಕರ ಹಣದೊಳಗಿಂದ ಕಡಿಮೆ ಮಾಡಲ್ಪಡಲಾಗುವುದು.

**ವಿವೇಚನೆ:**

ಈ ಕಲಮಿನಲ್ಲಿ ಮೂರು ಮಾತುಗಳನ್ನು ಹೇಳಿದೆ.

(೧) ಯಾವುದೇ ಆಸ್ತಿಯ ಸಂಬಂಧವಾಗಿ ಜಮ್ಮು ಮತ್ತು ಕಾಶ್ಮೀರ ರಾಜ್ಯವನ್ನು ಬಿಟ್ಟು ಉಳಿದ ಯಾವುದೇ ರಾಜ್ಯದಲ್ಲಿ ಜಾರಿಯಲ್ಲಿರುವ ಕೋರ್ಟ ಫೀ ಕಾಯಿದೆಯನುಸಾರವಾಗಿ ಆ ಆಸ್ತಿಯ ಪ್ರೋಬೇಟು, ಆಡಳಿತ ಪತ್ರ ಇಲ್ಲವೆ ಉತ್ತರಾಧಿಕಾರಿತ್ವದ ಪ್ರಮಾಣಪತ್ರ ತೆಗೆದುಕೊಂಡು ಕೋರ್ಟ ಫೀ ಕೊಟ್ಟಿರಬೇಕು.

(೨) ಈ ಕೋರ್ಟ ಫೀಯು ವಾರಸಾಕರ ಯೋಗ್ಯವಾದ ಆಸ್ತಿಯ ಬಗ್ಗೆ ಕೊಟ್ಟಿರಬೇಕು.

(೩) ಹಾಗೆ ಕೊಟ್ಟಿದ್ದರೆ ಆ ಆಸ್ತಿಯ ಮೇಲೆ ಹಾಕಲಾಗುವ ವಾರಸಾಕರದ ಹಣದ ಮೊತ್ತದೊಳಗಿಂದ ಈ ಮೊದಲು ಕೊಡಲಾದ ಕೋರ್ಟ ಫೀ ಹಣದಷ್ಟು ಕಡಿಮೆ ಮಾಡಲಾಗುವುದು.



ವನ್ನು ಕಲಮು ೫೫ ರ ನ್ವಯವಾಗಿ ಕೊಡುವನು. ಈ ಕಾರ್ಯವು ಮರಣದ ನಂತರ ಆರು ತಿಂಗಳಲ್ಲಿ ಆಗಬೇಕಾಗುವುದರಿಂದ ಕೆಲವೊಂದು ಸಲ ಲೆಕ್ಕವು ಪೂರ್ತಿಯಾಗಿರುವುದಿಲ್ಲ. ಆರು ತಿಂಗಳ ಒಳಗೆ ನಾದರೆ ಪಡಿಸಿದ ಲೆಕ್ಕದಿಂದ ನಿಯಂತ್ರಕನಿಗೆ ವಾರಸಾಕರ ಯೋಗ್ಯವಾದ ಆಸ್ತಿಯಿದೆಯೆಂಬ ಬಗ್ಗೆ ಸೂಚನೆ ಕೊಟ್ಟಂತಾಗುವುದು. ಅವನು ಆ ಬಗ್ಗೆ ವಿಚಾರಣೆ ನಡಸಿ, ಒಪ್ಪಿಸಿದ ಲೆಕ್ಕ ಸರಿಯಾಗಿದೆಯೋ ಇಲ್ಲವೋ ಎಂಬುದನ್ನು ನೋಡುತ್ತಾನೆ. ಆ ಬಗ್ಗೆ ಮುಂದೆ ಯಾವ ಕ್ರಮ ಕೈಕೊಳ್ಳಬೇಕೆಂದು ವಿಚಾರಿಸುತ್ತಾನೆ. ಲೆಕ್ಕ ಒಪ್ಪಿಸಲು ಬಾಧ್ಯರಾದವರ ಕಡೆಯಿಂದ ಪೂರಕ ಲೆಕ್ಕವನ್ನು ಒಪ್ಪಿಸಿ ಕೊಳ್ಳುತ್ತಾನೆ. ಬೆಲೆ ಕಟ್ಟುವಿಕೆಯ ಬಗ್ಗೆಯಾಗಲಿ, ವಾರಸಾಕರ ಯೋಗ್ಯವಾದ ಆಸ್ತಿಯ ಮೊತ್ತವು ನಿರ್ಣಯಿಸುವುದಕ್ಕೆ ಆಗಲಿ, ವ್ಯಾಜ್ಯವುಂಟಾದರೆ ವ್ಯಾಜ್ಯದಲ್ಲಿ ಕಾಯಿದೆಯ ಪ್ರಶ್ನೆಎದರೆ ಅದ್ದರ ನಿರ್ಣಯಕ್ಕಾಗಿ ಹಾಯಕೋರ್ಟಿಗೆ ಇಲ್ಲವೆ ಆವಶ್ಯಕವೆನ್ನಿಸಿದರೆ ಸುಪ್ರೀಮ ಕೋರ್ಟಿಗೆ ಪ್ರಕರಣವನ್ನು ಒಯ್ಯಬಹುದು. ಆದರೆ ಕೊಡಬೇಕಾಗಿದ್ದ ವಾರಸಾಕರವು ಕೊಡಲ್ಪಟ್ಟರೆ ನಿಯಂತ್ರಕನು ಆ ಬಗ್ಗೆ ಒಂದು ಸರ್ಟಿಫಿಕೇಟು ಕೊಡಬೇಕಾಗುವುದು. ಸರ್ಟಿಫಿಕೇಟು ೬೭ ನೆಯ ಕಲಮಿನ ಉಪಕಲಮು (೧) ರ ಇಲ್ಲವೆ (೫) ರ ಅನ್ವಯವಾಗಿ ಕೊಡಬೇಕಾಗುವುದು. ಕೆಲವೊಂದು ಸಂದರ್ಭಗಳಲ್ಲಿ ಕಲಮು ೬೯ ರ ನ್ವಯವಾಗಿಯೂ ಕೊಡಬೇಕಾಗುವುದು. ಹೀಗೆ ಕಲಮು ೬೭ ಇಲ್ಲವೆ ೬೯ ರ ನ್ವಯವಾಗಿ ಕೊಡಲಾದ ಸರ್ಟಿಫಿಕೇಟುಗಳು ಯಾವ ಆಸ್ತಿಯ ಕರದ ಬಗ್ಗೆ ಕೊಡಲಾಗಿರುವುವೋ ಆ ಆಸ್ತಿಯನ್ನು ವಾರಸಾಕರ ಕೊಡುವಿಕೆಯ ಹೊಣೆಯಿಂದ ಕರ ಕೊಟ್ಟ ಬಗ್ಗೆ ಮುಕ್ತ ಮಾಡುವುವು. ಈ ಮುಕ್ತತೆಯು ಕಲಮು ೭೫ ರ ನ್ವಯವಾಗಿ ದೊರೆವುದು.

**೩೮ ನಿರೀಕ್ಷಣೆಯಲ್ಲಿದ್ದ ಹಿತಸಂಬಂಧದ ವಿಷಯವಾಗಿ ವಾರಸಾಕರದ ಪರಿವರ್ತನ**

ನಿರೀಕ್ಷಣೆಯಲ್ಲಿದ್ದ ಹಿತಸಂಬಂಧಕ್ಕೆ ಹಕ್ಕುದಾರನಾಗಿರುವ ವ್ಯಕ್ತಿಯಿಂದ ಮಾಡಲ್ಪಟ್ಟ ಅರ್ಜಿಯ ಮೇಲೆ ನಿಯಂತ್ರಕನು ತನ್ನ ವಿವೇಕಾಧಿಕಾರದಲ್ಲಿ ವಾರಸಾಕರವನ್ನು ಪರಿವರ್ತನ ಮಾಡಬಹುದು. ಯಾವುದು ಈ ಪರಿವರ್ತನವಾಗದಿದ್ದರೆ ಇಂತಹ ಹಿತಸಂಬಂಧದ ವಿಷಯವಾಗಿ ತಾತ್ಕಾಲಿಕವಾಗಿ ಒಂದು ನಿಶ್ಚಿತ ಹಣದಲ್ಲಿ ಕೊಡಬೇಕಾಗಿ ಬರುತ್ತಿತ್ತೋ ಇಲ್ಲವೆ ಬರಬಹುದಾಗಿದ್ದಿತೋ ಮತ್ತು ಆ ಹಣವನ್ನು ನಿಶ್ಚಿತಗೊಳಿಸಲು ಇಂತಹ ವಾರಸಾಕರದ ಬಗ್ಗೆ ತಾತ್ಕಾಲಿಕ ಬೆಲೆಯನ್ನು ಕಟ್ಟುವಂತೆ ಮಾಡಿಸಬಹುದು. ಹೀಗೆ ಬೆಲೆ ಕಟ್ಟುವಾಗ ವಾರಸಾಕರದ ಹಣ, ದರ ಮತ್ತು ಹೊಣೆಗಾರಿಕೆಗಳನ್ನು ಲಕ್ಷ್ಯಕ್ಕೆ ತರಬೇಕು. ಮತ್ತು ೩ ಶತಾಂಶ ಬಡ್ಡಿಯ ದರದಂತೆ ಆಕರಿಸಬೇಕು. ಇಷ್ಟು ಮಾಡಿದ ಮೇಲೆ ಗೊತ್ತು ಮಾಡಲ್ಪಟ್ಟ ವಾರಸಾಕರದ ಹಣವು ಪಾವತಿ ಮಾಡಲ್ಪಟ್ಟರೆ ನಿಯಂತ್ರಕನು ಆ ಬಗ್ಗೆ ಸರ್ಟಿಫಿಕೇಟು ಕೊಡಬೇಕು.

**ವಿವೇಚನೆ :**

ನಿರೀಕ್ಷಣೆಯಲ್ಲಿದ್ದ ಹಿತಸಂಬಂಧದ ಬಗ್ಗೆ ವಾರಸಾಕರವನ್ನು ಉಳಿದ ಆಸ್ತಿಯ ಜತೆಗೆಯಾಗಲೀ ಇಲ್ಲವೆ ಸ್ವಾಧೀನತೆಯಲ್ಲಿ ಬಂದ ಮೇಲಾಗಲೀ ಕೊಡಬಹುದು. ಇದರ ಬಗ್ಗೆ ಕಲಮು ೩೮ ರಲ್ಲಿ ಯಾವಾಗ ಕೊಡಬಹುದೆಂಬ ಬಗ್ಗೆ ಕೊಡುವವನಿಗೆ ಆಯ್ದುಕೊಳ್ಳಲು ಬಿಡಲಾಗಿದೆ. ಮುಂದೆ ಸ್ವಾಧೀನತೆಯಲ್ಲಿ ಬಂದ ಮೇಲೆ ಕೊಡುವುದರ ಬದಲು ಸದ್ಯಕ್ಕೆ ಆಗುವ ಅದರ ಬೆಲೆಯ ಮೇಲೆ ಕೊಡಬೇಕೆಂದರೆ ಲೆಕ್ಕ ಹೇಗೆ ಮಾಡಬೇಕೆಂಬುದನ್ನು ಈ ಕಲಮು ಹೇಳುತ್ತದೆ. ಮುಂದೆ ಎಂದು ಕೊಡಲು ಯೋಗ್ಯವಾಗುವುದು, ಆ ಕಾಲದವರೆಗೆ ಆ ಕರದ ಹಣದ ಮೊತ್ತದ ಮೇಲೆ ೩% ದರದಂತೆ ಬಡ್ಡಿ ಲೆಕ್ಕವನ್ನು ಗುಣಿಸಲಾಗುವುದು. ಈಗಿನ ದರ ಆಗಿನ ದರಗಳ ಎಣಿಕೆಯನ್ನು ಹಾಕಲಾಗುವುದು. ಇವೆಲ್ಲ ಮಾಡಿ ಸದ್ಯಕ್ಕೆ ಕೊಡಬೇಕಾದ ಹಣಕ್ಕೆ ನಿರೀಕ್ಷಣೆಯಲ್ಲಿದ್ದ ಹಿತಸಂಬಂಧವು ಸ್ವಾಧೀನತೆಯಲ್ಲಿ ಬಂದಾಗ ಆಗುವ ಹಣವನ್ನು ಪರಿವರ್ತಿಸಿ ನಿರ್ಣಯಿಸಲಾದರೆ, ಆ ಹಣವನ್ನು ಆ ಹಿತಸಂಬಂಧವನ್ನು ಪಡೆವವನು ಕೊಟ್ಟರೆ, ಆ ಬಗ್ಗೆ ನಿಯಂತ್ರಕನು ಒಂದು ಸರ್ಟಿಫಿಕೇಟನ್ನು ಕೊಡಬೇಕು ಎಂದು ಈ ಕಲಮು ಹೇಳುತ್ತದೆ.

**೬೯ ಜಟಿಲವಾದ ಪ್ರಕರಣಗಳಲ್ಲಿ ಕರದ ಆಕರಣೆ**

ಯಾವ ಆಸ್ತಿಯು ಇಳಿದು ಬಂದಿರುವುದೊ ಅದಕ್ಕೆ ಕಾರಣವಾದ ಅನೇಕ ಮರಣಗಳ ಮೂಲಕವಾಗಿ ಇಲ್ಲವೆ ಮರಣದ ಮೂಲಕ ಇಳಿದು ಬಂದ ಆಸ್ತಿಯಲ್ಲಿ ವಿವಿಧ ವ್ಯಕ್ತಿಗಳ ಹಿತಸಂಬಂಧಗಳ ಸ್ವಭಾವದ ಜಟಿಲತೆಯ ಮೂಲಕವಾಗಿ ಇಲ್ಲವೆ ಬೇರೆ ಯಾವುದೇ ಕಾರಣದಿಂದ ಯಾವುದೇ ಆಸ್ತಿಯ ಇಲ್ಲವೆ ಅದರಲ್ಲಿಯ ಹಿತಸಂಬಂಧದ ವಿಷಯವಾಗಿ ಕೊಡಬೇಕಾದ ವಾರಸಾಕರದ ನಿಕ್ಕಿ ಹಣವನ್ನು ನಿಶ್ಚಿತಗೊಳಿಸಲು ಕಠಿಣವಾದಾಗ ಆ ಆಸ್ತಿಯ ಇಲ್ಲವೆ ಹಿತಸಂಬಂಧದ ಬೆಲೆಯ ಪ್ರಮಾಣದ ದೃಷ್ಟಿಯಿಂದ ಹೆಚ್ಚಿಗೆ ವೆಚ್ಚ ವಿಲ್ಲದ ಹಾಗೆ ನಿಶ್ಚಿತಗೊಳಿಸಲು ಕಠಿಣವಾದಾಗ ವಾರಸಾಕರಕ್ಕಾಗಿ ಲೆಕ್ಕ ಒಪ್ಪಿಸಲು ಬಾಧ್ಯನಾದ ಯಾವುದೇ ವ್ಯಕ್ತಿಯು ಮಾಡಿಕೊಂಡ ಅರ್ಜಿಯ ಮೇಲೆ ಮತ್ತು ಬೋರ್ಡಿಗೆ ಆ ಆಸ್ತಿಯ ಹಣದ ಬಗ್ಗೆ ತನ್ನಲ್ಲಿದ್ದ ಎಲ್ಲ ಮಾಹಿತಿಯನ್ನು ಮತ್ತು ಆ ಆಸ್ತಿಯಲ್ಲಿದ್ದ ವಿವಿಧ ಹಿತಸಂಬಂಧಗಳ ಬಗ್ಗೆ ಇಲ್ಲವೆ ಇತರ ಪರಿಸ್ಥಿತಿಯ ಬಗ್ಗೆ ಮಾಹಿತಿಯನ್ನು ಅವನು ಕೊಟ್ಟ ಮೇಲೆ ಆ ಆಸ್ತಿಯ ಇಲ್ಲವೆ ಹಿತಸಂಬಂಧದ ವಿಷಯವಾಗಿ ಕೊಡಬೇಕಾದ ಯಾವುದೇ ಕರಗಳ ಇಲ್ಲವೆ ಎಲ್ಲ ಕರಗಳ ಬಗ್ಗೆ ಮತ್ತು ಅದರಲ್ಲಿಯ ವಿವಿಧ ಹಿತಸಂಬಂಧಗಳ ಇಲ್ಲವೆ ಅವುಗಳಲ್ಲಿಯ ಯಾವುದೇ ಹಿತಸಂಬಂಧದ ಬಗ್ಗೆ ರಾಜಿಯ ರೀತಿಯಲ್ಲಿ

ಬೋರ್ಡು ಆ ಆಸ್ತಿಯ ಮೇಲೆ ಇಲ್ಲವೆ ಹಿತಸಂಬಂಧದ ಮೇಲೆ ಪರಿಸ್ಥಿತಿಯಿಂದ ಯೋಗ್ಯವೆಂದು ಕಂಡುಬರುವಷ್ಟು ಹಣವನ್ನು ವಾರಸಾಕರವೆಂದು ಆಕರಿಸಬಹುದು ಮತ್ತು ಹಾಗೆ ಆಕರಿಸಲಾದ ಹಣವನ್ನು ಅಂತಹ ಆಸ್ತಿಯ ಇಲ್ಲವೆ ಹಿತಸಂಬಂಧದ ವಿಷಯವಾಗಿರುವ ವಾರಸಾಕರದ ಎಲ್ಲ ಬೇಡಿಕೆಯ ಪೂರ್ತಿಸಂದಾಯವೆಂದು ಸ್ವೀಕರಿಸಬಹುದು ಮತ್ತು ಆ ಬಗ್ಗೆ ಬೋರ್ಡು ಒಂದು ಸರ್ಟಿಫಿಕೇಟು ಕೊಡಬೇಕು.

**ವಿವೇಚನೆ**

ವಾರಸಾಕರ ಆಕರಣೆ ಮಾಡುವಾಗ ಅನೇಕ ಬಗೆಯ ತೊಡಕುಗಳು ಬರುವುವು. ಆಸ್ತಿಯು ಒಂದೇ ಇದ್ದರೂ ಮರಣ ಒಂದೇ ಆಗಿರದೆ ಅನೇಕ ಮರಣಗಳು ಆಗಿರಬಹುದು. ಮರಣ ಒಂದೇ ಆಗಿದ್ದರೂ ಆಸ್ತಿಯು ಒಂದೇ ಇದ್ದರೂ ವಾರಸದಾರರು ಅನೇಕರೂ ಭಿನ್ನಭಿನ್ನ ಪ್ರಮಾಣದ ಮತ್ತು ಸ್ವಭಾವದ ಹಿತಸಂಬಂಧವಿದ್ದವರು ಇರಬಹುದು. ಈ ಕಾರಣಗಳಿಂದ ಇಲ್ಲವೆ ಬೇರೆ ಕಾರಣಗಳಿಂದ ವಾರಸಾಕರದ ಹಣವನ್ನು ನಿಶ್ಚಿತಗೊಳಿಸಲು ಕಠಿಣವಾದಾಗ, ಬೋರ್ಡು ಸಂಬಂಧಪಟ್ಟವರ ಅರ್ಜಿಯು ಬಂದರೆ, ಆ ಬಗ್ಗೆ ಒಂದು ರಾಜಿ ಮಾಡಿಕೊಂಡು ಆ ಆಸ್ತಿಯ ಬಗ್ಗೆ ಒಂದು ಮೊತ್ತದಲ್ಲಿ ವಾರಸಾಕರವನ್ನು ನಿರ್ಣಯಿಸಬಹುದು. ಹೀಗೆ ನಿರ್ಣಯಿಸಲಾದ ಹಣವನ್ನು ಕೊಟ್ಟರೆ, ಆ ಆಸ್ತಿಯ ಬಗ್ಗೆ ಒಂದು ಮೊತ್ತದಲ್ಲಿ ವಾರಸಾಕರವನ್ನು ನಿರ್ಣಯಿಸಬಹುದು. ಹೀಗೆ ನಿರ್ಣಯಿಸಲಾದ ಹಣವನ್ನು ಕೊಟ್ಟರೆ, ಆ ಆಸ್ತಿಯ ಬಗ್ಗೆ ಎಲ್ಲ ವಾರಸಾಕರವು ಪೂರ್ತಿಸಂದಾಯವಾಯಿತೆಂದು ಬೋರ್ಡು ಸ್ವೀಕರಿಸಲು ಈ ಕಲಮು ಬೋರ್ಡಿಗೆ ಅಧಿಕಾರ ಕೊಡುತ್ತದೆ, ಮತ್ತು ವಾರಸಾಕರ ಪೂರ್ತಿಸಂದಾಯವಾದ ಬಗ್ಗೆ ಸರ್ಟಿಫಿಕೇಟು ಕೊಡಲು ಬೋರ್ಡಿಗೆ ಅಧಿಕಾರ ಕೊಟ್ಟು ಆ ಬಗ್ಗೆ ಲೆಕ್ಕ ಒಪ್ಪಿಸಿದವರಿಗೆ ರಕ್ಷಣೆ ಕೊಟ್ಟಿದೆ.

**೭೦ ಕೆಲ ಕರಾರುಗಳ ಮೇಲೆ ವಾರಸಾಕರ ಕೊಡುವುದನ್ನು ನಿಯಂತ್ರಕನು ಮುಂದೂಡಲು ಅನುಮತಿಸಬಹುದು.**

(೧) ಯಾವುದೇ ಆಸ್ತಿಯ ವಿಷಯವಾಗಿ ಹಾಕಲ್ಪಡುವ ವಾರಸಾಕರವು ಹೆಚ್ಚು ಹಾನಿಯಾಗದೆ ಕೊಡಿಸಲು ಸಾಧ್ಯವಿಲ್ಲೆಂದು ನಿಯಂತ್ರಕನಿಗೆ ಸಮಾಧಾನವಾಗಿರುವಾಗ ಅವನು ಕರ ಕೊಡುವುದನ್ನು, ತನಗೆ ಯೋಗ್ಯ ಕಂಡಂತಹ ಕಾಲಾವಧಿಯ ವರೆಗೆ, ಅಷ್ಟು ವ್ಯಾಪ್ತಿಯ ಮಟ್ಟಿಗೆ ಮತ್ತು ನಾಲ್ಕು ಶತಾಂಶದ ಕಿಂತ ಹೆಚ್ಚಿಗೆ ಆಗದಷ್ಟು ದರದಂತೆ ಇಲ್ಲವೆ ಆಸ್ತಿಯಿಂದ ಉತ್ಪನ್ನವಾಗುವ ಹೆಚ್ಚಿನ ದರದಂತೆ ಆಗುವ ಬಡ್ಡಿಯನ್ನು ಕೊಟ್ಟರೆ, ಇಲ್ಲವೆ ಇಲ್ಲವೆ ತನಗೆ ಯೋಗ್ಯ ಕಂಡ ಇತರ ಕರಾರುಗಳ ಮೇಲೆ ಮುಂದೂಡಬಹುದು.

(೨) ಉಪಕಲಮು (೧) ರಲ್ಲಿ ಏನೇ ಹೇಳಲಾಗಿದ್ದರೂ ಸ್ಥಾವರ ಆಸ್ತಿಯ ವಿಷಯವಾಗಿರುವ ವಾರಸಾಕರವನ್ನು ಲೆಕ್ಕ ಒಪ್ಪಿಸಲು ಬಾಧ್ಯನಾದವನ ಇಚ್ಛೆಯ ಪ್ರಕಾರ ಸಮನಾದ ಎಂಟು ವಾರ್ಷಿಕ ಕಂತುಗಳಲ್ಲಿ ಇಲ್ಲವೆ ಹದಿನಾರು ಷಾಣ್ಮಾಸಿಕ ಕಂತುಗಳಲ್ಲಿ ನೂರಕ್ಕೆ ವರುಷಕ್ಕೆ ನಾಲ್ಕು ದರದಂತೆ ಇಲ್ಲವೆ ಆಸ್ತಿಯಿಂದ ಉತ್ಪನ್ನವಾದ ಹೆಚ್ಚಿನ ದರದಂತೆ ಮೊದಲನೆಯ ಕಂತು ಕೊಡಲ್ಪಡಬೇಕಾಗಿರುವ ತಾರೀಖಿನಿಂದ ಬಡ್ಡಿ ಸಹಿತವಾಗಿ ಕೊಡಲ್ಪಡಬಹುದು. ಮತ್ತು ಇನ್ನೂ ಕೊಡಬೇಕಾಗಿ ಉಳಿದಿರುವ ಭಾಗದ ಹಣದ ಮೇಲಿನ ಬಡ್ಡಿಯನ್ನು ಮುಂದಿನ ಕಂತಿನ ಹಣಕ್ಕೆ ಜೋಡಿಸಲಾಗುವುದು. ಮತ್ತು ಹಾಗೆ ಜೋಡಿಸಿ ಆದ ಹಣವು ಕಂತು ಕೊಡುವ ಕಾಲಕ್ಕೆ ಕೊಡಲ್ಪಡಬೇಕು. ಮತ್ತು ಯಾವುದೇ ಕಾಲಕ್ಕೆ ಕೊಡಬೇಕಾಗಿ ಉಳಿದಿರುವ ವಾರಸಾಕರವು ಕೊಡಬೇಕಾದ ತಾರೀಖಿನ ವರೆಗೆ ಬಡ್ಡಿಸಹಿತವಾಗಿ ಯಾವುದೇ ಕಾಲಕ್ಕೆ ಕೊಡಲ್ಪಡಬಹುದು ಮತ್ತು ಆಸ್ತಿಯು ಮಾರಾಟವಾದ ಸಂದರ್ಭದಲ್ಲಿ ಮಾರಾಟವು ಪೂರ್ತಿಯಾದ ಕೂಡಲೆ ಕೊಡಲ್ಪಡಬೇಕು. ಮತ್ತು ಹಾಗೆ ಕೊಡದಿದ್ದರೆ ಕಲಮು ೭೩ ರಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ ಅದರ ವಸೂಲಿ ಮಾಡಲ್ಪಡಲಾಗುವುದು.

**ವಿವೇಚನೆ :**

ವಾರಸಾಕರವನ್ನು ಸರಕಾರವು ವಸೂಲು ಮಾಡುವುದೇನೋ ನಿಜ. ಆದರೆ ಅದರಿಂದ ಆಸ್ತಿಯ ಮಾಲಕರಿಗೆ ಅತೀವ ಹಾನಿಯಾಗುತ್ತಿದ್ದರೆ, ಅದರ ಬಗ್ಗೆ ನಿಯಂತ್ರಕನಿಗೆ ಸಮಾಧಾನವಾಗುವಂತಾದರೆ, ವಾರಸಾಕರವನ್ನು ಕೆಲ ಕಾಲಾವಧಿ ತಡೆದು ಕೊಡುವಂತೆ ಅವನು ಅನುಮತಿಸಲು ಈ ಕಲಮು ಅವನಿಗೆ ಅಧಿಕಾರ ಕೊಡುತ್ತದೆ. ತಡೆದು ಕೊಡಲು ಅನುಮತಿಸುವಾಗ ಕಾಲಾವಧಿಯನ್ನು ಬಡ್ಡಿಯ ದರವನ್ನು ಇತರ ಕರಾರುಗಳನ್ನು ನಿಯಂತ್ರಕನೇ ನಿರ್ಣಯಿಸುವನು.

ವಾರಸಾಕರವು ಸ್ಥಾವರ ಆಸ್ತಿಯ ಬಗ್ಗೆ ಇದ್ದರೆ ಕಂತಿನ ಅನುಕೂಲತೆ ಒದಗಿಸಲು ಈ ಕಲಮು ಅವಕಾಶ ಕೊಟ್ಟಿದೆ. ಸಮನಾದ ಎಂಟು ವಾರ್ಷಿಕ ಕಂತಾಗಲಿ ಇಲ್ಲವೆ ೧೬ ಷಾಣ್ಮಾಸಿಕ ಕಂತುಗಳಲ್ಲಿಯಾಗಲೀ ಕೊಡಬಹುದು. ಕಂತಿನಲ್ಲಿ ಕೊಡುವಾಗ ಕೊಡದೆ ಇದ್ದ ಕಂತುಗಳ ಬಗ್ಗೆ ಬಡ್ಡಿ ಕೊಡಬೇಕಾಗುವುದು. ಆ ಬಡ್ಡಿಯ ದರವನ್ನು ನಿಯಂತ್ರಕನು ನಿರ್ಣಯಿಸುವನು. ಕಂತಿನಿಂದ ಕೊಡಲು ಒಪ್ಪಿಕೊಂಡರೂ ಒಮ್ಮೆಲೆ ಆ ಹಣವನ್ನು ಆ ತಾರೀಖಿನ ವರೆಗೆ ಆದ ಬಡ್ಡಿ ಸಹಿತ ಕೊಡಬಹುದು. ಆಸ್ತಿಯು ಮಾರಾಟವಾದರೆ ಮಾರಾಟ ಪೂರ್ತಿಯಾದ ಕೂಡಲೆ ಕೊಡಬಹುದು. ಹಾಗೆ ಕೊಡದಿದ್ದರೆ ೭೩ನೆಯ ಕಲಮಿನಲ್ಲಿ ಹೇಳಿದ ರೀತಿಯಲ್ಲಿ ಆ ಹಣವನ್ನು ವಸೂಲಿ ಮಾಡಲಾಗುವುದು, ಎಂದೂ ಈ ಕಲಮು ಹೇಳುತ್ತದೆ.

೭೧ ಮರಣದಿಂದ ಇಪ್ಪತ್ತು ವರುಷಗಳ ವರೆಗೆ ಬಾಕಿ ಉಳಿದಿದ್ದ ವಾರಸಾಕರ ಮತ್ತು ಬಡ್ಡಿಯನ್ನು ಬೋರ್ಡು ಬಿಟ್ಟುಬಿಡಬಹುದು.

ಯಾವ ಮರಣದ ಮೂಲಕ ವಾರಸಾಕರವು ಕೊಡಲ್ಪಡಬೇಕಾಗಿ ಬರುವುದೋ ಆ ಮರಣದಿಂದ ಇಪ್ಪತ್ತು ವರುಷಗಳಾದ ನಂತರ ಯಾವುದೇ ವಾರಸಾಕರವು ಸಂದಾಯವಾಗದೆ ಬಾಕಿ ಉಳಿದಿದ್ದರೆ, ಬೋರ್ಡು, ಅದಕ್ಕೆ ಯೋಗ್ಯ ಕಂಡರೆ ಇಂತಹ ಲೆಕ್ಕ ಒಪ್ಪಿಸಲು ಬಾಧ್ಯನಾದ ಇಲ್ಲವೆ ಯಾವುದೇ ಹೊಣೆಗಾರನಾದ ಇಲ್ಲವೆ ಆಸ್ತಿಯಲ್ಲಿ ಆಸಕ್ತಿಯಿದ್ದ ಯಾವುದೇ ವ್ಯಕ್ತಿಯು ಮಾಡಿಕೊಂಡ ಅರ್ಜಿಯ ಮೇಲೆ, ಇಂತಹ ವಾರಸಾಕರ ಬಾಕಿಯನ್ನು ಇಲ್ಲವೆ ಅದರ ಯಾವುದೇ ಭಾಗವನ್ನು ಇಲ್ಲವೆ ಅದರ ಮೇಲಿನ ಬಡ್ಡಿಯನ್ನು ಬಿಟ್ಟು ಬಿಡಬಹುದು.

**ವಿವೇಚನೆ:**

ಬೋರ್ಡಿಗೆ ಕೊಡಲಾದ ಅಧಿಕಾರವಿದು. ಯಾವ ಮರಣದ ಮೂಲಕ ವಾರಸಾಕರವು ಬಾಕಿಯಾಗುವುದೋ ಆ ಮರಣ ಸಂಭವಿಸಿ ೨೦ ವರುಷಗಳಾದ ಮೇಲೆಯೂ ಇನ್ನೂ ವಾರಸಾಕರವು ಬಾಕಿಯಾಗಿ ಉಳಿದಿದ್ದರೆ, ಅದನ್ನು ಸೂಟು ಬಿಡಬೇಕೆಂದು ಅರ್ಜಿಮಾಡಿಕೊಂಡರೆ, ಆ ಬಾಕಿ ವಾರಸಾಕರವನ್ನು ಇಲ್ಲವೆ ಅದರ ಭಾಗವನ್ನು ಇಲ್ಲವೆ ಅದರ ಮೇಲಿನ ಬಡ್ಡಿಯನ್ನು ಬೋರ್ಡು ತನಗೆ ಯೋಗ್ಯಕಂಡರೆ ಸೂಟು ಬಿಡಬಹುದೆಂದು ಈ ಕಲಮು ಅಧಿಕಾರ ಕೊಡುತ್ತದೆ.

೭೨ ನಮೂನೆಗಳು.

ಈ ಕಾಯಿದೆಯ ಈ ಭಾಗದ ಉದ್ದೇಶಗಳಿಗಾಗಿ ಉಪಯೋಗಿಸಲಾದ ಎಲ್ಲ ಅಫೀಡವೇಟುಗಳು, ಲೆಕ್ಕಗಳು, ಸರ್ಟಿಫಿಕೇಟುಗಳು, ಹೇಳಿಕೆಗಳು ಮತ್ತು ನಮೂನೆಗಳು ಬೋರ್ಡಿನವರಿಂದ ಗೊತ್ತು ಮಾಡಲ್ಪಡಬಹುದಾದಂತಹ ವಾಗಿರುವುವು, ಮತ್ತು ಬೋರ್ಡು ಬಯಸಿದರೆ, ಅವು ಪ್ರತಿರೂಪದಲ್ಲಿ (ಡುಪ್ಲಿಕೇಟ್) ರಬೇಕು, ಮತ್ತು ಲೆಕ್ಕಗಳು, ಹೇಳಿಕೆಗಳು ಮತ್ತು ಬೋರ್ಡಿನಿಂದ ಗೊತ್ತು ಮಾಡಲ್ಪಟ್ಟ ರೀತಿಯಲ್ಲಿ ಪುಸ್ತಕಗಳನ್ನು ಮತ್ತು ದಸ್ತೈವಜುಗಳನ್ನು ಹಾಜರು ಮಾಡಿ ಪ್ರತಿಜ್ಞೆಸಹಿತವಾಗಿ ಒಪ್ಪಿಸಲ್ಪಡಬೇಕು ಮತ್ತು ಪ್ರಮಾಣಿಸಲ್ಪಡಬೇಕು ಮತ್ತು ಈ ಕಲಮಿನ ಕಕ್ಷೆಗಳು ಹೇಳಿದಂತೆ ನಡೆಯಲು ಯಾವನಾದರೂ ಬುದ್ಧಿಪೂರ್ವಕವಾಗಿ ತಪ್ಪಿದರೆ, ಕಲಮು ೫೬ ರಲ್ಲಿ ಹೇಳಲಾದ ದಂಡಕ್ಕೆ ಪಾತ್ರನಾಗುವನು.

**ವಿವೇಚನೆ :**

ಯಾವುದಕ್ಕಾದರೂ ಒಂದು ಕ್ರಮ-ಪದ್ಧತಿಬೇಕು. ಆದುದರಿಂದ ಈ ಕಾಯಿದೆ ಯನ್ವಯವಾಗಿ ಒಪ್ಪಿಸಬೇಕಾದ ಲೆಕ್ಕ, ಕೊಡಬೇಕಾದ ಹೇಳಿಕೆ, ಸರ್ಟಿಫಿಕೇಟು, ಮುಂತಾದವುಗಳು ಬೋರ್ಡು ಗೊತ್ತು ಮಾಡುವ ನಮೂನೆಯಲ್ಲಿ, ಆವಶ್ಯಕ ವಿವರ ಗಳುಳ್ಳಂತಹವು ಇರಬೇಕು. ಇದರಿಂದ ಕಾರ್ಯಕ್ಕೆ ಸೌಕರ್ಯ ಒದಗುವುದು. ಇಲ್ಲದೆ ಹೋದರೆ ಅಪೂರ್ಣ ಮಾಹಿತಿ ದೊರೆತು ಸುಮ್ಮನೆ ಕಾಲ ವಿಲಂಬವಾಗುವುದು. ಈ ಕಲಮಿನಲ್ಲಿ ಹೇಳಿದ ನಮೂನೆಯಲ್ಲಿ ಮಾಹಿತಿ ಕೊಡದೆ ಇರುವುದು ದಂಡಯೋಗ್ಯ ವಾಗುವುದು, ಎಂದು ಹೇಳಿರುವುದರಿಂದ ನಮೂನೆಗಳ ಮಹತ್ವವನ್ನು ಎತ್ತಿ ತೋರಿಸಿ ದಂತಾಗುವುದು.

**೭೩ ವಾರಸಾಕರ ಮತ್ತು ದಂಡಗಳ ವಸೂಲಿ.**

ಈ ಕಾಯಿದೆಯನ್ವಯವಾಗಿ ಕೊಡಬೇಕಾಗಿರುವ ಯಾವುದೇ ವಾರಸಾ ಕರ ಇಲ್ಲವೆ ಕೊರತೆ ಬಿದ್ದ ವಾರಸಾಕರ, ಮತ್ತು ಯಾವುದೇ ಬಡ್ಡಿ ಇಲ್ಲವೆ ದಂಡವು ನಿಯಂತ್ರಕನಿಂದ ಕೊಡಲ್ಪಟ್ಟ ಸರ್ಟಿಫಿಕೇಟಿನ ಮೇಲೆ, ಅದಕ್ಕಾಗಿ ಪಾತ್ರವಾಗಿರುವ ವ್ಯಕ್ತಿಯಿಂದ, ಅದು ಭೂಕಂದಾಯದ ಬಾಕಿಯಾಗಿರು ವಂತೆಯೆ ಯಾವುದೇ ರಾಜ್ಯದಲ್ಲಿಯ ಯಾವುದೇ ಕಲೆಕ್ಟರನಿಂದ ವಸೂಲಿ ಮಾಡಲ್ಪಡಲಾಗುವುದು.

**ವಿವೇಚನೆ :**

ವಾರಸಾಕರವು ಸರಕಾರಕ್ಕೆ ಕೊಡಬೇಕಾದ ಕರವು. ಅದನ್ನು ತಪ್ಪಿಸಲು ಆಗದು. ಕೊಡಬೇಕೆಂದು ವಿಧಿಸಲಾದ ಮೇಲೆ ಅದನ್ನು ಕೊಡಲೇಬೇಕು. ಬಾಕಿಯಾಗಿ ಉಳಿದ ವಾರಸಾಕರ, ದಂಡ, ಬಡ್ಡಿ, ಮುಂತಾದವುಗಳು ಭೂಕಂದಾಯದ ಬಾಕಿ ಉಳಿದರೆ ಕಲೆಕ್ಟರನು ಹೇಗೆ ವಸೂಲಿ ಮಾಡುವನೋ ಹಾಗೆಯೆ ಯಾವುದೇ ರಾಜ್ಯ ದಲ್ಲಿಯ ಯಾವುದೇ ಕಲೆಕ್ಟರನು ವಸೂಲಿ ಮಾಡಬೇಕೆಂದು ಈ ಕಲಮು ಹೇಳುತ್ತದೆ.

---

# ಭಾಗ ಎಂಟು

# ಆಸ್ತಿಯ ಮೇಲೆ ವಾರಸಾಕರದ ಭಾರ ಮತ್ತು ಅದನ್ನು ಎತ್ತುವುದಕ್ಕೆ ಅನುಕೂಲತೆಗಳು.

**೭೪ ವಾರಸಾಕರ ಪಾತ್ರವಾದ ಅಸ್ತಿಯ ಮೇಲೆ ವಾರಸಾಕರವು ಮೊದಲನೆಯ ಭಾರ.**

(೧) ಕಲಮು ೧೯ ರ ಕಕ್ಷೆಗಳಂಕಿತವಾಗಿ, ಮೃತನ ಮರಣದ ಮೂಲಕ ಇಳಿದು ಬರುವ ಸ್ಥಾವರ ಇಲ್ಲವೆ ಜಂಗಮ ಆಸ್ತಿಯ ವಿಷಯವಾಗಿ ಕೊಡಬೇಕಾದ ವಾರಸಾಕರವು ಹಾಗೆ ಇಳಿದು ಬರುವ ಸ್ಥಾವರ ಆಸ್ತಿ ( ಕೃಷಿ ಭೂಮಿಯನ್ನು ಒಳಗೊಂಡು ) ಯ ಮೇಲೆ, ಆ ಆಸ್ತಿಯು ಮೃತನ ಮರಣದ ಮೂಲಕ ಯಾರಲ್ಲಿಯೆ ಅಂತರ್ಗತವಾಗಿರಲಿ, ಈ ಕಾಯಿದೆಯ ಭಾಗ ಆರರಲ್ಲಿ ವಿನಾಯತಿ ಕೊಡಲಾದ ಸಾಲ ಮತ್ತು ಋಣ ಭಾರಗಳನ್ನು ಕಳೆದು, ಮೊದಲ ಭಾರವಾಗುವುದು; – ಮತ್ತು ಇಂತಹ ಆಸ್ತಿಯ ಯಾವುದೇ ಖಾಸಗೀ ಹಸ್ತಾಂತರವು ಇಲ್ಲವೆ ಒಪ್ಪಿಸಿ ಕೊಡುವುದು, ಇಂತಹ ವಾರಸಾಕರದ ವಿಷಯವಾಗಿರುವ ಬೇಡಿಕೆಯ ವಿರುದ್ಧವಾಗಿ ರದ್ದಾಗುವುದು.

(೨) ಮೃತನ ಮರಣದ ಮೂಲಕ ಯಾವುದು ಯಾವುದೇ ವ್ಯಕ್ತಿ ( ಮೃತನ ನ್ಯಾಯಿಕ ಪ್ರತಿನಿಧಿಯಲ್ಲದ ಬೇರೆ ವ್ಯಕ್ತಿ )ಗೆ ಇಳಿದು ಬರುವುದೋ ಆ ಜಂಗಮ ಆಸ್ತಿಯಲ್ಲಿಯ ಸ್ವಾಧೀನತೆಯಲ್ಲಿಯ ಯಾವುದೇ ಲಾಭದಾಯಕ ಹಿತಸಂಬಂಧದ ಬೆಲೆಯ ಪ್ರಮಾಣದಂತೆ ಆ ಆಸ್ತಿಯ ಮೇಲಿನ ವಾರಸಾಕರದ ಪ್ರಮಾಣದ ಮಟ್ಟಿಗೆ ಅಂತಹ ಹಿತಸಂಬಂಧದ ಮೇಲೆ ಮೊದಲ ಭಾರವಾಗುವುದು.

ಆದರೆ, ಆ ಆಸ್ತಿಯನ್ನು ನೋಟೀಸು ಇಲ್ಲದೆಯೆ ಪೂರ್ಣ ಪ್ರತಿ ಬೆಲೆಗಾಗಿ ಸದ್ಭಾವದಿಂದ ಕೊಂಡವನ ವಿರುದ್ಧವಾಗಿ ಆ ಆಸ್ತಿಯ ಮೇಲೆ ಹಾಗೆ ಭಾರ ಹಾಕಲ್ಪಡಲಾಗದು.

(೩) ನಿಯಂತ್ರಕನು, ತನಗೆ ಯೋಗ್ಯ ಕಂಡಂತಹ ಪರಿಸ್ಥಿತಿಯಲ್ಲಿ ಮತ್ತು ಅಂತಹ ಕರಾರುಗಳ ಮೇಲೆ ಈ ಕಲಮಿನನ್ವಯವಾಗಿರುವ ಸ್ಥಾವರ ಇಲ್ಲವೆ ಜಂಗಮ ಆಸ್ತಿಯ ಮೇಲಿನ ಭಾರದಿಂದ ಆ ಆಸ್ತಿಯನ್ನು ಇಡಿಯಾಗಿ ಇಲ್ಲವೆ ಅದರ ಯಾವುದೇ ಭಾಗವನ್ನು ಮುಕ್ತಮಾಡಬಹುದು.

**ವಿವೇಚನೆ :**

ಯಾವುದೊಂದು ಮರಣದ ಮೂಲಕ ಯಾವುದೊಂದು ಆಸ್ತಿಯು ವಾರಿಸಾ ಕರಪಾತ್ರವಾದರೆ, ಆ ಆಸ್ತಿಯ ಮೇಲೆ ವಾರಸಾಕರದ ಹಣವನ್ನು ಕೊಡುವುದಕ್ಕಾಗಿ ವಾರಸಾಕರದ ಹಣದಷ್ಟು ಮಟ್ಟಿಗೆ ಮೊದಲ ಭಾರವೆಂದು ಆಗುವುದು. ವಾರಸಾಕರ ಕೊಡುವ ತನಕ ಆ ಆಸ್ತಿಯು ಭಾರ ಮುಕ್ತವಲ್ಲ. ಮೊದಲು ಸ್ಥಾವರ ಆಸ್ತಿಯ ಮೇಲೆ ಭಾರ; ಹೀಗೆ ಭಾರವಿದ್ದ ಆಸ್ತಿಯನ್ನು ಖಾಸಗಿಯಾಗಿ ಮಾರಲಾಗದು. ಒಂದು ವೇಳೆ ಮಾರಿದರೆ, ಆ ಮಾರಾಟವು ರದ್ದು ಎಂದು ಆಗುವುದು. ಇಡಿ ಆಸ್ತಿಗೆ ಲಾಭದಾಯಕ ಹಿತಸಂಬಂಧವಿದ್ದ ಜಂಗಮ ಆಸ್ತಿಯು ಯಾವ ಪ್ರಮಾಣದಲ್ಲಿರುವುದೋ ಆ ಪ್ರಮಾಣದಲ್ಲಿ ಇಡಿ ವಾರಸಾಕರಕ್ಕೆ ಆ ಲಾಭದಾಯಕ ಹಿತಸಂಬಂಧದ ಮೇಲಿನ ವಾರಸಾಕರವು ಎಷ್ಟು ಆಗುವುದೋ ಅಷ್ಟರ ಮೇಲೆ ಜಂಗಮ ಆಸ್ತಿಯ ಮೇಲೆ ಮೊದಲ ಭಾರವಾಗುವುದು.

ಆದರೆ ವಾರಸಾಕರದ ಭಾರ ಇದೆಯೆಂಬ ಬಗ್ಗೆ ನೋಟೀಸು ಇಲ್ಲದೆ ಪೂರ್ಣ ಪ್ರತಿಬೆಲೆಗಾಗಿ ಸದ್ಭಾವದಿಂದ ಯಾವನು ಆಸ್ತಿಯನ್ನು ಮಾರಲಿಕ್ಕೆ ತೆಗೆದುಕೊಂಡಿರುವನೋ ಅವನ ವಿರುದ್ಧವಾಗಿ ವಾರಸಾಕರದ ಭಾರವು ಅಡ್ಡಿಯಾಗುವುದಿಲ್ಲ ಎಂದು ವಿಶದಮಾಡಿ ಸದ್ಭಾವದಿಂದ ಪೂರ್ಣ ಪ್ರತಿ ಬೆಲೆಗಾಗಿ ನೋಟೀಸು ಇಲ್ಲದೆ ಮಾರಲಿಕ್ಕೆ ತೆಗೆದುಕೊಂಡವನಿಗೆ ರಕ್ಷಣೆ ಕೊಡಲಾಗಿದೆ.

ಅಲ್ಲದೆ ನಿಯಂತ್ರಕನಿಗೆ ವಿವೇಕಾಧಿಕಾರವನ್ನೂ ಕೊಡಲಾಗಿದೆ. ಯೋಗ್ಯ ಪರಿಸ್ಥಿತಿಯಲ್ಲಿ ಯೋಗ್ಯ ಕರಾರಿನೊಂದಿಗೆ ನಿಯಂತ್ರಕನು ಯಾವುದೇ ಆಸ್ತಿಯ ಮೇಲಿನ ಭಾರವನ್ನು ಇಡಿಯಾಗಿ ಇಲ್ಲವೆ ಕೆಲಭಾಗದ ಮಟ್ಟಿಗೆ ಭಾರ ಮುಕ್ತಮಾಡಬಹುದು.

**೭೫ ಕೆಲವು ಪ್ರಕರಣಗಳಲ್ಲಿ ವಾರಸಾಕರದಿಂದ ಭಾರ ಮುಕ್ತತೆ**

ಕಲಮು ೬೭ ರ ನ್ವಯವಾಗಿ ನಿಯಂತ್ರಕನಿಂದ ಇಲ್ಲವೆ ಕಲಮು ೬೯ ರ ನ್ವಯವಾಗಿ ಬೋರ್ಡಿನಿಂದ ದಯಪಾಲಿಸಲಾದ ಸರ್ಟಿಫಿಕೇಟು ಅದರಲ್ಲಿ ಸಮಾವೇಶ ಮಾಡಲಾದ ಆಸ್ತಿಯನ್ನು ಮತ್ತು ಆ ಆಸ್ತಿಯ ವಿಷಯವಾಗಿ ಸರ್ಟಿಫಿಕೇಟು ಪಡೆದವನನ್ನು ವಾರಸಾಕರದ ಹೆಚ್ಚಿನ ಯಾವುದೇ ಬೇಡಿಕೆಯಿಂದ ಭಾರ ಮುಕ್ತ ಮಾಡುವುದು. ಆದರೆ, ವಂಚನೆಯ ಸಂದರ್ಭದಲ್ಲಿ ಇಲ್ಲವೆ ಆವಶ್ಯಕ ಸಂಗತಿಗಳನ್ನು ಪ್ರಕಟ ಪಡಿಸಲು ತಪ್ಪಿದ ಸಂದರ್ಭದಲ್ಲಿ ಯಾವುದೇ ವ್ಯಕ್ತಿಯನ್ನು ಇಲ್ಲವೆ ಆಸ್ತಿಯನ್ನು ವಾರಸಾಕರದಿಂದ ಭಾರ ಮುಕ್ತ ಮಾಡುವುದಿಲ್ಲ. ಮತ್ತು ಮರಣದ ಮೂಲಕ ಯಾವುದೇ ಆಸ್ತಿಯು ಇಳಿದು ಬಂದಿತೆಂದು ನಂತರ ಕಂಡು ಬರುವ ಆಸ್ತಿಯ ಬಗ್ಗೆ ಕೊಡಬೇಕಾದ

ವಾರಸಾಕರಕ್ಕೆ ಬಾಧಿಸುವುದಿಲ್ಲ; ಸರ್ಟಿಫಿಕೇಟದಲ್ಲಿ ಸಮಾವೇಶವಾದ ಆಸ್ತಿಯ ವಿಷಯವಾಗಿ ಆ ಆಸ್ತಿಯು ಇಳಿದು ಬಂದಿತೆಂದು ನಂತರ ಕಂಡು ಬಂದ ಕಾರಣಕ್ಕಾಗಿ ಯಾವುದೇ ಹೆಚ್ಚಿನ ವಾರಸಾಕರ ಕೊಡಬೇಕಾಗಿಲ್ಲ.

ಆದರೆ, ಯಾವುದೇ ಆಸ್ತಿಯ ವಿಷಯವಾಗಿ ಕೊಡಬೇಕಾದ ಎಲ್ಲ ವಾರಸಾಕರದ ಬಗ್ಗೆ ಭಾರಮುಕ್ತತೆ ಮಾಡಲಾಗಿದೆಯೆಂದು ಹೇಳುವ ಸರ್ಟಿಫಿಕೇಟು, ಆ ಸರ್ಟಿಫಿಕೇಟದಲ್ಲಿ ಸಮಾವೇಶವಾದ ಆಸ್ತಿಯನ್ನು ನೋಟೀಸು ಇಲ್ಲದೆ ಪೂರ್ಣಪ್ರತಿ ಬೆಲೆಗಾಗಿ ಸದ್ಭಾವದಿಂದ ಕೊಂಡವನನ್ನು, ಆ ಸರ್ಟಿಫಿಕೇಟು ಪಡೆಯುವಾಗ ಆಗಿರಬಹುದಾದ ಯಾವುದೇ ವಂಚನೆ ಇಲ್ಲವೆ ತಪ್ಪುಗಳಿದ್ದರೂ ಭಾರಮುಕ್ತಮಾಡುವುದು.

**ವಿವೇಚನೆ :**

ವಾರಸಾಕರ ಮುಟ್ಟಿದೆಯೆಂಬ ಬಗ್ಗೆ ನಿಯಂತ್ರಕನಿಂದ ಕಲಮು ೬೭ ರನ್ವಯವಾಗಿ ಕೊಡಲಾದ ಸರ್ಟಿಫಿಕೇಟು ಇಲ್ಲವೆ ಬೋರ್ಡಿನಿಂದ ೬೯ ನೆಯ ಕಲಮಿನನ್ವಯವಾಗಿ ಕೊಡಲಾದ ಸರ್ಟಿಫಿಕೇಟು ಆ ಆಸ್ತಿಯ ಬಗ್ಗೆ ಸರ್ಟಿಫಿಕೇಟು ಪಡೆದ ವ್ಯಕ್ತಿಯ ಬಗ್ಗೆ ಭಾರ ಮುಕ್ತತೆಯನ್ನು ಕೊಡುವುದು. ಇದರಿಂದ ಆ ಆಸ್ತಿಯು ಮತ್ತು ಆ ವ್ಯಕ್ತಿಯು ವಾರಸಾಕರದ ಹೊಣೆಯಿಂದ ಮುಕ್ತರಾದಂತೆ.

ಆದಷ್ಟೆ ಸರ್ಟಿಫಿಕೇಟು ಪಡೆವಾಗ ಪಡೆದವರು ವಂಚನೆ ಮಾಡಿದ್ದರೆ ಇಲ್ಲವೆ ಪ್ರಕಟಪಡಿಸಬೇಕಾದ ಸಂಗತಿಗಳನ್ನು ಬಚ್ಚಿಟ್ಟಿದ್ದರೆ, ಈ ಸರ್ಟಿಫಿಕೇಟು ಅವರನ್ನು ಇಲ್ಲವೆ ಆ ಆಸ್ತಿಯನ್ನು ಭಾರಮುಕ್ತಮಾಡುವುದಿಲ್ಲ. ಆದರೆ ಸರ್ಟಿಫಿಕೇಟದಲ್ಲಿ ಸಮಾವೇಶವಾದ ಆಸ್ತಿಯನ್ನು ನೋಟೀಸು ಇಲ್ಲದೆ, ಬೆಲೆಕೊಟ್ಟು ಸದ್ಭಾವದಿಂದ ಕೊಂಡವನಿಗೆ ಸರ್ಟಿಫಿಕೇಟು ಪಡೆವಾಗ ಆದ ವಂಚನೆ ಇಲ್ಲವೆ ತಪ್ಪು ಯಾವುದೇ ರೀತಿಯಿಂದ ಬಾಧಿಸುವುದಿಲ್ಲ.

**೭೩ ಕೆಲ ಪ್ರಕರಣಗಳಲ್ಲಿ, ಲೆಕ್ಕ ಒಪ್ಪಿಸಲು ಬಾಧ್ಯರಾದವರಿಗೆ, ಧರ್ಮದರ್ಶಿಗಳು ಮತ್ತು ಮಾಲಕರು ಮರಳಿ ಕೊಡಬೇಕು.**

ಕಲಮು ೫೩ ರನ್ವಯವಾಗಿ ಲೆಕ್ಕ ಒಪ್ಪಿಸಲು ಬಾಧ್ಯನಾದ ಯಾವುದೇ ವ್ಯಕ್ತಿಯು ತನಗೆ ಇಳಿದು ಬರದೇ ಇರುವ ಆಸ್ತಿಯ ವಿಷಯವಾಗಿ ವಾರಸಾಕರದ ಯಾವುದೇ ಭಾಗವನ್ನು ಕೊಟ್ಟರೆ ಸಂದರ್ಭ ಒದಗಿದಾಗ ಅದು ಆ ಆಸ್ತಿಯ ಧರ್ಮದರ್ಶಿಗಳಿಂದ ಇಲ್ಲವೆ ಮಾಲಕರಿಂದ ಆವನಿಗೆ ಮರಳಿ ಕೊಡಲ್ಪಡಬೇಕು.

**ವಿವೇಚನೆ:**

ವಾರಸಾಕರದ ಬಗ್ಗೆ ಲೆಕ್ಕ ಒಪ್ಪಿಸಲು ಬಾಧ್ಯನಾದವನು ವಾರಸಾಕರ ಕೊಡ ಬೇಕಾಗುವದು. ಆ ವ್ಯಕ್ತಿಯು ತನಗೆ ಇಳಿದು ಬರುವ ಆಸ್ತಿಯಲ್ಲದೆ ಬೇರೆ ಆಸ್ತಿಯ ಬಗ್ಗೆಯೂ ವಾರಸಾಕರ ಕೊಡಬಹುದಾಗಿದೆ. ಹಾಗೆ ಒಂದು ವೇಳೆ ಕೊಟ್ಟರೆ, ಅಂತಹ ಬೇರೆ ಆಸ್ತಿಯ ಬಗ್ಗೆ ಇರುವ ಧರ್ಮದರ್ಶಿಗಳು ಇಲ್ಲವೆ ಮಾಲಕರು ಆ ಆಸ್ತಿಯ ಬಗ್ಗೆ ಆ ವ್ಯಕ್ತಿಯು ಈ ಮೊದಲು ಕೊಟ್ಟಿದ್ದ ವಾರಸಾಕರದ ಭಾಗವನ್ನು ಮರಳಿ ಕೊಡ ಬೇಕು ಇದರಿಂದ ಸರಕಾರಕ್ಕೆ ಬರುವ ಕರವೂ ಬರುವದು; ಮಾತ್ರವಾಗದೆ ಇದ್ದ ವ್ಯಕ್ತಿಗಳಿಗೂ ಸಲ್ಲದ ಭಾರ ಬೀಳದು. ತಾವು ಕೊಡಬೇಕಾಗಿದ್ದದಕ್ಕಿಂತ ಹೆಚ್ಚಿಗೆ ಕೊಟ್ಟಿ ದ್ದರೆ ಸಂಬಂಧಪಟ್ಟವರು ಅವರಿಗೆ .ಅದನ್ನು ಮರಳಿ ಕೊಡಬೇಕೆಂದು ಈ ಕಲಮಿನ ಮೂಲಕ ವಿಧಿಸಲಾಗಿದೆ.

**೭೭ ವಾರಸಾಕರ ಕೊಡಲು ಇಲ್ಲವೆ ಈ ಮೊದಲು ಕೊಟ್ಟ ಹಣದ ಎತ್ತುವಳಿಗಾಗಿ ಅನು ಕೂಲತೆಗಳು.**

(೧) ಯಾವುದೇ ಆಸ್ತಿಯ ವಿಷಯವಾಗಿ ವಾರಸಾಕರವನ್ನು ಕೊಡಲು ಅಧಿಕರಿಸಲ್ಪಟ್ಟ ಇಲ್ಲವೆ ಕೇಳಿಕೊಳ್ಳಲ್ಪಟ್ಟ ವ್ಯಕ್ತಿಯು, ವಾರಸಾಕರವನ್ನು ಕೊಡುವುದರ ಉದ್ದೇಶಕ್ಕಾಗಿ ಇಲ್ಲವೆ ಆ ಮೊದಲು ಕೊಡಲ್ಪಟ್ಟಿದ್ದ ಹಣದ ಎತ್ತುವಳಿ ಮಾಡುವುದರ ಉದ್ದೇಶಕ್ಕಾಗಿ ಆ ಆಸ್ತಿಯು ಅವನಲ್ಲಿ ಅಂತರ್ಗತ ವಾಗಿರಲಿ ಬಿಡಲಿ, ಇಂತಹ ವಾರಸಾಕರದ ಹಣದ ಎತ್ತುವಳಿ ಮಾಡಲು, ಆ ಸಂಬಂಧವಾಗಿ ಅವನಿಂದ ಕೊಡಲ್ಪಟ್ಟ ಯಾವದೇ ಬಡ್ಡಿ ಇಲ್ಲವೆ ಮಾಡಿದ ವೆಚ್ಚದ ಹಣದ ಎತ್ತುವಳಿ ಮಾಡಲು ಆ ಆಸ್ತಿಯ ಇಲ್ಲವೆ ಅದರ ಯಾವುದೇ ಭಾಗದ ಮಾರಾಟವನ್ನು ಮಾಡಲು, ಇಲ್ಲವೆ ಒತ್ತಿ ಹಾಕಲು ಅಧಿಕಾರವುಳ್ಳವ ನಾಗುತ್ತಾನೆ. ಆದರೆ, ಇಂತಹ ಮಾರಾಟ, ಒತ್ತಿ ಇಲ್ಲವೆ ಮುಕ್ತಾಯವಾಗುವ ಭಾರದನ್ವಯವಾಗಿ ಕೊಡಬೇಕಾದ ಯಾವುದೇ ಹಣವು ( ಕೊಡಬೇಕಾಗಿದ್ದ ವಾರಸಾಕರವನ್ನು ಈ ಹಣವು ಇಲ್ಲವೆ ಅದರ ಭಾಗವು ಎಷ್ಟು ಮಟ್ಟಿಗೆ ಪ್ರತಿನಿಧಿ ಸುವುದೋ ಅಷ್ಟು ಹಣವು) ಎತ್ತುವಳಿ ಮಾಡಿದ ವ್ಯಕ್ತಿಗೆ ಕೊಡದೆ, ಯಾವ ನಿಂದ ಈ ಹಣವು ಎತ್ತಲ್ಪಟ್ಟದೆಯೊ ಅವನ ಇಚ್ಛೆಯನುಸಾರವಾಗಿ ನಿಯಂತ್ರ ಕನಿಗೆ ಕೊಡಲ್ಪಡಬಹುದು.

(೨) ಯಾವುದೇ ಆಸ್ತಿಯಲ್ಲಿ ಹಿತಸಂಬಂಧವಿದ್ದ ವ್ಯಕ್ತಿಯು ಆ ಆಸ್ತಿಯ ವಿಷಯವಾಗಿ ವಾರಸಾಕರ ಕೊಡುವನೋ ಅವನಿಗೆ ಆಸ್ತಿಯ ವಾರ ಸಾಕಾರಕ್ಕಾಗಿ ಒತ್ತಿ ಹಾಕಲ್ಪಟ್ಟು ಎತ್ತುವಳಿ ಮಾಡಿದ್ದರೆ ಆ ಆಸ್ತಿಯ ಮೇಲೆ ಆಗುವ ಭಾರದ ಅಧಿಕಾರಕ್ಕೆ ಅವನು ಹಕ್ಕುದಾರನಾಗುವನು.

(೩) ಒಂದು ನಿವೇಶನದಲ್ಲಿ ಒಳಗೊಂಡಿರುವ ಆಸ್ತಿಯ ಇಲ್ಲವೆ ವಿಶ್ವಸ್ತ ನಿಧಿಯಾಗಿರುವ ನಿವೇಶನದಲ್ಲಿಯ ಆಸ್ತಿಯ ಮಾರಾಟದಿಂದ ಬಂದ ಯಾವುದೇ ಹಣವು ನಿವೇಶನದಲ್ಲಿರುವ ಮತ್ತು ವಿಶ್ವಸ್ತ ನಿಧಿಯಾಗಿರುವ ಆಸ್ತಿಯ ವಿಷಯವಾಗಿ ಕೊಡಬೇಕಾದ ಯಾವುದೇ ವಾರಸಾಕರವನ್ನು ಕೊಡುವುದಕ್ಕಾಗಿ ವೆಚ್ಚ ಮಾಡಲ್ಪಡಬಹುದು.

**ವಿವೇಚನೆ:**

ವಾರಸಾಕರ ಕೊಡಲು ಬಾಧ್ಯನಾದವನು ವಾರಸಾಕರ ಕೊಡಲು ಅಧಿಕರಿಸಲ್ಪಟ್ಟಿದ್ದರೆ ಇಲ್ಲವೆ ವಾರಸಾಕರ ಕೊಡಬೇಕಾಗಿ ಒಂದರೆ ಅವನು ಆ ಬಗ್ಗೆ ಹಣವನ್ನು ವಾರಸಾಕರ ಯೋಗ್ಯವಾದ ಆಸ್ತಿಯ ಮಾರಾಟ, ಒತ್ತಿ, ಇಲ್ಲವೆ ಇತರ ಭಾರಹಾಕಿ ಹಣವನ್ನು ಎತ್ತಬಹುದು. ಅವನು ತಾನೇ ಬೇರೆ ಹಣದಿಂದ ವಾರಸಾಕರ ಕೊಟ್ಟಿದ್ದರೆ, ಅಷ್ಟು ಹಣದ ಮಟ್ಟಿಗೆ ಆ ಆಸ್ತಿಯು ಅವನಿಗೆ ಒತ್ತಿಯಿದ್ದ ಹಾಗೆ ಆಗುವುದು. ಈ ಕಲಮು ಹಿಂದಿನ ೭೬ ನೆಯ ಕಲಮಿನಂತೆ ವಾರಸಾಕರ ಕೊಟ್ಟ ವ್ಯಕ್ತಿಯನ್ನು ಆ ಕರ ಕೊಟ್ಟ ಹಣವನ್ನು ಪಡೆಯಲು ಸಂರಕ್ಷಿಸಿ ಅನುಕೂಲತೆ ಒದಗಿಸುವುದು. ಆ ಆಸ್ತಿಯ ಮೇಲೆ ಹೀಗೆ ಕರಕೊಟ್ಟವನ ಭಾರ ಉಳಿಯುವುದು. ಅವನು ಅದನ್ನು ಮಾರಾಟ ಮಾಡಿಸಬಹುದು, ಒತ್ತಿಹಾಕಬಹುದು. ಇಲ್ಲವೆ ಮುಕ್ತಾಯವಾಗುವ ಭಾರ ಹಾಕಬಹುದು.

---

# ಭಾಗ ಒಂಬತ್ತು

## ಸಂಕೀರ್ಣ

**೭೮ ಕೆಲವು ಸಂದರ್ಭಗಳಲ್ಲಿ ನ್ಯಾಯಾಲಯಗಳ ಅಧಿಕಾರ ಕ್ಷೇತ್ರಕ್ಕೆ ವಿರೋಧ.**

ಈ ಕಾಯಿದೆಯನ್ವಯವಾಗಿ ನಿಶ್ಚಿತಗೊಳಿಸಲಾದ ಯಾವುದೇ ವಾರಸಾಕರವನ್ನು ತಿದ್ದುಪಡಿ ಮಾಡಲು ಇಲ್ಲವೆ ಅಲ್ಲಗಳೆಯಲು ಯಾವುದೇ ದಿವಾಣಿ ನ್ಯಾಯಾಲಯದಲ್ಲಿ ಯಾವ ದಾವೆಯನ್ನು ತರಲಾಗದು. ಮತ್ತು ಈ ಕಾಯಿದೆಯನ್ವಯವಾಗಿ ಸದ್ಭಾವದಿಂದ ಮಾಡಲಾದ ಇಲ್ಲವೆ ಮಾಡಬೇಕೆಂದಿದ್ದ ಯಾವುದರ ಬಗ್ಗೆಯೂ ಯಾವುದೇ ಸರಕಾರೀ ಅಧಿಕಾರಿಯ ವಿರುದ್ಧ ಯಾವುದೇ ಅಪರಾಧಿಕ ವಿಚಾರಣೆಯ ದಾವೆಯಾಗಲಿ ಇಲ್ಲವೆ ಇತರ ನ್ಯಾಯಿಕ ಕಾರ್ಯಕಲಾಪಗಳಾಗಲಿ ಉಂಟಾಗಲಾರವು.

**ವಿವೇಚನೆ:**

ಈ ಕಲಮು ಸರಕಾರೀ ಅಧಿಕಾರಿಗಳನ್ನು ಅವರು ಸದ್ಭಾವದಿಂದ ಮಾಡಿದ ಕಾರ್ಯಗಳಿಗಾಗಿ ಸಂರಕ್ಷಿಸಲು ಇದೆ. ಸದ್ಭಾವದಿಂದ ಮಾಡಿರದೆ ಇದ್ದರೆ ಈ ಸಂರಕ್ಷಣೆಯು ದೊರೆಯುವುದಿಲ್ಲವೆಂದು ಸೂಚಿಸಿದಂತಾಗುವುದು. ಈ ಕಾಯಿದೆಯನ್ವಯವಾಗಿ ನಿಶ್ಚಿತಗೊಳಿಸಿದ ವಾರಸಾಕರದ ಮೊತ್ತವನ್ನು ತಿದ್ದಲು ಇಲ್ಲವೆ ನಿರ್ಣಯವನ್ನು ಅಲ್ಲಗಳೆಯಲು ದಿವಾಣಿ ನ್ಯಾಯಾಲಯಕ್ಕೆ ಅಧಿಕಾರವಿಲ್ಲೆಂದು ಹೇಳಿದ್ದರಿಂದ ಆ ಬಗ್ಗೆ ಅಲ್ಲಿ ದಾವಾ ಮಾಡಲು ಆಸ್ಪದವಿಲ್ಲವೆಂದು ಹೇಳಿದಂತಾಗುವುದು.

ಈ ಕಲಮಿನಿಂದ ಹಾಯಕೋರ್ಟಿನ ಇಲ್ಲವೆ ಸುಪ್ರೀಮ ಕೋರ್ಟಿನ ಅಧಿಕಾರವನ್ನು ಕಸಿದುಕೊಳ್ಳಲಾಗಿಲ್ಲವೆಂಬುದನ್ನು ಮರೆಯಲಾಗದು.

**೭೯ ಪ್ರತಿಜ್ಞೆಮಾಡಿಸಿ ಪುರಾವೆ ತೆಗೆದುಕೊಳ್ಳಲು ಮುಂತಾದ್ದಕ್ಕೆ ಅಧಿಕಾರ.**

ಕಲಮು ೪ರ ಉಪಕಲಮು (೧) ರಲ್ಲಿ ನಿರ್ದಿಷ್ಟಪಡಿಸಿದ, ಮತ್ತು ಮೌಲ್ಯಮಾಪಕರನ್ನು ಹೊರತುಪಡಿಸಿ ಪ್ರತಿಯೊಬ್ಬ ಅಧಿಕಾರಿಯು ಈ ಕಾಯಿದೆಯ ಉದ್ದೇಶಗಳಿಗಾಗಿ ೧೯೦೮ ರ ಸಿವಿಲ ಪ್ರೋಸೀಜರ (೧೯೦೮ ರ v) ಕೋಡದನ್ವಯವಾಗಿ ನ್ಯಾಯಾಲಯದಲ್ಲಿ ಅಂತರ್ಗತವಾಗಿರುವಂತಹ ಅಧಿಕಾರಗಳನ್ನು ಈ ಕೆಳಗಿನ ವಿಷಯಗಳ ದಾವೆಗಳ ವಿಚಾರಣೆ ಮಾಡುವಾಗ ಪಡೆದಿರುವರು. ಆ ವಿಷಯಗಳು ಯಾವುವೆಂದರೆ:

(ಅ) ಯಾವುದೇ ವ್ಯಕ್ತಿಯ ಹಾಜರಿ ಪಡೆಯುವುದಕ್ಕೆ ಮತ್ತು ಅವನನ್ನು ಪ್ರತಿಜ್ಞೆಯ ಮೇಲೆ ಪರೀಕ್ಷೆ ಮಾಡುವುದಕ್ಕೆ;

(ಬ) ದಸ್ತೈವಜುಗಳ ಶೋಧನೆ ನಡಸುವುದಕ್ಕೆ ಮತ್ತು ಅವುಗಳನ್ನು ಹಾಜರ ಮಾಡಿಸಿಕೊಳ್ಳುವುದಕ್ಕೆ;

(ಕ) ಅಫಿಡವೇಟಿನ ಮೇಲೆ ಪುರಾವೆ ಸ್ವೀಕರಿಸಲಿಕ್ಕೆ;

(ಡ) ಸಾಕ್ಷಿಗಳ ಪರೀಕ್ಷಣಕ್ಕಾಗಿ ಕಮಿಶನ್ನು ನೇಮಿಸುವುದಕ್ಕೆ;

ಮತ್ತು ಈ ಕಾಯಿದೆಯನ್ವಯವಾಗಿ ಅಂತಹ ಯಾವುದೇ ಅಧಿಕಾರಿಯ ಎದುರು ನಡೆದ ಯಾವುದೇ ಕಾರ್ಯಕಲಾಪವು ಇಂಡಿಯನ್ ಪೀನಲ (೧೮೬೦ ರ XLV) ಕೋಡದ ಕಲಮು ೧೯೩ ಮತ್ತು ೨೨೮ ರ ಅರ್ಥದಲ್ಲಿಯ ನ್ಯಾಯಿಕ ಕಾರ್ಯಕಲಾಪಗಳೆಂದು ಗಣಿಸಲ್ಪಡಲಾಗುವುದು.

**ವಿವೇಚನೆ :**

ವಾರಸಾಕರ ಅಧಿಕಾರಿಗಳೆದುರು ನಡೆದ ಕಾರ್ಯಕಲಾಪಗಳು ನ್ಯಾಯಿಕ ಕಾರ್ಯಕಲಾಪಗಳು. ಆ ಅಧಿಕಾರಿಗಳಿಗೆ ಸಿವಿಲ ಪ್ರೋಸೀಜರ ಕೋಡದನ್ವಯವಾಗಿರುವ ಅಧಿಕಾರಗಳೂ ಇಂಡಿಯನ್ ಪೀನಲ ಕೋಡದನ್ವಯವಾಗಿರುವ ಅಧಿಕಾರಗಳೂ ಕೆಲ ವಿಷಯಗಳ ಮಟ್ಟಿಗೆ ಇರುವುವು. ಸಾಮಾನ್ಯ ಸಿವಿಲ್ ಕೋರ್ಟುಗಳಿಗೆ ಈ ಕಾರ್ಯಕಲಾಪಗಳ ಬಗ್ಗೆ ಅಧಿಕಾರವಿಲ್ಲದಿದ್ದರೂ ಹಾಯಕೋರ್ಟಿಗೆ ಆದರ ರಿಟ್ ಕ್ಷೇತ್ರಾಧಿಕಾರದಲ್ಲಿ ಅಧಿಕಾರವಿರುವುದು.

**೮೦ ಸರಕಾರೀ (ಸಾರ್ವಜನಿಕ) ಸೇವಕನಿಂದ ಮಾಹಿತಿಯ ಬಹಿರಂಗ ಪಡಿಸುವಿಕೆ**

ಈ ಕಾಯಿದೆಯನ್ವಯವಾಗಿರುವ ಕಾರ್ಯಕಲಾಪಗಳ ವ್ಯವಹರಣೆಯಲ್ಲಿ ಇಲ್ಲವೆ ಅವುಗಳ ಸಂಬಂಧವಾಗಿ ಪಡೆದ, ಹಾಜರು ಮಾಡಿದ ಇಲ್ಲವೆ ಕೊಟ್ಟ ಎಲ್ಲ ಲೆಕ್ಕಗಳು, ಹೇಳಿಕೆಗಳು, ದಸ್ತೈವಜುಗಳು, ಪುರಾವೆಗಳು ಇಲ್ಲವೆ ಅಫಿಡವೇಟುಗಳು ಇವುಗಳ ಬಗ್ಗೆ ಇಂಡಿಯನ್ ಇನ್‌ಕಮ್ ಟ್ಯಾಕ್ಸ (೧೯೨೨ ರ xi) ಆ್ಯಕ್ಟದ ೫೪ ನೆಯ ಕಲಮಿನ ಕಕ್ಷೆಗಳು ಅನ್ವಯಿಸುವುವು. ಆದರೆ ಈ ಕಾಯಿದೆಯನ್ವಯವಾಗಿ ಇಲ್ಲವೆ ೧೯೨೨ ರ ಇನ್‌ಕಮ್ ಟ್ಯಾಕ್ಸ ಜಾರಿ ಮಾಡುವುದರಲ್ಲಿ ತೊಡಗಿದ ಯಾವುದೇ ವ್ಯಕ್ತಿಗೆ ಈ ಕಾಯಿದೆಯ ಇಲ್ಲವೆ ಆ ಕಾಯಿದೆಯ ಉದ್ದೇಶಗಳಿಗಾಗಿ ಆ ವಿವರಗಳನ್ನು ಪ್ರಕಟಿಸುವುದು ಆವಶ್ಯಕ ಇಲ್ಲವೆ ಯೋಗ್ಯವೆಂದು ಆಗಿರುವಾಗ ಅಂತಹ ಯಾವುದೇ ವಿವರಗಳನ್ನು ಬಹಿರಂಗಪಡಿಸಲು ೫೪ ನೆಯ ಕಲಮಿನಲ್ಲಿ ಹೇಳಿದ ಯಾವುದೂ ಅನ್ವಯಿಸಲಾರದು.

**ವಿವೇಚನೆ:**

ವಾರಸಾಕರವು ಮೃತನ ಆಸ್ತಿಯ ಮೇಲೆ ಹಾಕಲಾದ ಕರವು. ಕರಹಾಕು ವಾಗ ಆ ಆಸ್ತಿಯ ಬಗ್ಗೆ ಇರುವ ಎಲ್ಲ ದಾಖಲೆ, ಮಾಹಿತಿಗಳನ್ನು ಲೆಕ್ಕಪತ್ರಗಳನ್ನು ವಾರಸಾಕರದ ಅಧಿಕಾರಿಗೆ ತೋರಿಸಬೇಕಾಗುವುದು ಇಲ್ಲವೆ ಸಾದರ ಪಡಿಸಬೇಕಾಗು ವುದು. ಇಂತಹ ಮಾಹಿತಿಯನ್ನು ಸಾರ್ವಜನಿಕರಿಗೆ ಕೊಡಬಾರದು. ಆದರೆ ಇಂತಹ ಮಾಹಿತಿಯು ಈ ಕಾಯಿದೆಯ ಇಲ್ಲವೆ ಇನ್‌ಕಮ್ ಟ್ಯಾಕ್ಸ ಕಾಯಿದೆಯನ್ನು ಜಾರಿಮಾಡುವುದರಲ್ಲಿ ತೊಡಗಿದ ಬೇರೆ ವ್ಯಕ್ತಿಗೆ, ಅದೂ ಕೇವಲ ಆವಶ್ಯಕವೆನ್ನಿಸಿದಾಗ, ಮಾತ್ರ ಕೊಡಲ್ಪಡಬೇಕು ಎಂದು ಹೇಳಿ ವಾರಸದಾರರ ಹಿತಸಂಬಂಧವನ್ನು ಸಂರಕ್ಷಿಸಲಾಗಿದೆ-

**೮೧ ಮಾಹಿತಿ ಪೂರೈಸಲು ರಾಜ್ಯಗಳೊಂದಿಗೆ ವ್ಯವಸ್ಥೆ.**

ಈ ಕಾಯಿದೆಯನ್ವಯವಾಗಿ ಇಲ್ಲವೆ ಆ ರಾಜ್ಯದಲ್ಲಿ ಆ ಕಾಲಕ್ಕೆ ಜಾರಿ ಯಲ್ಲಿರುವ ಬೇರೆ ಯಾವುದೇ ಕಾಯಿದೆಯನ್ವಯವಾಗಿ ಯಾವುದರ ವಾರಸಾ ಕರವನ್ನು ಹಾಕುವುದಕ್ಕಾಗಿ ಇಲ್ಲವೆ ಪಡೆಯುವ ಉದ್ದೇಶಗಳಿಗಾಗಿ ಆವಶ್ಯಕ ವಾಗಬಹುದಾದಂತಹ ಮಾಹಿತಿಯನ್ನು ವಿನಿಮಯ ಮಾಡಲು ಯಾವುದೇ ರಾಜ್ಯದ ಸರಕಾರದೊಂದಿಗೆ ಕೇಂದ್ರ ಸರಕಾರವು ವ್ಯವಸ್ಥೆ ಮಾಡಿಕೊಳ್ಳ ಬಹುದು.

**ವಿವೇಚನೆ:**

ವಾರಸಾಕರ ಕಾಯಿದೆಯು ಜಮ್ಮು ಮತ್ತು ಕಾಶ್ಮೀರ ರಾಜ್ಯವನ್ನು ಬಿಟ್ಟು ಉಳಿದ ಭಾರತ ಪ್ರದೇಶಕ್ಕೆ ಅನ್ವಯಿಸುವುದು. ಆದರೂ ಆ ರಾಜ್ಯದಲ್ಲಿಯ ಕೆಲವೊಂದು ದಾನಗಳ ಬಗ್ಗೆ ಈ ಕಾಯಿದೆಯು ಅನ್ವಯಿಸುವುದು. ಭಾರತದ ಬೇರೆ ಬೇರೆ ರಾಜ್ಯ ಗಳಲ್ಲಿ ಮೃತನ ಆಸ್ತಿಯು ಇರುವ ಸಂಭವವಿರುವುದು. ಅದಕ್ಕಾಗಿ ರಾಜ್ಯಸರಕಾರಗಳ ಸಹಕಾರವಿಲ್ಲದೆ ಎಲ್ಲ ಆಸ್ತಿಯ ಬಗ್ಗೆ ಮಾಹಿತಿ ಕೂಡಿ ಹಾಕಲು ಸಾಧ್ಯವಾಗದು. ಆ ದೃಷ್ಟಿಯಿಂದ ಈ ಕಲಮು ಮಾಡಲಾಗಿದೆ. ಇದರಿಂದ ಆವಶ್ಯಕವಾದ ಮಾಹಿತಿ ದೊರೆವುದು. ಅದು ವಾರಸಾಕರ ಹಾಕುವದಕ್ಕೆ ಮತ್ತು ವಸೂಲು ಮಾಡುವುದಕ್ಕೆ ಸೌಕರ್ಯ ಒದಗಿಸುವುದು. ಕಾರಣ ಈ ಬಗೆಯ ವ್ಯವಸ್ಥೆ ಆವಶ್ಯಕವಾಗಿದೆ.

**೮೨ ನೋಟೀಸುಗಳ ಜಾರಿ ಮಾಡುವಿಕೆ.**

ಈ ಕಾಯಿದೆಯನ್ವಯವಾಗಿರುವ ಯಾವುದೇ ನೋಟೀಸು ಇಲ್ಲವೆ ಬೇಡಿಕೆಯು ಆದರಲ್ಲಿ ಹೆಸರಿಸಲಾದ ವ್ಯಕ್ತಿಯ ಮೇಲೆ ಟಪಾಲಿನಿಂದಾಗಲೀ ಇಲ್ಲವೆ ೧೯೦೮ ರ ಸಿವಿಲ ಪ್ರೊಸೀಜರ (೧೯೦೮ ರ v) ಕೋಡದನ್ವಯವಾಗಿ

ಕೋರ್ಟಿನಿಂದ ಹೊರಡಿಸಲಾದ ಸಮನ್ಸು ಆಗಿರುವಂತೆ ಅದನ್ನು ಜಾರಿ ಮಾಡಬಹುದು.

**ವಿವೇಚನೆ :**

ನೋಟೀಸು ಕಳಿಸುವ ಇಲ್ಲವೆ ಬೇಡಿಕೆ ಕಳಿಸುವ ಪ್ರಸಂಗವು ಆಗಾಗ ಬರುವುದು. ಆಗ ನೋಟೀಸನ್ನು ಟಪಾಲಿನ ಮೂಲಕವಾಗಿ ಕಳಿಸಬಹುದು. ಇಲ್ಲವೆ ಅದು ಕೋರ್ಟಿನ ಸಮನ್ಸು ಜಾರಿಮಾಡುವ ರೀತಿಯಲ್ಲಿ ಜಾರಿ ಮಾಡಲ್ಪಡಬಹುದು. ಎಂದು ನೋಟೀಸು ಜಾರಿ ಮಾಡುವ ಕ್ರಮವನ್ನು ಇಲ್ಲಿ ಹೇಳಿದೆ.

**೮೩ ಅಧಿಕೃತ ಪ್ರತಿನಿಧಿಗಳ ಮುಖಾಂತರ ಹಾಜರಾಗುವುದು.**

ಈ ಕಾಯಿದೆಯನ್ವಯವಾಗಿರುವ ಯಾವುದೇ ಕಾರ್ಯಕಲಾಪಗಳ ಸಂಬಂಧವಾಗಿ ಕಲಮು ೪ರ ಉಪಕಲಮು ( ) ರಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಅಧಿಕಾರಿಯೆದುರು ವಾರನಾಕರಕ್ಕಾಗಿ ಲೆಕ್ಕ ಒಪ್ಪಿಸಲು ಬಾಧ್ಯನಾದ ಯಾವುದೇ ವ್ಯಕ್ತಿಯು ಹಾಜರಾಗಲು ಬಾಧ್ಯನಾಗಿರುವಾಗ ಇಲ್ಲವೆ ಹಾಜರಾಗಲು ಕೇಳಿಕೊಳ್ಳಲ್ಪಟ್ಟಿರುವಾಗ, ಕಲಮು ೭೯ ರನ್ವಯವಾಗಿ ಪ್ರತ್ಯಕ್ಷ ಅವರೇ ಹಾಜರಾಗಬೇಕಾಗಿರದ ಬೇರೆ ಸಂದರ್ಭದಲ್ಲಿ, ಅವನಿಂದ ಈ ಸಂದರ್ಭದಲ್ಲಿ ಬರೆಹದ ಮೂಲಕ ಅಧಿಕರಿಸಲ್ಪಟ್ಟ ಸಂಬಂಧಿಕನಾಗಿರುವ ಇಲ್ಲವೆ ಆ ವ್ಯಕ್ತಿಯಿಂದ ಕ್ರಮಬದ್ಧವಾಗಿ ನೇಮಿಸಿಕೊಳ್ಳಲ್ಪಟ್ಟ ಬೇರೆ ವ್ಯಕ್ತಿಯ ಇಲ್ಲವೆ ಕಾಯಿದೆಯ ವ್ಯವಸಾಯ ಮಾಡುವವನ ಇಲ್ಲವೆ ಚಾರ್ಟರ್ಡ ಅಕೌಂಟಂಟನ ಮುಖಾಂತರ ಹಾಜರಾಗಬಹುದು.

**ವಿವರಣೆ :** ಈ ಕಲಮಿನಲ್ಲಿ

(ಅ) ಲೆಕ್ಕ ಒಪ್ಪಿಸಲು ಬಾಧ್ಯನಾದವನಿಂದ ಕ್ರಮಬದ್ಧವಾಗಿ ನೇಮಿಸಿಕೊಳ್ಳಲ್ಪಟ್ಟವನು ಎಂಬ ಶಬ್ದದಲ್ಲಿ ಲೆಕ್ಕ ಒಪ್ಪಿಸಲು ಬಾಧ್ಯನಾದವನು ಯಾವ ಬ್ಯಾಂಕಿನಲ್ಲಿ ಕರಂಟ ಅಕೌಂಟ ಇಟ್ಟಿರುವನೋ ಇಲ್ಲವೆ ನಿಯಮಿತವಾಗಿ ವ್ಯವಹಾರ ಮಾಡುವನೋ ಆ ಶೆಡ್ಯೂಲ್ಡ ಬ್ಯಾಂಕಿನ ಯಾವುದೇ ಅಧಿಕಾರಿಯನ್ನು ಒಳಗೊಳ್ಳುವುದು;

(ಬ) 'ಕಾಯಿದೆಯ ವ್ಯವಸಾಯ ಮಾಡುವವನು' ಅಂದರೆ ಅಡ್ವೊಕೇಟ, ಯಾವ ಪ್ರದೇಶಕ್ಕೆ ಈ ಕಾಯಿದೆಯು ವ್ಯಾಪಿಸಿರುವುದೋ ಅಲ್ಲಿಯ ವಕೀಲ, ಇಲ್ಲವೆ ಯಾವುದೇ ಹಾಯಕೋರ್ಟಿನ ಅಟೋರ್ನಿ ಮತ್ತು ಮೇಲೆ ಹೇಳಿದ ಪ್ರದೇಶಗಳಲ್ಲಿಯ ಯಾವುದೇ ಭಾಗದಲ್ಲಿ ಕೆಲಸ ಮಾಡುವ ಪ್ಲೀಡರ ಇವನನ್ನು ಒಳಗೊಳ್ಳುವುದು.

(ಕ) ' ಚಾರ್ಟರ್ಡ ಅಕೌಂಟಂಟ ' ಎಂದರೆ ೧೯೪೯ ರ ಚಾರ್ಟರ್ಡ ಅಕೌಂಟಂಟ ( ೧೯೪೯ ರ xxx viii ) ಆ್ಯಕ್ಟದಲ್ಲಿ ವ್ಯಾಖ್ಯೆ ಮಾಡಲಾದ ಚಾರ್ಟರ್ಡ ಅಕೌಂಟಂಟ.

**ವಿವೇಚನೆ :**

ಎಲ್ಲ ಸಮಯದಲ್ಲಿಯೂ ಪ್ರತಿಯೊಬ್ಬ ವ್ಯಕ್ತಿಗೆ ತಾನೇ ಹಾಜರು ಆಗಲು ಆಗುವುದಿಲ್ಲ. ಎಲ್ಲಿ ವ್ಯಕ್ತಿಗತ ಹಾಜರಿಯು ಅವಶ್ಯವಿರುವುದೋ ಅಂತಹ ಅಂದರೆ ೭ನೇ ನೆಯ ಕಲಮಿನ ವ್ಯವಹಾರಗಳ ಹೊರತು ಬೇರೆ ಪ್ರಸಂಗದಲ್ಲಿ ಲೆಕ್ಕ ಒಪ್ಪಿಸಲು ಬಾಧ್ಯನಾದವನು ಸಂಬಂಧಿಕನು, ನೇಮಿಸಿಕೊಳ್ಳಲ್ಪಟ್ಟ ವ್ಯಕ್ತಿಯು ಇಲ್ಲವೆ ವಕೀಲ ಅಡ್ವೊಕೇಟ, ಪ್ಲೀಡರ ಇಲ್ಲವೆ ಅಟೋರ್ನಿ ಇವರು ಬರೆಹದ ಮೂಲಕವಾಗಿ ಅಧಿಕರಿ ಸಲ್ಪಟ್ಟಿದ್ದರೆ ಹಾಜರು ಆಗಬಹುದು. ಚಾರ್ಟರ್ಡ ಅಕೌಂಟಂಟರೂ ಹಾಜರಾಗ ಬಹುದು. ನೇಮಿಸಲ್ಪಟ್ಟ ವ್ಯಕ್ತಿಗಳಲ್ಲಿ ಬ್ಯಾಂಕಿನ ಅಧಿಕಾರಿಯೂ ಬರುವನು. ಇಷ್ಟೇ ಯಾವನು ನೇಮಿಸಿರುವನೋ ಅವನದು ಆ ಬ್ಯಾಂಕಿನಲ್ಲಿ ವ್ಯವಹಾರವಿರಬೇಕು.

**೮೪ ಮೃತ ಸದಸ್ಯರ ಬಗ್ಗೆ ವಿವರಗಳನ್ನು ನಿಯಂತ್ರಕನಿಗೆ ಕಂಪನಿಯು ಸಾದರ ಪಡಿ ಸಬೇಕು.**

(೧) ಯಾವ ಪ್ರದೇಶಕ್ಕೆ ಈ ಕಾಯಿದೆಯು ಅನ್ವಯಿಸುವುದೋ ಆ ಪ್ರದೇಶಗಳಲ್ಲಿ ವ್ಯವಹಾರ ಮಾಡುತ್ತಿರುವಂತಹ ಭಾರತದ ಹೊರಗೆ ಸಂಸ್ಥಾಪಿಸಲ್ಪಟ್ಟಿರುವ ಕಂಪನಿಯಿರುವಾಗ ಮತ್ತು ೧೯೨೨ ರ ಇನ್‌ಕಮ್ ಟ್ಯಾಕ್ಸ ( ೧೯೨೨ ರ vi ) ಆ್ಯಕ್ಟದ ಉದ್ದೇಶಗಳಿಗಾಗಿ ಆ ಹಿಂದಿನ ಮೂರು ಕರಾಕರಣೆಗಳಲ್ಲಿ ಎರಡು ಕರಾಕರಣೆಗಳಿಗಾಗಿ ರಹಿವಾಸಿಯೆಂದು ತಿಳಿಯಲ್ಪ ಡಲಾಗಿರುವ ಈ ಕಾಯಿದೆಯು ಪ್ರಾರಂಭವಾದನಂತರ ಸತ್ತ ಯಾವುದೇ ಸದ ಸ್ಯನ ಮರಣದ ವಾರ್ತೆಯು ಮುಟ್ಟಿದ ಮೂರು ತಿಂಗಳಲ್ಲಿ ಇಂತಹ ಕಂಪ ನಿಯು ಆ ಕಂಪನಿಯ ಮೃತ ಸದಸ್ಯನ ಪಾಲುಗಳ ವಿಷಯವಾಗಿ ಗೊತ್ತು ಮಾಡಲ್ಪಡಬಹುದಾದಂತಹ ವಿವರಗಳನ್ನು ನಿಯಂತ್ರಕನಿಗೆ ಸಾದರಪಡಿಸ ಬೇಕು. ಮತ್ತು ಎರಡನೆಯ ಕೋಷ್ಟಕದ ಭಾಗ ಮೂರರಲ್ಲಿ ವಿಶದ ಮಾಡಿದ ದರದಂತೆ ವಾರಸಾಕರವನ್ನು ಮೃತನಿಂದ ಆ ಕಂಪನಿಯಲ್ಲಿ ಧಾರಣಮಾಡಲ್ಪಟ್ಟ ಪಾಲುಗಳ ಮುಖ್ಯ ಬೆಲೆಯ ಮೇಲೆ ಮೃತ ಸದಸ್ಯನು ಭಾರತದ ರಹಿವಾಸಿ ಯಾಗಿರುವ ಸಂದರ್ಭಗಳನ್ನು ಹೊರತು ಪಡಿಸಿ ಮತ್ತು ಲೆಕ್ಕ ಒಪ್ಪಿಸಲು ಬಾಧ್ಯನಾದವನು ಆ ಸಂಬಂಧದಲ್ಲಿ ಸಂಭರ್ಭಾನುಸಾರವಾಗಿ ವಾರಸಾಕರವು ಕೊಡಲ್ಪಟ್ಟಿದೆ, ಕೊಡಲಾಗುವುದು ಇಲ್ಲವೆ ಬಾಕಿ ಏನೂ ಉಳಿದಿಲ್ಲವೆಂಬ ಬಗ್ಗೆ

ನಿಯಂತ್ರಕನಿಂದ ಸರ್ಟಿಫಿಕೇಟು ಪಡೆದಿರುವಾಗಿನ ಸಂದರ್ಭಗಳನ್ನು ಹೊರತು ಪಡಿಸಿ, ವಾರಸಾಕರವನ್ನು ಕೊಡಲು ಪಾತ್ರವಾಗುವುದು.

(೨) ೧೯೧೩ ರ ಇಂಡಿಯನ್ ಕಂಪನೀಜ (೧೯೧೩ ರ vii) ಆ್ಯಕ್ಟೆದನ್ವಯವಾಗಿ ರೂಪಿಸಲಾದ ಮತ್ತು ನೋಂದಾಯಿಸಲಾದ ಕಂಪನಿಯ ಯಾವುದೇ ಸದಸ್ಯನು ಈ ಕಾಯಿದೆಯು ಪ್ರಾರಂಭವಾದ ಮೇಲೆ ಮರಣ ಹೊಂದಿದರೆ, ಮತ್ತು ಕಲಮು ೧೮ ರಲ್ಲಿ ವ್ಯಾಖ್ಯೆ ಮಾಡಲಾದ ಯಾವುದೇ ಮುಖ್ಯ ಅಧಿಕಾರಿಯ ಮುಖಾಂತರ ಆ ಮರಣದ ಬಗ್ಗೆ ಕಂಪನಿಗೆ ತಿಳಿವಳಿಕೆಯಾದರೆ, ಮೃತ ಸದಸ್ಯನ ಹೆಸರಿನಲ್ಲಿ ಇರುವ ಪಾಲುಗಳ ಹಸ್ತಾಂತರ ಪಡೆಯುವವನು ಅಂತಹ ಪಾಲುಗಳನ್ನು ಪೂರ್ಣಪ್ರತಿ ಬೆಲೆಗಾಗಿ ಪಡೆದಿರದಿದ್ದರೆ ಇಲ್ಲವೆ ಸಂದರ್ಭಾನುಸಾರವಾಗಿ ಆ ಪಾಲುಗಳ ವಿಷಯವಾಗಿ ವಾರಸಾಕರವು ಕೊಡಲ್ಪಟ್ಟಿವೆ. ಇಲ್ಲವೆ ಕೊಡಲ್ಪಡುವುದು ಇಲ್ಲವೆ ಬಾಕಿ ಉಳಿದಿಲ್ಲ, ಎಂಬ ಬಗ್ಗೆ ನಿಯಂತ್ರಕನಿಂದ ಕೊಡಲ್ಪಟ್ಟ ಸರ್ಟಿಫಿಕೇಟು ಕಂಪನಿಯೆದರು ಸಾದರಪಡಿಸಿರದಿದ್ದರೆ, ಆ ಪಾಲುಗಳ ಹಸ್ತಾಂತರವನ್ನು ನೋಂದಾಯಿಸುವುದನ್ನು ಮಾಡುವುದು ಕಂಪನಿಗೆ ಕಾಯಿದೆಬದ್ಧವೆನ್ನಿಸುದಿಲ್ಲ.

(೩) ಉಪಕಲಮು (೧) ಇಲ್ಲವೆ ಉಪಕಲಮು (೨) ಇದರ ಕಕ್ಷೆಗಳಂತೆ ನಡೆಯುವುದಕ್ಕೆ ಯಾವುದೇ ಕಂಪನಿಯು ತಪ್ಪಿದರೆ ಅದು ಒಂದು ಸಾವಿರ ರೂಪಾಯಿಯ ದಂಡಕ್ಕೆ ಪಾತ್ರವಾಗುವುದು, ಇಲ್ಲವೆ ನಿಯಂತ್ರಕನು ನಿರ್ದೇಶಿಸುವಂತೆ ಕೊಡಬೇಕಾದ ವಾರಸಾಕರದ ಎರಡು ಪಟ್ಟು ಹಣದಷ್ಟು ದಂಡಕ್ಕೆ ಪಾತ್ರವಾಗುವುದು.

ಆದರೆ ಯಾವುದೇ ವಿಶಿಷ್ಟ ಪ್ರಕರಣದಲ್ಲಿ ನಿಯಂತ್ರಕನು ದಂಡವನ್ನು ಕಡಿಮೆ ಮಾಡಬಹುದು.

**ವಿವೇಚನೆ :**

ಉಪಕಲಮು (೧) ಪರದೇಶದ ಕಂಪನಿಯು ಭಾರತದಲ್ಲಿ ತನ್ನ ವ್ಯವಹಾರ ಮಾಡುತ್ತಿದ್ದರೆ ಅದಕ್ಕೆ ಅನ್ವಯಿಸುವುದು. ಇಂತಹ ಕಂಪನಿಯು ಆದರಲ್ಲಿ ಪಾಲು ಪಡೆದಿದ್ದ ಮೃತ ಸದಸ್ಯನ ಪಾಲುಗಳ ಬಗ್ಗೆ ಮಾಹಿತಿಯನ್ನು ನಿಯಂತ್ರಕನಿಗೆ ಮೃತನ ಮರಣದ ಸಂಗತಿಯು ತಿಳಿದ ಮೂರು ತಿಂಗಳಲ್ಲಿ ಕೊಡಬೇಕು. **ನಿಯಮ ೨೮** ವಿವರವನ್ನು ಹೇಳುವುದು. ಅಲ್ಲದೆ ಕಂಪನಿಯು ಆ ಪಾಲುಗಳ ಮುಖ್ಯ ಬೆಲೆಯ ಮೇಲೆ ಆಗುವ ವಾರಸಾಕರ ಕೊಡಬೇಕೆಂದು ವಿಧಿಸಲಾಗಿರುವುದು.

ಉಪಕಲಮು (೨) ಭಾರತದಲ್ಲಿ ರೂಪಿಸಲ್ಪಟ್ಟ ಮತ್ತು ನೊಂದಾಯಿಸಲ್ಪಟ್ಟ ಕಂಪನಿಗೆ ಅನ್ವಯಿಸುವುದು. ಇಂತಹ ಕಂಪನಿಯ ಸದಸ್ಯನು ಮರಣ ಹೊಂದಿದರೆ, ಅವನ ಹೆಸರಿನಲ್ಲಿದ್ದ ಪಾಲುಗಳನ್ನು ಹಸ್ತಾಂತರ ಮಾಡಲು ಮತ್ತು ಅವುಗಳ

ಹಸ್ತಾಂತರದ ನೊಂದಾಯಿಸುವಿಕೆಯನ್ನು ಮಾಡಲು ಕಂಪನಿಗೆ ಅಡ್ಡಿಯಿದೆ, ಎಂದು ಹೇಳಲಾಗಿದೆ ಇನಕ್ಕೆ ಅಪವಾದಗಳು ಇವೆ. (೧) ಹಸ್ತಾಂತರವು ಪೂರ್ಣಪ್ರತಿ ಬೆಲೆಗಾಗಿ ಆಗಿರಬೇಕು. (೨) ಪಾರನಾಕರವು ಆ ಪಾಲುಗಳ ಬಗ್ಗೆ ಕೊಡಲ್ಪಟ್ಟಿದೆ, ಕೊಡಲ್ಪಡುವುದು, ಇಲ್ಲವೆ ಬಾಕಿ ಉಳಿದಿಲ್ಲವೆಂದು ನಿಯಂತ್ರಕನಿಂದ ಪಡೆದ ಸರ್ಟಿಫಿಕೇಟು ಹಾಜರ ಮಾಡಿರಬೇಕು. ಅಂದರೆ ಕಂಪನಿಯು ಆ ಪಾಲುಗಳ ಹಸ್ತಾಂತರ ಮತ್ತು ನೊಂದು ಮಾಡಿಕೊಳ್ಳಬಹುದು. **ನಿಯಮ ೨೯** ಈ ಬಗ್ಗೆ ಹೇಳುವುದು.

ಮೊದಲಿನ ಎರಡು ಉಪಕಲಮುಗಳ ಕಕ್ಷೆಗಳಂಕಿತವಾಗಿ ನಡೆಯಲು ತಪ್ಪಿದರೆ ದಂಡವನ್ನು ಕೊಡಬೇಕಾಗುವುದೆಂದು ಮೂರನೆಯ ಉಪಕಲಮು ಹೇಳುತ್ತದೆ.

**೮೫ ಬೋರ್ಡಿಗೆ ನಿಯಮ ಮಾಡುವ ಅಧಿಕಾರಗಳು**

(೧) ಪೂರ್ವ ಭಾವಿಯಾಗಿ ಪ್ರಕಟಿಸಬೇಕೆಂಬ ಕರಾರಿನಂಕಿತವಾಗಿ ಮತ್ತು ಕೇಂದ್ರ ಸರಕಾರದ ನಿಯಂತ್ರಣದಂಕಿತವಾಗಿ, ಈ ಕಾಯಿದೆಗೆ ವಿಸಂಗತವಾಗದಂತೆ ಬೋರ್ಡು, ನಿಯಮಗಳನ್ನು ಈ ಕಾಯಿದೆಯಿಂದ ಆವಶ್ಯಕವೆನ್ನಿಸುವ ಎಲ್ಲ ವಿಷಯಗಳನ್ನು ಗೊತ್ತು ಮಾಡುವ ಬಗ್ಗೆ ಇಲ್ಲವೆ ಗೊತ್ತು ಮಾಡುವುದಕ್ಕೆ ಅನುಮತಿಸಿದರ ಬಗ್ಗೆ ಇಲ್ಲವೆ ಈ ಕಾಯಿದೆಯ ಉದ್ದೇಶಗಳನ್ನು ಕಾರ್ಯಕಾರಿ ಮಾಡುವುದಕ್ಕೆ ಇಲ್ಲವೆ ಪರಿಣಾಮಕಾರಿಯಾಗಿಸುವುದಕ್ಕೆ ಆವಶ್ಯಕವಾಗುವ ಇಲ್ಲವೆ ಅನುಕೂಲವಾಗುವ ವಿಷಯಗಳ ಬಗ್ಗೆ ಮಾಡಬಹುದು.

(೨) ಈ ಕಲಮಿನಿಂದ ದಯಪಾಲಿಸಲಾದ ನಿಯಮ ಮಾಡುವ ಅಧಿಕಾರವು ಮೊದಲ ಸಲ ಅದರ ನಿರ್ವಹಣೆಯ ಪ್ರಸಂಗದಲ್ಲಿ ನಿಯಮಗಳಿಗೆ ಅವುಗಳಲ್ಲಿ ಕೆಲವಕ್ಕೆ ಹಿನ್ನೋಟದ ಪರಿಣಾಮವುಳ್ಳ ಅಧಿಕಾರವನ್ನು ಈ ಕಾಯಿದೆಯು ಪ್ರಾರಂಭವಾದ ತಾರೀಖಿನಕಿಂತಲೂ ಮೊದಲು ಆಗದ ಯಾವುದೇ ತಾರೀಖಿನಿಂದ ಜಾರಿಯಲ್ಲಿ ತರುವ ಅಧಿಕಾರವನ್ನು ಒಳಗೊಳ್ಳುವುದು.

(೩) ಈ ಕಾಯಿದೆಯನ್ವಯವಾಗಿ ಮಾಡಲಾದ ಎಲ್ಲ ನಿಯಮಗಳು ಅವು ಮಾಡಲ್ಪಟ್ಟ ಕೂಡಲೆ, ಪಾರ್ಲಿಮೆಂಟಿನ ಎರಡೂ ಸಭೆಗಳೆದುರು ಮಂಡಿಸಲ್ಪಡಬೇಕು.

**ವಿವೇಚನೆ :**

ಈ ಕಾಯಿದೆಯನ್ನು ಪರಿಣಾಮಕಾರಿಯಾಗಿ ಜಾರಿ ಮಾಡಲು ಆವಶ್ಯಕವಾದ ನಿಯಮಗಳನ್ನು ಮಾಡಲು ಬೋರ್ಡಿಗೆ ಈ ಕಲಮು ಅಧಿಕಾರ ಕೊಡುತ್ತದೆ. ಆ ನಿಯಮಗಳನ್ನು ರೂಪಿಸಿದ ತಾರೀಖಿನಕಿಂತ ಮೊದಲು ಆದರೂ ಕಾಯಿದೆ ಪ್ರಾರಂಭವಾದ ತಾರೀಖಿನ ನಂತರ ಯಾವುದೇ ತಾರೀಖಿನಿಂದ ಜಾರಿಯಲ್ಲಿ ಬರುವಂತೆ ಮಾಡಬಹುದು. ನಿಯಮಗಳು ಮಾಡಲ್ಪಟ್ಟ ನಂತರ ಅವುಗಳು ಪಾರ್ಲಿಮೆಂಟನೆದುರು ಮಂಡಿಸಲ್ಪಡಬೇಕು.

# ಕೋಷ್ಟಕ ಒಂದು

(ಕಲಮು ೫ ನೋಡಿರಿ)

ಕೃಷಿಭೂಮಿಯ ಮೇಲೆ ವಾರಸಾಕರ ಹಾಕಲ್ಪಡಲು ಯೋಗ್ಯವಾದ ರಾಜ್ಯಗಳು: ಮುಂಬಯಿ, ಮಧ್ಯಪ್ರದೇಶ, ಓರಿಸಾ, ಪಂಜಾಬ, ಉತ್ತರಪ್ರದೇಶ, ಹೈದರಾಬಾದ, ಮಧ್ಯಭಾರತ, ರಾಜಸ್ಥಾನ, ಸೌರಾಷ್ಟ್ರ, ಮತ್ತು ಎಲ್ಲ 'ಕ' ಭಾಗದ ರಾಜ್ಯಗಳು.

---

# ಕೋಷ್ಟಕ ಎರಡು

(ಕಲಮು ೫, ೩೫ ಮತ್ತು ೮೪ ನೋಡಿರಿ)

## ವಾರಸಾಕರದ ದರಗಳು

## ಭಾಗ ಒಂದು

ಮಿತಾಕ್ಷರ, ಮರುಮಕ್ಕತ್ತಾಯಂ ಇಲ್ಲವೆ ಅಳಿಯ ಸಂತಾನ ಕಾಯಿದೆಯಿಂದ ಶಾಸಿತವಾದ ಹಿಂದು ಕುಟುಂಬದ ಏಕತ್ರಘರಾಣೆಯ ಆಸ್ತಿಯಲ್ಲಿಯ ಹಿತಸಂಬಂಧವುಳ್ಳ ಆಸ್ತಿಯಿರುವ ಸಂದರ್ಭದಲ್ಲಿ:—

| | | | | | ವಾರಸಾಕರದ ದರ |
|---|---|---|---|---|---|
| ೧. | ಮುಖ್ಯಬೆಲೆಯ | ಮೊದಲನೆಯ | ೫೦,೦೦೦ | ರೂ: ಮೇಲೆ ಕರ | ಏನೂ ಇಲ್ಲ |
| ೨. | „ | ಮುಂದಿನ | ೫೦,೦೦೦ | „ | ೫ ಶತಾಂಶ |
| ೩. | „ | „ | ೫೦,೦೦೦ | „ | ೭½ ಶತಾಂಶ |
| ೪. | „ | „ | ೫೦,೦೦೦ | „ | ೧೦ ಶತಾಂಶ |
| ೫. | „ | „ | ೧೦೦,೦೦೦ | „ | ೧೨½ ಶತಾಂಶ |
| ೬. | „ | „ | ೨೦೦,೦೦೦ | „ | ೧೫ ಶತಾಂಶ |
| ೭. | „ | „ | ೫೦೦,೦೦೦ | „ | ೨೦ ಶತಾಂಶ |
| ೮. | „ | „ | ೧೦,೦೦,೦೦೦ | „ | ೨೫ ಶತಾಂಶ |
| ೯. | „ | „ | ೧೦,೦೦,೦೦೦ | „ | ೩೦ ಶತಾಂಶ |
| ೧೦. | „ | „ | ೨೦,೦೦,೦೦೦ | „ | ೩೫ ಶತಾಂಶ |
| ೧೧. | „ | ಇನ್ನು ಉಳಿದ ಬೆಲೆಯ ಆಸ್ತಿಯ ಮೇಲೆ | | | ೪೦ ಶತಾಂಶ |

# ಭಾಗ ಎರಡು

ಬೇರೆ ಯಾವುದೇ ಮಾದರಿಯ ಆಸ್ತಿಯಿರುವ ಸಂದರ್ಭದಲ್ಲಿ

| | | | | | ವಾರಸಾಕರದ ದರ |
|---|---|---|---|---|---|
| ೧. | ಮುಖ್ಯಬೆಲೆಯ | ಮೊದಲಿನ | ೧,೦೦,೦೦೦ | ರೂ. ಆ. ಮೇ. ಕರ | ಏನೂಇಲ್ಲ |
| ೨. | ,, | ಮುಂದಿನ | ೫೦,೦೦೦ | ,, | ೭½ ಶತಾಂಶ |
| ೩. | ,, | ,, | ೫೦,೦೦೦ | ,, | ೧೦ ಶತಾಂಶ |
| ೪. | ,, | ,, | ೧,೦೦,೦೦೦ | ,, | ೧೨½ ಶತಾಂಶ |
| ೫. | ,, | ,, | ೨,೦೦,೦೦೦ | ,, | ೧೫ ಶತಾಂಶ |
| ೬. | ,, | ,, | ೫,೦೦,೦೦೦ | ,, | ೨೦ ಶತಾಂಶ |
| ೭. | ,, | ,, | ೧೦,೦೦,೦೦೦ | ,, | ೨೫ ಶತಾಂಶ |
| ೮. | ,, | ,, | ೧೦,೦೦,೦೦೦ | ,, | ೩೦ ಶತಾಂಶ |
| ೯. | ,, | ,, | ೨೦,೦೦,೦೦೦ | ,, | ೩೫ ಶತಾಂಶ |
| ೧೦. | ,, | ಇನ್ನು ಉಳಿದ ಬೆಲೆಯ ಆಸ್ತಿಯ ಮೇಲೆ | | | ೪೦ ಶತಾಂಶ |

---

# ಭಾಗ ಮೂರು

ಕಲಮು ೮೪ ರ ಉಪಕಲಮು (೧) ರಲ್ಲಿ ಹೇಳಲಾದಂತಹ ಕಂಪನಿಯಲ್ಲಿಯ ಮೃತ ಸದಸ್ಯರು ಧಾರಣಮಾಡಿದ ಪಾಲುಗಳ ಸಂದರ್ಭದಲ್ಲಿ—

ವಾರಸಾಕರದ ದರ

(೧) ಪಾಲುಗಳ ಮುಖ್ಯಬೆಲೆಯು ೫೦೦೦ ರೂಪಾಯಿಗಿಂತ ಹೆಚ್ಚಾಗದಿದ್ದರೆ ಕರ .... ಏನೂಇಲ್ಲ

(೨) ಪಾಲುಗಳ ಮುಖ್ಯಬೆಲೆಯು ೫೦೦೦ ರೂಪಾಯಿಗಿಂತ ಹೆಚ್ಚಾದರೆ ಕರ .... ೭½ ಶತಾಂಶ

---

# ಪರಿಶಿಷ್ಟ ೧

## ವಾರಸಾಕರ ನಿಯಮಗಳು ೧೯೫೩

### ಸಾರ ಸಂಗ್ರಹ

**ನಿಯಮ: ೧**

ಇವು ವಾರಸಾಕರ ನಿಯಮಗಳು. ಇವು ೧೯೫೩ರ ಅಕ್ಟೋಬರ ೧೫ಕ್ಕೇನೆ ಜಾರಿಯಲ್ಲಿ ಬಂದಿವೆಯೆಂದು ಗಣಿಸಲ್ಪಡಲಾಗುವುದು.

### ವ್ಯಾಖ್ಯೆಗಳು.

**ನಿಯಮ: ೨**

ಇದರಲ್ಲಿ ಐದು ಪದಗಳ ವ್ಯಾಖ್ಯೆ ಮಾಡಲಾಗಿದೆ. "ಈ ಕಾಯಿದೆ" ಅಂದರೆ ವಾರಸಾಕರ ಕಾಯಿದೆ; "ಲೆಕ್ಕ ಒಪ್ಪಿಸಲು ಬಾಧ್ಯನಾದವನು" ಎಂದರೆ ಈ ಕಾಯಿದೆಯ ಪ್ರಕಾರ ಲೆಕ್ಕ ಒಪ್ಪಿಸಲು ಬಾಧ್ಯನಾದವನು; 'ಕರ' ಎಂದರೆ ಈ ಕಾಯಿದೆಯನ್ವಯವಾಗಿ ಹಾಕಲಾದ ವಾರಸಾಕರ; "ಇನ್‌ಕಮ್‌ಟ್ಯಾಕ್ಸ ಆ್ಯಕ್ಟ" ಎಂದರೆ ೧೯೨೨ ರ xi ನೆಯ ಆ್ಯಕ್ಟ; 'ಭಾರತ' ಅಂದರೆ, ಜಮ್ಮು ಮತ್ತು ಕಾಶ್ಮೀರ ಬಿಟ್ಟು ಭಾರತಪ್ರದೇಶ.

### ಪ್ರಕರಣಗಳ ಸ್ಥಾನಾಂತರ ಮತ್ತು ಸ್ಥಾನಾಂತರದ ವಿಧಾನ.

**ನಿಯಮ: ೩**

ಯಾವುದೇ ವರ್ಗದ ಅಧಿಕಾರಿಯು ತನ್ನಮುಂದೆ ಬಂದಿರುವ ವಾರಸಾಕರದ ಪ್ರಕರಣವು ತನ್ನ ಅಧಿಕಾರ ಕ್ಷೇತ್ರಮಿತಿಯ ಬೆಲೆಯಕಿಂತ ಹೆಚ್ಚಾಗಿದೆಯೆಂದು ತಿಳಿದರೆ ಇಲ್ಲವೆ ಹೆಚ್ಚಾಗುವುದೆಂದು ಅವನಿಗೆ ಕಂಡುಬಂದರೆ, ಆ ಪ್ರಕರಣವನ್ನು ತನ್ನ ಮೇಲಿನ ಅಧಿಕಾರಿಯ ಕಡೆಗೆ ಸ್ಥಾನಾಂತರಿಸಬೇಕು.

**ನಿಯಮ: ೪**

ಹೀಗೆ ಮೇಲಿನ ಅಧಿಕಾರಿಗೆ ಸ್ಥಾನಾಂತರ ಮಾಡಲ್ಪಟ್ಟ ಪ್ರಕರಣವು ಯಾವ ಅವಸ್ಥೆಯಲ್ಲಿ ಸ್ಥಾನಾಂತರಿಸಲ್ಪಟ್ಟಿದೆಯೋ ಅದೇ ಅವಸ್ಥೆಯಿಂದ ಮುಂದುವರಿಸಲ್ಪಡಬೇಕು. ಈ ಬಗೆಯಾಗಿ ಪ್ರಕರಣದ ವಿಚಾರಣೆಯು ಮೇಲಿನ ಅಧಿಕಾರಿಯಿಂದ ಪ್ರಾರಂಭಿಸಲ್ಪಡುವ ಮೊದಲು ಲೆಕ್ಕ ಒಪ್ಪಿಸಲು ಬಾಧ್ಯನಾದವನಿಗೆ ಅವನ ಪಕ್ಷ ಮಂಡನಗೆ ಅವಕಾಶ ಕೊಡಬೇಕು. ಹೀಗೆ ಅಧಿಕಾರ ಕ್ಷೇತ್ರದ ಮಿತಿಯ ಮೂಲಕ ಸ್ಥಾನಾಂತರ ಮಾಡಲ್ಪಟ್ಟ ಆಜ್ಞೆಯು ಅಧಿಕಾರವನ್ನು ಆ ಪ್ರಕರಣದ ಮುಖ್ಯಬೆಲೆಯು ಎಷ್ಟೇ ಇದ್ದರೂ ಪ್ರಶ್ನಿಸಲಾಗದು.

## ನಿಯಮ: ೫

ನ್ಯಾಯಾಲಯದ ಆದಾಯಕರವನ್ನು ಆಕರಿಸುವ ಕಾರ್ಯವನ್ನು ನಿರ್ವಹಿಸದೆ ಇದ್ದರೂ ಅವರಿಗೆ ಈ ಕಾಯಿದೆಯ ೪ ನೆಯ ಕಲಮಿನ ಉಪಕಲಮು (೨) ರನ್ವಯವಾಗಿ ನಿರ್ದಿಷ್ಟವಾಗಿ ಒಪ್ಪಿಸಿ ಕೊಡಲಾದ ವಾರಸಾಕರದ ಬಗ್ಗೆ ಇರುವ ಪ್ರಕರಣದ ಬಗ್ಗೆ ಅವರು ನಿಯಂತ್ರಕನು ಮಾಡುವ ಎಲ್ಲ ಕಾರ್ಯವನ್ನು ಮಾಡಬೇಕು.

## ನಿಯಮ: ೬

ಯಾವುದೇ ಕಲಮಿನನ್ವಯವಾಗಿ ಒಂದು ವಾರಸಾಕರ ಪ್ರಕರಣವು ನಡೆದಿರಲಿ, ಅದನ್ನು ತನ್ನ ಮನಸ್ಸಿಗೆ ಬಂದಂತೆ ಬೋರ್ಡು ಸ್ಥಾನಾಂತರಿಸ ಬಹುದು. ಒಬ್ಬ ಅಧಿಕಾರಿಯು ವರ್ಗವಾಗಿ ಆ ಸ್ಥಳಕ್ಕೆ ಇನ್ನೊಬ್ಬನು ಬಂದರೆ ಅವನು ಪ್ರಕರಣವು ಯಾವ ಅವಸ್ಥೆಯಲ್ಲಿ ತನ್ನ ಹಿಂದಿನ ಅಧಿಕಾರಿಯು ಬಿಟ್ಟು ಹೋಗಿರುವನೋ ಅಲ್ಲಿಂದ ಮುಂದುವರಿಸಬೇಕು. ಈ ಬಗೆಯಾಗಿ ಪುನಃ ವಿಚಾರಣೆ ಪ್ರಾರಂಭವಾಗುವ ಮೊದಲು ಲೆಕ್ಕ ಒಪ್ಪಿಸಲು ಬಾಧ್ಯನಾದ ವನಿಗೆ ಪಕ್ಷ ಮಂಡಿಸಲು ಆಸ್ಪದ ಕೊಡಬೇಕು.

# ಸೊತ್ತುಗಳ ಸ್ಥಳ ಮತ್ತು ಸ್ವಭಾವ ನಿರ್ಧಾರ ಮಾಡುವುದು

## ನಿಯಮ: ೭ ಆಸ್ತಿಯ ಸ್ವಭಾವ ನಿರ್ಣಯಿಸುವುದು.

ಸ್ಥಾವರ ಆಸ್ತಿಯಲ್ಲಿ ಭೂಮಿ, ನೀರು ನಿಂತಿರುವ ಭೂಮಿ, ಕಟ್ಟಡಗಳು ಹಾದಿಯ, ಬೆಳಕು, ನದಿದಾಟಿಸುವ ಇಲ್ಲವೆ ಮೀನುಗಾರಿಕೆಯ, ಇಲ್ಲವೆ ಭೂಮಿಯಿಂದ ಉಂಟಾಗುವ ಇತರ ಹಕ್ಕುಗಳು ಮತ್ತು ಭೂಮಿಗೆ ಹೊಂದಿ ಕೊಂಡಿರುವ ವಸ್ತುಗಳು ಇಲ್ಲವೆ ಭೂಮಿಗೆ ಹೊಂದಿಕೊಂಡದ್ದಕ್ಕೆ ಶಾಶ್ವತ ವಾಗಿ ಕೂಡಿಸಲಾದ ವಸ್ತುಗಳು ಇವು ಸಮಾವೇಶವಾಗುತ್ತವೆ. ಆದರೆ, ಬೆಳೆದ ಹುಲ್ಲು, ಬೆಳೆ, ಮತ್ತು ಇಮಾರತಿ ಕಟ್ಟಿಗೆ ಇವುಗಳನ್ನು ಒಳಗೊಳ್ಳುವುದಿಲ್ಲ.

ವಿವರಣೆಯಲ್ಲಿ " ನೆಲಕ್ಕೆ ಅಂಟಿಕೊಂಡದ್ದು " ಅಂದರೆ ಏನು ಅರ್ಥ ಎಂಬುದರ ಬಗ್ಗೆ ವಿವರಗಳನ್ನು ಕೊಡಲಾಗಿದೆ.

## ನಿಯಮ: ೮ ಜಂಗಮ ಆಸ್ತಿಯ ಸ್ಥಳ ನಿರ್ಣಯಿಸುವುದು.

ಜಂಗಮ ಆಸ್ತಿಯು ಯಾವ ಸ್ಥಳದಲ್ಲಿ ಇರುವುದೋ ಆ ಆಸ್ತಿಗೆ ಸಂಬಂಧಪಟ್ಟ ಹಕ್ಕುಗಳು ಇಲ್ಲವೆ ಹಿತಸಂಬಂಧಗಳು ಅದೇ ಸ್ಥಳದಲ್ಲಿ ಇರು ವುದೆಂದು ಗಣಿಸಲ್ಪಡಲಾಗುವುದು. ಸಂಚಾರದಲ್ಲಿದ್ದರೆ ಅವು ಯಾವ ಸ್ಥಳಕ್ಕೆ

ಮುಟ್ಟ ಬೇಕಾಗುವುದೋ ಅದೇ ಸ್ಥಳವೆಂದು ತಿಳಿಯಲಾಗುವುದು. ಸಾಲಗಳ ಸಂಬಂಧದಲ್ಲಿ ವಿಚಾರಿಸುವಾಗ ಮೃತನ ಮರಣದ ಸಮಯಕ್ಕೆ ಸಾಲಗಾರನು ಎಲ್ಲಿ ವಾಸವಾಗಿರುವನೋ ಅದೇ ಸ್ಥಳವು ಆ ಸಾಲದ ಹಕ್ಕುಗಳಿಗಾಗಿ ಎಂದು ತಿಳಿಯಲ್ಪಡಲಾಗುವುದು. ಆದರೆ ಇಂತಹ ಸಾಲದ ಮೇಲಿನ ಬಡ್ಡಿಯು ಭಾರತದ ಆದಾಯಕರ ಕಾಯಿದೆಯನ್ವಯವಾಗಿ ಕರಪಾತ್ರವಾಗಿದ್ದರೆ ಅದು ಭಾರತದಲ್ಲಿಯೆ ಇದೆಯೆಂದು ತಿಳಿಯಲಾಗುವುದು. ಬ್ಯಾಂಕಿನಲ್ಲಿಯ ಹಣವು ಬ್ಯಾಂಕಿನ ಯಾವ ಶಾಖೆಯಲ್ಲಿ ಲೆಕ್ಕವಿರುವುದೋ ಆ ಸ್ಥಳದಲ್ಲಿ ಎಂದು ತಿಳಿಯಲಾಗುವುದು. ಸರಕಾರದ ಆಶ್ವಾಸನ ಪಾತ್ರಗಳಿದ್ದರೆ, ಮರಣ ಸಮಯದಲ್ಲಿ ಅವು ಎಲ್ಲಿ ಇರುವುವೊ ಅದೇ ಅವುಗಳ ಸ್ಥಳವೆಂದು, ಅವು ನೋಂದಾಯಿಸಲ್ಪಟ್ಟಿದ್ದರೆ ನೊಂದಾಯಿಸಲಾದ ಸ್ಥಳವೇ ಅವುಗಳ ಸ್ಥಳವೆಂದೂ ತಿಳಿಯಲಾಗುವುದು. ಪಾಲಿಸಿಯ ಮೇಲಿನ ಹಣವು ಎಲ್ಲಿ ಸಂದಾಯವಾಗಬೇಕಾಗಿರುದೋ ಅದು, ಹಾಗೆ ನಿರ್ದೇಶನವಿಲ್ಲದಿದ್ದರೆ ಕಂಪನಿಯ ಮುಖ್ಯ ಕಚೇರಿ ಇರುವ ಸ್ಥಳವು. ಪಾಲುಗಾರಿಕೆಯ ವ್ಯವಹಾರದಲ್ಲಿಯ ಪಾಲುಗಳ ಸ್ಥಳವು ಮುಖ್ಯವಾಗಿ ವ್ಯವಹಾರ ನಡೆವ ಸ್ಥಳದಲ್ಲಿ ಎಂದು ತಿಳಿಯಬೇಕು.

## ನಿಯಮ: ೯ ಸ್ಥಾವರ ಆಸ್ತಿಯ ಸ್ಥಳ ನಿರ್ಣಯ

ಸ್ಥಾವರ ಆಸ್ತಿಯು ಭಾರತದಲ್ಲಿಯಿದ್ದರೆ ಭಾರತವೇ ಅದರ ಸ್ಥಳವೆಂದು ತಿಳಿಯಬೇಕು. ಇಂತಹ ಆಸ್ತಿಯ ಬಗ್ಗೆ ಇರುವ ಹಕ್ಕು ಹಿತಸಂಬಂಧಗಳು ಆಸ್ತಿಯು ಎಲ್ಲಿ ಇರುವುದೋ ಅದೇ ಸ್ಥಳವೆಂದು ತಿಳಿಯಬೇಕು.

## ನಿಯಮ ೧೦ ಸಂಬಂಧಿಕರಿಂದ ವಾರ್ಷಿಕವೇತನಗಳನ್ನು ಕೊಂಡು ಕೊಳ್ಳುವುದು.

ಈ ನಿಯಮವಿಲ್ಲದಿದ್ದರೆ, ಈ ಕಾಯಿದೆಯ ಕಲಮು ೨೭ ರ ನ್ವಯವಾಗಿ ವಾರಸಾಕರ ಕೊಡಬೇಕಾಗುತ್ತಿದ್ದಿತೋ ಅಂತಹ ಪ್ರಸಂಗದಲ್ಲಿ ಈ ನಿಯಮದ ಪ್ರಕಾರ ಪರಿಹಾರ ಕೊಡಲಾಗುವುದು.

## ನಿಯಮ ೧೧: ಮುಕ್ತತೆಯ ಕರಾರುಗಳು

ರಾಷ್ಟ್ರೀಯ. ಶಾಸ್ತ್ರೀಯ ಇಲ್ಲವೆ ಐತಿಹಾಸಿಕ ಮಹತ್ವದ ಸಾಮಾನುಗಳು ಅವು ಭಾರತದಲ್ಲಿ ಶಾಶ್ವತವಾಗಿ ಇಡಲ್ಪಡುವುವೆಂದು ಆಶ್ವಾಸನ ಕೊಡಲ್ಪಟ್ಟರೆ, ಅವುಗಳನ್ನು ಸಂರಕ್ಷಿಸುವುದಕ್ಕೆ ಯೋಗ್ಯ ಕ್ರಮ ಕೈಕೊಳ್ಳುವುದಾಗಿ ಆಶ್ವಾಸನ ಕೊಟ್ಟರೆ, ಅವು ಹಾಗೆ ಕಾಪಾಡಲ್ಪಡಲಾಗಿವೆಯೋ ಇಲ್ಲವೊ ಎಂಬುದನ್ನು ಪರಿಶೀಲಿಸಲು ಅನುಕೂಲತೆ ಮಾಡುವುದಾಗಿ ಆಶ್ವಾಸನ ಕೊಟ್ಟರೆ, ಅಂತಹ ವಸ್ತುಗಳನ್ನು ಮೃತನ ಮನೆಯಲ್ಲಿಯೆ ಇಡಲಾದರೂ ಅವುಗಳಿಗೆ ಕರ ಮುಕ್ತತೆ ದೊರೆವುದು. ಒಂದು ವೇಳೆ ಈ ವಸ್ತುಗಳು ಮಾರಾಟ ಮಾಡಲ್ಪಟ್ಟರೆ ಮಾರಾ

ಟದಿಂದ ಬಂದ ಬೆಲೆಯ ಮೇಲೆ ಕರ ಹಾಕಲ್ಪಡಲಾಗುವುದು. ಆದರೆ ಆ ವಸ್ತುಗಳನ್ನು ಭಾರತ ಸರಕಾರಕ್ಕೆ ಇಲ್ಲವೆ ಭಾರತದಲ್ಲಿಯ ಯಾವುದೇ ವಿಶ್ವ ವಿದ್ಯಾಲಯಕ್ಕೆ ಇಲ್ಲವೆ ಸಾರ್ವಜನಿಕ ಸಂಸ್ಥೆಗೆ ಮಾರಾಟ ಮಾಡಿದರೆ ವಾರಸಾ ಕರವು ಇಲ್ಲ.

## ನಿಯಮ ೧೨ ಆಶ್ವಾಸನಕ್ಕೆ ಅಪವಾದ.

ನಿಯಮ ೧೧ ರಲ್ಲಿ ವಸ್ತುಗಳ ಪರಿಶೀಲನೆಗಾಗಿ ಕೊಡಬೇಕಾಗಿದ್ದ ಆಶ್ವಾಸನವನ್ನು ಸಂಬಂಧಪಟ್ಟವರು ಆ ವಸ್ತುಗಳು ಕೇವಲ ವೈಯುಕ್ತಿಕ ಮತ್ತು ಗೌಪ್ಯವಾಗಿಡಲು ಯೋಗ್ಯವಾಗಿವೆಯೆಂದು ತೋರಿಸಿ ಬೋರ್ಡನ್ನು ಸಮಾಧಾನ ಪಡಿಸಿದರೆ, ಸಂಶೋಧನೆಗಾಗಿ ಪರಿಶೀಲನೆ ಮಾಡುವ ಬಗ್ಗೆ ಆಶ್ವಾಸನದ ಕೆಲವನ್ನು ಸಡಲಿಸಬಹುದು.

## ನಿಯಮ: ೧೩ ಆಶ್ವಾಸನದಂತೆ ನಡೆಯದಿದ್ದರ ಪರಿಣಾಮ

ನಿಯಮ ೧೧ ರಲ್ಲಿ ಹೇಳಿದಂತೆ ಕೊಡಲಾದ ಆಶ್ವಾಸನಗಳ ಮೂಲಕ ವಾರಸಾಕರ ಮುಕ್ತತೆಯ ದೊರೆತಿದ್ದು, ಆಶ್ವಾಸನಗಳನ್ನು ಕಾರ್ಯಗತ ಮಾಡಿಲ್ಲವೆಂದು ಬೋರ್ಡಿಗೆ ಕಂಡು ಬಂದರೆ ಮುಕ್ತತೆಯ ರಿಯಾಯತಿ ಹೋಗಿ ಬಿಡುವುದು. ಮತ್ತು ಮೃತನ ಮರಣದ ಸಮಯದಲ್ಲಿ ಆ ವಸ್ತುಗಳ ಮುಖ್ಯ ಬೆಲೆ ಯಾಗಿರುವ ಬೆಲೆಯ ಮೇಲೆ ಮತ್ತು ಆ ದರದಂತೆ ವಾರಸಾಕರವು ಬೀಳುವುದು.

## ನಿಯಮ: ೧೪ ಬೆಲೆಕಟ್ಟುವಿಕೆ

ಲೆಕ್ಕದಲ್ಲಿ ತೋರಿಸಲಾದ ಲೆಕ್ಕವನ್ನು ನಿಯಂತ್ರಕನು ಒಪ್ಪಿಕೊಳ್ಳ ಬಹುದು. ಅದನ್ನು ಒಪ್ಪಿಕೊಳ್ಳದಿದ್ದರೆ ತಾನೇ ಲೆಕ್ಕ ತಯಾರಿಸಬಹುದು; ಇಲ್ಲವೆ ಬೇರೆ ವ್ಯಕ್ತಿಗಳ ಸಹಾಯದಿಂದ ತಯಾರಿಸಿಕೊಳ್ಳಬಹುದು. ಬೇರೆ ಯವರಿಂದ ತಯಾರಿಸಲ್ಪಟ್ಟಾಗ ಆದ ವೆಚ್ಚವನ್ನು ·ಸರಕಾರವು ವಹಿಸುವುದು. ಮೃತನ ಮರಣಾನಂತರ ಸ್ವಲ್ಪ ಸಮಯದಲ್ಲಿ ಅವನ ಆಸ್ತಿಯು ಬಹಿರಂಗ ಪೇಟೆಯಲ್ಲಿ ಮಾರಲಾಗಿದ್ದರೆ ಅದರ ಮಾರಾಟದ ಬೆಲೆಯೇ ಆಸ್ತಿಯ ಮುಖ್ಯ ಬೆಲೆಯೆಂದು ಆಗುವುದು. ಆಗ ಮಾರಾಟದ ವೆಚ್ಚವನ್ನು ಆ ಮುಖ್ಯಬೆಲೆಯಲ್ಲಿ ಕಳೆಯಲಾಗದು. ಆಸ್ತಿಯಲ್ಲಿ ಖನಿಜ ದೊರೆವ ಕಣೆಯುಳ್ಳ ಭೂಮಿಯು ಸಮಾವೇಶ ವಾಗಿದ್ದರೆ ಖನಿಜಗಳ ಬಗ್ಗೆ ತಿಳಿವಳಿಕೆಯುಳ್ಳ ಇಂಜನಿಯರನಿಂದ ಬೆಲೆ ಕಟ್ಟಿಸಬೇಕು. ಆಸ್ತಿಯು ಕೃಷಿಭೂಮಿಯಾಗಿದ್ದರೆ, ಭೂಕಂದಾಯಕ್ಕಾಗಿ ಕಟ್ಟಲಾದ ವಾರ್ಷಿಕ ಬೆಲೆಯ ಇಪ್ಪತ್ತುಪಟ್ಟಿನಕಿಂತ ಹೆಚ್ಚಾಗಿ ಮುಖ್ಯಬೆಲೆಯು ಆಕರಿಸಲ್ಪಡಲಾಗದು. ನಿರೀಕ್ಷಣೆಯಲ್ಲಿದ್ದ ಹಿತಸಂಬಂಧಗಳ ಬೆಲೆ ಕಟ್ಟುವಾಗ,

ಸ್ವಾಧೀನತೆಯಲ್ಲಿ ಬರಲು ಹಿಡಿದ ಕಾಲಾವಧಿ, ಅದರ ವೆಚ್ಚ, ಕಾಲಾಂತರದಲ್ಲಿ ಆಗುವ ಲಾಭ-ಹಾನಿ, ಮುಂತಾದವುಗಳನ್ನು ಲಕ್ಷಿಸಬೇಕು. ಪರದೇಶದಲ್ಲಿದ್ದ ಆಸ್ತಿಯ ಬೆಲೆಯನ್ನು ಮೃತನ ಮರಣದ ಸಮಯಕ್ಕೆ ಇರುವ ನಾಣ್ಯ ವಿನಿಮಯದ ದರದ ಮೇಲಿಂದ ಗುಣಿಸಬೇಕು.

## ಪರಿಶೀಲನೆ

### ನಿಯಮ ೧೫:

ಈ ಕಾಯಿದೆಯ ಉದ್ದೇಶಗಳಿಗಾಗಿ ಆಸ್ತಿಯ ಪರಿಶೀಲನೆ ಮಾಡಲು ನಿಯಂತ್ರಕನು ಬರೆಹದ ಮೂಲಕ ಯಾವುದೇ ವ್ಯಕ್ತಿಯನ್ನು ಅಧಿಕರಿಸಬಹುದು. ಆಸ್ತಿಯ ಸ್ವಾಧೀನತೆಯುಳ್ಳವರು ಪರೀಶಿಲನೆಗಾಗಿ ಅಧಿಕರಿಸಲ್ಪಟ್ಟ ವ್ಯಕ್ತಿಗೆ ಆಸ್ತಿಯಲ್ಲಿ ಪ್ರವೇಶಿಸಲು, ಪರಿಶೀಲನೆ ಮಾಡಲು ಅನುಕೂಲತೆ ಮಾಡಿಕೊಡಬೇಕು.

## ವಿನಾಯತಿಯ ಹಣ

### ನಿಯಮ ೧೬:

ಪರಸ್ಪರ ಸಹಕಾರವಿಲ್ಲದ ದೇಶದಲ್ಲಿರುವ ಆಸ್ತಿಯ ಮೇಲೆ ಹಾಕಲಾದ ವಾರಸಾಕರದ ಸಂಬಂಧವಾಗಿ ವಿನಾಯತಿಯ ಸಂಬಂಧವಾಗಿ, ಆ ದೇಶದಲ್ಲಿ ಎಷ್ಟು ವಾರಸಾಕರ ಕೊಡಲಾಗಿದೆಯೋ ಅಷ್ಟರ ಮಟ್ಟಿಗೆ, ಇಲ್ಲವೆ ಬೋರ್ಡು ಆಕರಿಸಬಹುದಾದಷ್ಟು ಮಟ್ಟಿಗೆ ವಿನಾಯತಿ ಕೊಡಲಾಗುವುದು.

## ವಾರಸಾಕರದ ಆಕರಣೆ ಮತ್ತು ಸರಿಪಡಿಸುವಿಕೆ

### ನಿಯಮ ೧೭:

ಕಲಮು ೫೩ ಇಲ್ಲವೆ ೫೭ ರ ವಾಕ್ಯಾವಳಿ (ಅ) ಇಲ್ಲವೆ ೬೧ ರ ಉಪಕಲಮು ೨ ರನ್ವಯವಾಗಿ ವಾರಸಾಕರವು ಆಕರಿಸಲ್ಪಡುವುದು. ಇದರಿಂದ ತೀರ ಕಡಿಮೆ ಕರ ಕೊಡಲಾಗಿದೆಯೆಂದು ಕಂಡು ಬಂದರೆ, ಕಲಮು ೬೨ ರ ಉಪಕಲಮ (೨) ರನ್ವಯವಾಗಿ ಆಕರಿಸಿ ಹೆಚ್ಚಾದುದನ್ನು ವಾರಸಾಕರ ಬಾಕಿಯೆಂದು ತಿಳಿಯಬೇಕು.

## ಸಂದಾಯದ ಪದ್ಧತಿ

### ನಿಯಮ ೧೮:

ವಾರಸಾಕರವನ್ನು ಚೆಕ್ಕಿನಿಂದ, ಡ್ರಾಫ್ಟದಿಂದ, ಇಲ್ಲವೆ ಸರಕಾರಿ ಟ್ರೇಜರಿಯಲ್ಲಿ ಕೇಂದ್ರ ಸರಕಾರದ ಹೆಸರಿಗೆ ವಾರಸಾಕರಕ್ಕಾಗಿ ಎಂದು ಜಮಾ

ಮಾಡಿಸಿ ಕೊಡಬಹುದು. ಚೆಕ್ಕ ಮತ್ತು ಡ್ರಾಫ್ಟುಗಳು ರಿಜರ್ವ ಬ್ಯಾಂಕಿನ ಹೆಸರಿಗೆ ಕ್ರಾಸ ಮಾಡಿ ಕೊಡಬೇಕು. ನಿಯಂತ್ರಕನು ಅಧಿಕರಿಸಿದ ವ್ಯಕ್ತಿಯು ವಾರಸಾಕರ ಕೊಟ್ಟದ್ದಕ್ಕಾಗಿ ಪಾವತಿ ಕೊಡುವನು.

## ವಾರಸಾಕರಕ್ಕಾಗಿ ಹಣ ಸಂದಾಯ ಇಲ್ಲವೆ ಠೇವು

## ನಿಯಮ: ೧೯

ಹಿಂದಿನ ನಿಯಮಲ್ಲಿ ಹೇಳಿದಂತೆ ಹಣವನ್ನು ಸಂದಾಯ ಮಾಡಬಹುದು. ಮರಣದ ನಂತರ ಕೊಡಬೇಕಾಗುವ ವಾರಸಾಕರವನ್ನು ಕೊಡುವುದಕ್ಕಾಗಿಯೆಂದು ಗುರುತು ಮಾಡಿ ಮರಣ ಪೂರ್ವದಲ್ಲಿಯ ವಾರಸಾಕರದ ಹಣವನ್ನು ಠೇವಾಗಿಡಬಹುದು. ಮತ್ತು ಆಸ್ತಿಯ ಮುಖ್ಯ ಬೆಲೆಯನ್ನು ಹೇಗೆ ನಿರ್ಧರಿಸಲಾಯಿತು, ವಾರಸಾಕರ ಹೇಗೆ ಗುಣಿಸಲಾಯಿತು, ಎಂಬ ಬಗ್ಗೆ ನಿಯಂತ್ರಕನಿಗೆ ಒಂದು ಹೇಳಿಕೆಯನ್ನು ಕೊಟ್ಟು ಠೇವಿನ ವಿಷಯ ತಿಳಿಸಬಹುದು.

## ಲೆಕ್ಕದ ನಮೂನೆ

## ನಿಯಮ: ೨೦

ಕಲಮು ೫೩ ರ ಉಪಕಲಮು (೩) ರ ನ್ವಯವಾಗಿ ಕೊಡಬೇಕಾದ ಲೆಕ್ಕವನ್ನು ನಮೂನೆ E D. 1 ರಲ್ಲಿಯಿರಬೇಕು. ಕಲಮು ೫೭ ರ ವಾಕ್ಯಾವಳಿ (ಅ) ದ ನ್ವಯವಾಗಿ ಮೌಲ್ಯಮಾಪನ ಪ್ರತಿಜ್ಞಾ ಪತ್ರದೊಂದಿಗೆ ಕೊಡಬೇಕಾದ ಲೆಕ್ಕವು ಕೂಡ E D. 1 ನಮೂನೆಯಲ್ಲಿಯೇ ಇರಬೇಕು. ಕಲಮು ೬೧ ರ ಉಪಕಲಮು (೨) ರ ನ್ವಯವಾಗಿರುವ ಲೆಕ್ಕವೂ ಕೂಡಾ ನಮೂನೆ E. D. 1 ದಲ್ಲಿಯೇ ಇರಬೇಕು. ಅಂತಹವೇ ಆಗಿರುವ ನಮೂನೆಯಲ್ಲಿ ಕೊಟ್ಟ ಲೆಕ್ಕವನ್ನು ನಿಯಂತ್ರಕನು ಸ್ವೀಕರಿಸಬಹುದು. ಎಲ್ಲಿ ಪ್ರಾತಿನಿಧ್ಯದ ಆವಶ್ಯಕತೆಯಿಲ್ಲ ಮತ್ತು ಆಸ್ತಿಯು ತೀರ ಚಿಕ್ಕದಿರುವುದು, ಅಲ್ಲಿ ಲೆಕ್ಕವನ್ನು ನಮೂನೆ E. D. 5 ದಲ್ಲಿ ಕೊಡಬೇಕು.

## ಲೆಕ್ಕದ ಲಾಭಗ್ರಾಹಿಂಗಳು

## ನಿಯಮ: ೨೧

ವಾರಸಾಕರ ಯೋಗ್ಯವಾದ ಮೃತನ ಆಸ್ತಿಯು ಅನೇಕರಲ್ಲಿ ಹಂಚಿ ಹೋಗಿದ್ದರೆ ಪ್ರತಿಯೊಬ್ಬರೂ ತಮ್ಮ ಪಾಲಿಗೆ ಬಂದ ಆಸ್ತಿಯ ವಿವರವನ್ನು ಕೊಡಬೇಕು.

## ಲೆಕ್ಕದ ಜತೆಗೆ ಮೃತ್ಯುಪತ್ರದ ಪ್ರತಿಯನ್ನು ಇಡಬೇಕು

### ನಿಯಮ: ೨೨

ಹಿಂದಿನ ನಿಯಮದಂಕಿತವಾಗಿ ಲೆಕ್ಕ ಒಪ್ಪಿಸುವಾಗ ಆ ಪ್ರಸಂಗದಲ್ಲಿ ಮೃತ್ಯುಲೇಖವಿದ್ದರೆ ಅದರ ಸರ್ಟಿಫಾಯಿಡ ಪ್ರತಿಯನ್ನು ಲೆಕ್ಕದ ಜತೆಗೆ ಇಡಬೇಕು.

## ಲೆಕ್ಕವನ್ನು ಎರಡು ಪ್ರತಿಗಳಲ್ಲಿ ಕೊಡಬೇಕು.

### ನಿಯಮ: ೨೩

ಲೆಕ್ಕವನ್ನು ಎರಡು ಪ್ರತಿಗಳಲ್ಲಿ ಕೊಡಬೇಕು.

## ಲೆಕ್ಕದ ಪುಸ್ತಕ ಮತ್ತು ದಸ್ತೈವಜುಗಳ ಹಾಜರ ಪಡಿಸುವಿಕೆ

### ನಿಯಮ: ೨೪

ಒಪ್ಪಿಸಲಾದ ಲೆಕ್ಕದ ಸಂಬಂಧವಾಗಿ ನಿಯಂತ್ರಕನಿಂದ ಬೇಡಲ್ಪಟ್ಟ ಲೆಕ್ಕದ ಪುಸ್ತಕಗಳನ್ನು, ದಸ್ತೈವಜುಗಳನ್ನು ನಿಯಂತ್ರಕನ ಕಚೇರಿಯಲ್ಲಿ ಲೆಕ್ಕ ಒಪ್ಪಿಸಲು ಬಾಧ್ಯನಾದವನು ಹಾಜರು ಮಾಡಬೇಕು.

## ಲೆಕ್ಕ ಕೊಡಲಾಯಿತು ಎಂದು ಯಾವಾಗ ಗಣಿಸಲ್ಪಡಲಾಗುವುದು.

### ನಿಯಮ: ೨೫

ಗೊತ್ತು ಪಡಿಸಿದ ನಮೂನೆಯಲ್ಲಿ ಎಲ್ಲ ವಿಷಯಗಳನ್ನು ಮುಂಡಿಸಿ ಅದನ್ನು ಸಹಿಮಾಡಿ, ಸಂಗತಿಗಳ ಬಗ್ಗೆ ಪ್ರಮಾಣಮಾಡಿ ಲೆಕ್ಕಕ್ಕೆ ಸಂಬಂಧಿಸಿದ ಕಾಗದ ಪತ್ರ, ಪುಸ್ತಕ ಇವುಗಳನ್ನು ನಿಯಂತ್ರಕನ ಕಚೇರಿಯಲ್ಲಿ ಹಾಜರು ಮಾಡಿದಾಗ ಲೆಕ್ಕ ಕೊಡಲಾಯಿತು, ಎಂದು ಗಣಿಸಲ್ಪಡಲಾಗುವುದು. ಈ ಮಾತು ವ್ಯಕ್ತಿಗೂ ಅನ್ವಯಿಸುವುದು; ಕಂಪನಿಗೂ ಅನ್ವಯಿಸುವುದು.

## ನಮೂನೆಗಳು

### ನಿಯಮ: ೨೬

ಕಲಮು ೬೭ ರ ಉಪಕಲಮು ೫ ರನ್ವಯವಾಗಿ ಬೇಡುವ ಸರ್ಟಿಫಿಕೇಟ ಗಾಗಿ ಮಾಡಬೇಕಾದ ಅರ್ಜಿಯನ್ನು ನಮೂನೆ E. D. 2. ರಲ್ಲಿ ಮಾಡಬೇಕು. ಕಲಮು ೬೦ ರನ್ವಯವಾಗಿರುವ ಸರ್ಟಿಫಿಕೇಟಗಾಗಿ ನಮೂನೆ E. D. 3 ರಲ್ಲಿ ಮಾಡಬೇಕು. ಕಲಮು ೬೭ ರ ಉಪಕಲಮು (೧), (೨), ಮತ್ತು (೩)

ಮತ್ತು ಕಲಮು ೬೮ ಮತ್ತು ೬೯ ರನ್ವಯವಾಗಿರುವ ಸರ್ಟಿಫಿಕೇಟಿಗಾಗಿ ನಮೂನೆ E. D. 4 ರಲ್ಲಿ ಅರ್ಜಿಮಾಡಬೇಕು. ಎಲ್ಲಿ ವಾರಸಾಕರ ಕೊಡ ಬೇಕಾಗಿಲ್ಲವೆಂದು ತೋರುವ ಹೊಣೆಮುಕ್ತತೆಗಾಗಿರುವ ಸರ್ಟಿಫಿಕೇಟಿಗಾಗಿ E. D. 6 ರಲ್ಲಿ ಮಾಡಬೇಕು.

## ಸರ್ಟಿಫಿಕೇಟದನ್ವಯವಾಗಿ ಕರದ ವಸೂಲಿ

### ನಿಯಮ: ೨೭

ಕಲಮು ೭೩ ರನ್ವಯವಾಗಿ ಕರ ವಸೂಲಿ ಮಾಡುವ ಉದ್ದೇಶಕ್ಕಾಗಿ ನಿಯಂತ್ರಕನ ಸರ್ಟಿಫಿಕೇಟದಲ್ಲಿ ಕಾಣಿಸಿದ ವ್ಯಕ್ತಿಯು, ಮೃತ್ಯುಲೇಖಾಧಿ ಕಾರಿ, ಇಲ್ಲವೆ ವಾರಸಾಕರ ಕೊಡಲು ಪಾತ್ರನಾದವನು, ಎಂದು; ಸರ್ಟಿಫಿಕೇಟ ದಲ್ಲಿ ಕಾಣಿಸಿದ ಹಣವು ಅದರಲ್ಲಿ ಕಾಣಿಸಿದ ಆಸ್ತಿಯ ಸಂಬಂಧವಾಗಿರುವ ವಾರಸಾಕರವು ಎಂದು, ಅದರ ಸಂಬಂಧವಾಗಿ ಸಂಬಂಧಪಟ್ಟವರಿಗೆ ನೋಟೀಸು ಜಾರಿ ಮಾಡಲ್ಪಟ್ಟಿದೆಯೆಂದು, ಸರ್ಟಿಫಿಕೇಟದಲ್ಲಿ ಕಾಣಿಸಿದ ಹಣವು ಸರಕಾ ರಕ್ಕೆ ವಾರಸಾಕರ ರೂಪದಲ್ಲಿ ಆ ದಿನಾಂಕಕ್ಕೆ ಬಾಕಿಯಾಗಿದೆಯೆಂದು ವಿಶದ ಮಾಡಬೇಕು. ಇಲ್ಲಿ ಕರವೆಂದು ಹೇಳುಲಾದದು ಬಡ್ಡಿಯನ್ನು ಒಳಗೊಳ್ಳವುದು.

## ಪರದೇಶದ ಕಂಪನಿಯು ಕೊಡಬೇಕಾದ ವಿವರಗಳು

### ನಿಯಮ: ೨೮

ಮೃತಸದಸ್ಯನ ಹೆಸರು, ಅವನ ಈ ಮೊದಲಿನ ವಿಳಾಸ, ಮರಣದ ದಿನಾಂಕ, ಮರಣದ ಬಗ್ಗೆ ಕೊಡಲಾದ ನೋಟೀಸಿನ ತಾರೀಖು, ಮರಣದ ಕಾಲಕ್ಕೆ ಮೃತನು ಧಾರಣಮಾಡಿದ ಪಾಲುಗಳ ವರ್ಣನೆ, ಆ ಪಾಲುಗಳ ಕ್ರಮಾಂಕಗಳು, ಪಾಲುಗಳ ಮುಖಬೆಲೆ, ಮರಣದ ಕಾಲಕ್ಕೆ ಪಾಲುಗಳ ಮಾರ್ಕೆಟ ಬೆಲೆ, ಬೆಲೆಕಟ್ಟುವಿಕೆಯ ಪ್ರಮಾಣ, ಪಾಲುಗಳ ಒಟ್ಟು ಬೆಲೆ, ನ್ಯಾಯಿಕ ಪ್ರತಿನಿಧಿಗಳ ಹೆಸರು ವಿಳಾಸ.

## ಭಾರತದಲ್ಲಿಯ ಕಂಪನಿಯು ಕೊಡಬೇಕಾದ ವಿವರಗಳು

### ನಿಯಮ: ೨೯

ಇಂಡಿಯನ್ ಕಂಪನೀಜ ಆ್ಯಕ್ಟದನ್ವಯವಾಗಿ ನೊಂದಾಯಿಸಲಾದ ಕಂಪನಿಯು ತನ್ನ ಸದಸ್ಯನ ಮರಣದ ತಾರೀಖಿನಿಂದ ಒಂದು ತಿಂಗಳ ಒಳಗೆ ಆ ಕಂಪನಿಯ ಸಂಬಂಧವಾಗಿ ಇನ್‌ಕಮ್ ಟ್ಯಾಕ್ಸ ಅಧಿಕಾರಿಯೆಂದು ಕೆಲಸ

ಮಾಡುವ ಸಹಾಯಕ ನಿಯಂತ್ರಕನಿಗೆ, ಈ ವಿವರಗಳನ್ನು ಕೊಡಬೇಕು. ಪಾಲುಗಳು ಹಸ್ತಾಂತರ ಮತ್ತು ನೋಂದು ಆಗಿದ್ದರೆ ಯಾರ ಹೆಸರಿನಲ್ಲಿ ಪಾಲುಗಳು ಇರುವುವೊ ಆ ಮೃತ ಸದಸ್ಯನ ಹೆಸರು ಮತ್ತು ವಿಳಾಸ; ಹಸ್ತಾಂತರ ಮಾಡಿದ್ದರೆ ಹಸ್ತಾಂತರ ಪಡೆದ ವ್ಯಕ್ತಿಯ ಹೆಸರು ವಿಳಾಸ; ಪಾಲುಗಳ ವರ್ಣನೆ ಮತ್ತು ಕ್ರಮಾಂಕ. ಹಸ್ತಾಂತರ ಮಾಡಿದ ಪಾಲುಗಳ ಮುಖಬೆಲೆ, ಹಸ್ತಾಂತರಕ್ಕಾಗಿ ಕೊಡಲಾದ ಪ್ರತಿಬೆಲೆ, ಹಸ್ತಾಂತರ ಮಾಡಿ ಇನ್ನೂ ಮೃತನ ಹೆಸರಿನಲ್ಲಿ ಆ ತಾರೀಖಿಗೆ ಉಳಿದ ಪಾಲುಗಳ ವರ್ಣನೆ.

ಪಾಲುಗಳು ಹಸ್ತಾಂತವಾಗಿರದೆ ಮತ್ತು ನೋಂದಾಯಿಸಲಾಗಿರದೆ ಇದ್ದರೆ ಮೃತ ಸದಸ್ಯನ ಹೆಸರು ವಿಳಾಸ, ಪಾಲುಗಳ ವರ್ಣನೆ ಮತ್ತು ಕ್ರಮಾಂಕ, ಪಾಲುಗಳ ಮುಖಬೆಲೆ, ಮೃತನ ಮರಣದ ತಾರೀಖಿಗೆ ಅವುಗಳ ಮಾರ್ಕೆಟ ಬೆಲೆ, ಮೃತನ ನ್ಯಾಯಿಕ ಪ್ರತಿನಿಧಿಯ ಹೆಸರು ವಿಳಾಸ, ಈ ಪಾಲುಗಳ ಹಸ್ತಾಂತರದ ಬಗ್ಗೆ ಅರ್ಜಿಯು ಯಾರಿಂದಲಾದರೂ ಬಂದಿದೆಯೆ? ಬಂದಿದ್ದರೆ ಅರ್ಜಿಮಾಡಿದವನ ಹೆಸರು ವಿಳಾಸ.

---

# ಪರಿಶಿಷ್ಟ ೨

# ವಾರಸಾಕರದ ( ನಿಯಂತ್ರಿಕ ಕಂಪನಿಯ ) ನಿಯಮಗಳು

## ೧೯೬೩

## . ಸಾರಸಂಗ್ರಹ

## ತಲೆಬರೆಹ ಮತ್ತು ಪ್ರಾರಂಭ

**ನಿಯಮ: ೧**

ಈ ನಿಯಮಗಳಿಗೆ ವಾರಸಾಕರದ ( ನಿಯಂತ್ರಿತ ಕಂಪನಿಯ ) ನಿಯಮಗಳು ೧೯೬೩ ಎಂದು ಕರೆಯಬೇಕು. ಇವು ೧೯೬೩ ರ ಅಕ್ಟೋಬರ ೧೫ ಕ್ಕೆ ನೇ ಜಾರಿಯಲ್ಲಿ ಬಂದುವೆಂದು ಗಣಿಸಲ್ಪಡಬೇಕು.

## ವ್ಯಾಖ್ಯೆಗಳು

**ನಿಯಮ: ೨**

ಈ ಕಾಯಿದೆ ' ಅಂದರೆ ವಾರಸಾಕರ ಕಾಯಿದೆ ೧೯೬೩; ' ಸೊತ್ತು ' ಗಳಲ್ಲಿ ಸಂಸ್ಥೆಯ ನಾಮೆಯೂ ಒಳಗೊಳ್ಳುವುದು. " ಸಂಬಂಧಾತ್ಮಕ ಕ್ರಿಯೆಗಳು " ಇದರ ವ್ಯಾಖ್ಯೆ ಕಲಮು ೨೭ ರ ಉಪಕಲಮು (೭) ರಲ್ಲಿಯಂತೆ; ' ಸರಾಸರಿ ದರ ' ಎಂದರೆ, ಕಂಪನಿಯ ಸಂಬಂಧವಾಗಿ ನೂರಕ್ಕೆ ವರುಷಕ್ಕೆ ದರ ಎಂದು; ' ಡಿಬೆಂಚರ ' ಎಂದರೆ ಕಂಪನಿಯ ಸಂಬಂಧವಾಗಿ ಸಾಲದ ಬಂದವಲಿಗಾಗಿ ಕಂಪನಿಯಿಂದ ಹೊರಡಿಸಲಾದ ಋಣಭಾರ; ' ವಿನ್ಯಾಸ ' ದಲ್ಲಿ ಯಾವುದೇ ವಿಶ್ವಸ್ತನಿಧಿ, ಕರಾರು, ಕರಾರು ಪತ್ರ, ವ್ಯವಸ್ಥೆ ಮುಂತಾದುವು ಬರುವುವು. ' ವಿತರಣ ಮಾಡಿದ ಸೊತ್ತುಗಳು ' ಅಂದರೆ, ಕಂಪನಿಯ ಸೊತ್ತುಗಳು; ' ಲಾಭಾಂಶ ' ದಲ್ಲಿ ಆದಾಯಕರಕ್ಕಾಗಿ ಲಾಭಾಂಶವೆಂದು ಹಿಡಿಯಲಾದ ಯಾವುದೇ ಲಾಭಾಂಶವು ಬರುವುದು. ' ಸದಸ್ಯ ' ಎಂದರೆ ಕಂಪನಿಯ ಪಾಲು ಇಲ್ಲವೆ ಡಿಬೆಂಚರ ಧಾರಕನು; ಸಂದಾಯದಲ್ಲಿ ಆಸ್ತಿಯ ಹಸ್ತಾಂತರವೂ ಒಳಗೊಳ್ಳುವುದು. ' ಅಧಿಕಾರ ' ದಲ್ಲಿ ಪಾಲು ಧಾರಣದಿಂದ ಉಂಟಾಗುವ ಹಕ್ಕು ಸಮಾವೇಶವಾಗಿರುವುದು.

## ಅರ್ಥವಿವರಣೆ

**ನಿಯಮ: ೩**

ಯಾರು ಯಾವುದೇ ಆಸ್ತಿಯ ಸಂಬಂಧವಾಗಿ ಹಣವನ್ನು ಸ್ವೀಕರಿಸಿರುವರೋ ಇಲ್ಲವೆ ಲಾಭ, ಆದಾಯ ಮುಂತಾದ್ದನ್ನು ಪಡೆದಿರುವರೋ ಅವರೇ ಆ ಆಸ್ತಿಯ ಸಂಬಂಧವಾಗಿ ಮಾಡಲಾದ ಸಂದಾಯವನ್ನು ಪಡೆದಿರುವರೆಂದು

ತಿಳಿಯಲಾಗುವುದು. ಆಸ್ತಿಯ ವಿನ್ಯಾಸ ಮಾಡಿದವನಿಗೆ ಆ ಅಧಿಕಾರವಿದೆಯೆಂದು ತಿಳಿಯಲಾಗುವುದು. ವಿಶ್ವಸ್ತನಿಧಿಯಲ್ಲಿಯ ಧರ್ಮದರ್ಶಿ ಎಂದು ಕಾರ್ಯ ಮಾಡಲಾಗಿದ್ದರೆ ಹಾಗೆ ಮಾಡಲು ಅವನಿಗೆ ಅಧಿಕಾರವಿದೆಯೆಂದು ತಿಳಿಯಲಾಗುವುದು.

## ವಿನ್ಯಾಸಗಳು ಇಲ್ಲವೆ ಕ್ರಿಯೆಗಳು ಹಸ್ತಾಂತರವೆಂದು ತಿಳಿಯಲಾಗುವುದು.

### ನಿಯಮ: ೪

ಕಂಪನಿಯ ಆದಾಯ ಉಗಮಗಳಲ್ಲಿ ಸಮಾವೇಶವಾಗಿದ್ದರೆ ಆ ಆಸ್ತಿಯು ಆ ಕಂಪನಿಗೆ ಮಾಡಿದ ವಿನ್ಯಾಸ ಇಲ್ಲವೆ ಹಸ್ತಾಂತರ ಕ್ರಿಯೆಯೆಂದು ತಿಳಿಯಲಾಗುವುದು.

## ಕಂಪನಿಯಿಂದ ಮೃತನಿಗೆ ಬರುವ ಲಾಭಗಳು

### ನಿಯಮ: ೫

ಕಂಪನಿಯಿಂದ ಯಾವುದೇ ಆದಾಯವು ಇಲ್ಲದೆ ನಿಯತಕಾಲಿಕವಾಗಿ ಬರುವ ಸಂದಾಯವು ಮೃತನಿಗೆ ಅವನ ಲಾಭಕ್ಕಾಗಿ ಬರುತ್ತಿದ್ದರೆ, ಅದು ಕಂಪನಿಯಿಂದ ಮೃತನಿಗೆ ಬರುವ ಲಾಭಗಳೆಂದು ತಿಳಿಯಲಾಗುವುದು. ನಿಯತಕಾಲಿಕವಾಗಿ ಬರುವ ಸಂದಾಯವೆಂದರೆ, ಲಾಭಾಂಶ, ಬಡ್ಡಿ, ವೇತನ, ಮುಂತಾದವು.

## ಲಾಭ ಪಡೆಯಲು ಅಧಿಕಾರ ಇಲ್ಲವೆ ಹಕ್ಕು ಬಿಟ್ಟುಕೊಡುವಿಕೆ.

### ನಿಯಮ: ೬

ಹಿಂದಿನ ನಿಯಮದಲ್ಲಿ ಹೇಳಿದಂತಹ ಲಾಭವನ್ನು ಪಡೆಯುವುದಕ್ಕೆ ತನ್ನ ಅಧಿಕಾರ ಇಲ್ಲವೆ ಹಕ್ಕು ಬಿಟ್ಟುಕೊಟ್ಟಿದ್ದರೆ, ಈ ನಿಯಮದಂಕಿತವಾಗುವುದು. ಮೃತನ ಮರಣದ ತಾರೀಖಿನಿಂದ ಎರಡು ವರ್ಷ ಮುಂಚೆಯ ಸದ್ಭಾವದಿಂದ ಮಾಡಲಾದ ಅಧಿಕಾರ ಹಸ್ತಾಂತರ ಇಲ್ಲವೆ ಹಕ್ಕುಬಿಟ್ಟು ಕೊಡುವಿಕೆಗೆ ಈ ನಿಯಮವು ಅನ್ವಯಿಸುವುದಿಲ್ಲ.

## ಲಾಭದ ಮೊತ್ತವನ್ನು ನಿರ್ಧರಿಸುವುದು.

### ನಿಯಮ: ೭

ಯಾವುದೇ ಹಣವನ್ನು ಒಂದು ಸಲಕ್ಕಿಂತ ಹೆಚ್ಚು ಸಲ ಲೆಕ್ಕದಲ್ಲಿ ಹಿಡಿಯಲಾಗದು; ಮೃತನಿಗೆ ಬರಬೇಕಾಗಿರದೆ ಇದ್ದ ಹಣ ಬರಬೇಕಾಗಿದೆ ಯೆಂಬ ತಿಳಿವಳಿಕೆಯ ಮೇಲೆ ಲೆಕ್ಕದಲ್ಲಿ ಹಿಡಿಯಲಾಗಿದ್ದರೆ, ಆ ಹಣವು ಬರಲೇ

ಬೇಕಾಗಿದ್ದರೆ ಏನಾಗುತ್ತಿತ್ತೆಂಬುದನ್ನು ಗಣನೆಗೆ ತರಬೇಕು. ಮೃತನಿಗೆ ಬರುವ ಲಾಭದ ಮೇಲಿನ ಆದಾಯಕರ, ಸುಪರಟ್ಯಾಕ್ಸ ಇವುಗಳನ್ನು ಲಕ್ಷಿಸಬೇಕು. ಲಾಭದ ಲೆಕ್ಕವನ್ನು ಮಾಡುವಾಗ ಆಸ್ತಿಯ ಉಪಭೋಗವನ್ನು ಲಕ್ಷಿಸಬೇಕು.

## ಲಾಭವು ಮುಟ್ಟುವ ಕಾಲ

### ನಿಯಮ: ೮

ಕಂಪನಿಯಿಂದ ಮೃತನಿಗೆ ಲಾಭವು ಬರಬೇಕಾಗಿದ್ದು ಇನ್ನೂ ಪ್ರತ್ಯಕ್ಷ ಬಾರದಿದ್ದರೆ, ಯಾವಾಗ ಬರಬಹುದೋ ಆ ಸಮೀಪದ ಸಮಯವನ್ನೇ ಲಕ್ಷಿಸಬೇಕು. ಉಪಭೋಗದ ವಿಷಯವಿದ್ದರೆ ಉಪಭೋಗಕ್ಕೆ ಅನುಕೂಲತೆ ಒದಗಿದ ಕೂಡಲೆ ಆಗುವ ಸಮಯವನ್ನು ಲಕ್ಷಿಸಬೇಕು.

## ಕಂಪನಿಯ ನಿಕ್ಕಿಲಾಭ ಇಲ್ಲವೆ ಹಾನಿಯ ನಿರ್ಧಾರಮಾಡುವದು.

### ನಿಯಮ: ೯

ಕಂಪನಿಯ ಬರುವ ವಿವಿಧ ಆದಾಯಗಳ ಉಗಮಗಳನ್ನು ಲಕ್ಷಿಸಿ ಅದರ ಉತ್ಪನ್ನವನ್ನು ಆ ವರುಷಕ್ಕಾಗಿ ಗುಣಿಸಬೇಕು. ಕೃಷಿಭೂಮಿಯ ಉತ್ಪನ್ನವನ್ನು ಪ್ರತ್ಯೇಕವಾಗಿ ಗುಣಿಸಬೇಕು. ಆ ಲೆಕ್ಕದ ವರುಷದಕಿಂತ ಮುಂಚೆ ಆದ ಹಾನಿಯನ್ನು ಆ ವರುಷದ ಆದಾಯದಿಂದ ಕಳೆಯಲಾಗದು. ಕರ ವಸೂಲಿ ಮಾಡಲಿ ಬಿಡಲಿ, ಕಂಪನಿಯ ಆದಾಯದಿಂದ ಯಾವ ವಾರ್ಷಿಕ ವೆಚ್ಚ ಇಲ್ಲವೆ ಬಡ್ಡಿಯನ್ನು ಕಂಪನಿಯ ಆದಾಯದಿಂದ ಕಳೆಯಬಹುದಾಗಿದ್ದಿತೋ ಅದನ್ನು ಕಳೆಯಬೇಕು. ಇದರ ಮೇಲಿಂದ ಕಂಪನಿಯ ನಿಕ್ಕಿಲಾಭ ಇಲ್ಲವೆ ಹಾನಿಯನ್ನು ಗುಣಿಸಬೇಕು.

## ಕಂಪನಿಯ ಸೊತ್ತುಗಳ ಬೆಲೆಯ ನಿರ್ಧಾರಮಾಡುವುದು.

### ನಿಯಮ: ೧೦

ವಾರಸಾಕರಕ್ಕಾಗಿ ಸೊತ್ತುಗಳ ಬೆಲೆಯನ್ನು ನಿರ್ಣಯಿಸುವಾಗ ೪೪ ನೆಯ ಕಲಮಿನನ್ವಯವಾಗಿ ಸಾಲ ಮತ್ತು ಋಣಭಾರವನ್ನು ಕಡಿಮೆಮಾಡುವಂತೆ, ಕಂಪನಿಗೆ ಮೃತನಿಂದ ಸಾಲ ಇಲ್ಲವೆ ಋಣಭಾರಗಳಿದ್ದರೆ ಅವನ್ನು ಕಡಿಮೆ ಮಾಡಲಾಗದು. ಆದರೆ ಕಂಪನಿಯ ಒಟ್ಟು ಋಣಭಾರಗಳನ್ನು ಅದರ ಪಾಲುಗಳ ಮೇಲೆ ಎಷ್ಟು ಪ್ರಮಾಣದಲ್ಲಿ ಇರುವುದೆಂದು ಕಂಡು ಹಿಡಿದು ಆ ಬಗ್ಗೆ ವಿನಾಯತಿಯನ್ನು ನಿಯಂತ್ರಕನು ಕೊಡಬಹುದು. ಸೊತ್ತುಗಳ ಮುಖ್ಯಬೆಲೆಯನ್ನು ನಿಯಂತ್ರಕನು ನಿರ್ಣಯಿಸುವಾಗ ಕಂಪನಿಯು ನಡೆಯುತ್ತಿರುವಾಗಲೇ ಮಾರಾಟ ಮಾಡಿದರೆ ಅದಕ್ಕೆ ಬರಬಹುದಾದ ಬೆಲೆಯ

ಆಧಾರದ ಮೇಲಿಂದ ನಿರ್ಣಯಿಸಬೇಕು. ಆ ಸೊತ್ತುಗಳಲ್ಲಿ ವಿತರಣಾ ಮಾಡಿದ ಸೊತ್ತುಗಳಿದ್ದರೆ, ಪ್ರತಿಬೆಲೆಯ ಪ್ರಮಾಣದಷ್ಟು ವಿನಾಯತಿಯನ್ನು ನಿಯಂತ್ರಕನು ಕೊಡಬಹುದು. ವಿತರಣಾ ಮಾಡಿದ ಸೊತ್ತುಗಳ ಮುಖ್ಯಬೆಲೆಯನ್ನು ನಿರ್ಣಯಿಸಲು ಕಲಮು ೩೭ ನೆರವಾಗುವುದು.

## ಭಾರದ ಪುನರಾವೃತ್ತಿ ತಡೆಯುವುದು ಮತ್ತು ಅದರ ಮಿತಿ

### ನಿಯಮ: ೧೧

ಮೃತನು ಕಂಪನಿಗೆ ಹಸ್ತಾಂತರ ಮಾಡಿ, ಅದರಿಂದ ಪಡೆದ ಲಾಭದ ಮೊತ್ತವು ಒಟ್ಟಿನಲ್ಲಿ ಕರಹಾಕುವುದಕ್ಕೆ ಪಾತ್ರವಾಗಲು ಕಡಿಮೆಯಾಗುತ್ತಿದ್ದರೆ ಕಡಿಮೆಯಾಗುವವಷ್ಟು ಮಟ್ಟಿಗೆ ಕಂಪನಿಯ ಸೊತ್ತುಗಳ ಬೆಲೆಯಲ್ಲಿ ಕಡಿಮೆ ಮಾಡಬೇಕು. ಇದು ಮೃತನು ಮಾಡಿದ ಹಸ್ತಾಂತರ ಮೂಲಕ ಬರುವ ಲಾಭಕ್ಕೆ ಸಮವಾಗಿರಬೇಕು.

( ಈ ನಿಯಮವು ಬಹು ವಿಶಾಲ ಮತ್ತು ಜಟಿಲವಾಗಿರುವುದರಿಂದ ಹೆಚ್ಚಿನ ಮಾಹಿತಿಗಾಗಿ ಪ್ರತ್ಯಕ್ಷವಾಗಿ ಆ ನಿಯಮವನ್ನೇ ನೋಡಬೇಕು. )

## ವಿತರಣಾ ಮಾಡಿದ ಸೊತ್ತುಗಳ ವಿಷಯವಾಗಿ ಸರಿಪಡಿಸುವಿಕೆ

### ನಿಯಮ: ೧೨

ಕಲಮು ೧೭ ರ ಸತ್ವದ ಮೂಲಕ ಮೃತನ ಮರಣದ ಮೂಲಕ ಇಳಿದು ಬರುವ ಆಸ್ತಿಯಲ್ಲಿ ಯಾವುದೇ ವಿತರಣಾ ಮಾಡಿದ ಸೊತ್ತುಗಳ ಸಮಾವೇಶವಾಗಿದ್ದರೆ, ಕಂಪನಿಯ ನಿಕ್ಕಿ ಆದಾಯವು ಹಾಗೆ ವಿತರಣಾ ಮಾಡಿದ ಸೊತ್ತುಗಳ ವಿತರಣದ ತಾರೀಖಿನಿಂದ ಆಗುವ ಸರಾಸರಿ ಬೆಲೆಯನ್ನು ಒಳಗೊಂಡು ಆಗುವ ಬೆಲೆಯ ಮೇಲಿಂದ ನಿರ್ಣಯಿಸಬೇಕು. ವಿತರಣಾ ಮಾಡಿದ ಸೊತ್ತುಗಳಲ್ಲಿ ಮೃತನು ಪಾಲು ಪಡೆದಿದ್ದರೆ, ಕಂಪನಿಯ ಒಟ್ಟು ಆದಾಯದ ಲೆಕ್ಕದ ಮೇಲಿಂದ ಮೃತನ ಪಾಲಿನ ಬೆಲೆಯನ್ನು ನಿರ್ಣಯಿಸಬೇಕು.

## ಸೊತ್ತುಗಳಿಗೆ ಆದ ಜೋಡಣೆಯ ವಿಷಯವಾಗಿ ಸರಿ ಪಡಿಸುವಿಕೆ

### ನಿಯಮ: ೧೩

ಕಲಮು ೧೭ ರ ಸತ್ವದ ಮೂಲಕ ಮೃತನ ಮರಣದ ಮೂಲಕ ಇಳಿದು ಬರುವ ಆಸ್ತಿಯ ಮುಖ್ಯ ಬೆಲೆಯು ಕಂಪನಿಯ ಸೊತ್ತುಗಳಿಗೆ

ಜೋಡಣೆ ಮಾಡಲ್ಪಟ್ಟ ಕಾರಣದಿಂದ ಹೆಚ್ಚಾದರೆ, ಹೆಚ್ಚಾಗಿ ಜೋಡಿಸಿದ ತಾರೀಖಿನಿಂದ ಸರಾಸರಿ ದರದಂತೆ ಎಷ್ಟು ಆಗುವುದೋ ಅಷ್ಟು ಮಟ್ಟಿಗೆ ಕಂಪನಿಯ ನಿಕ್ಕಿ ಆದಾಯವು ಆಗಿದೆಯೆಂದು ತಿಳಿಯಲ್ಪಡಲಾಗುವುದು. ಹೆಚ್ಚಾಗಿ ಜೋಡಿಸಲಾದುದನ್ನು ಮೃತನು ಕಂಪನಿಗೆ ಹಸ್ತಾಂತರ ಮಾಡಿದ್ದರೆ ಆ ಮೃತನಿಗೆ ಬರುವ ಲಾಭದ ಬೆಲೆಯನ್ನು ಹೆಚ್ಚಾಗಿ ಜೋಡಿಸಿದುದರ ಬೆಲೆಯ ಮೇಲಿಂದ ನಿರ್ಣಯಿಸಲಾಗುವುದು.

## ಲೆಕ್ಕದ ವರುಷ

### ನಿಯಮ: ೧೪

ಮೃತನ ಮರಣದ ಪೂರ್ವದಲ್ಲಿಯ ಹನ್ನೆರಡು ತಿಂಗಳಲ್ಲಿ ಕಂಪನಿಯು ವಾರ್ಷಿಕ ಲೆಕ್ಕವನ್ನು ತಯಾರಿಸಿದ್ದರೆ, ಯಾವ ತಾರೀಖಿನ ವರೆಗೆ ಲೆಕ್ಕವು ತಯಾರು ಮಾಡಿ ಬಿಟ್ಟಿದೆಯೋ ಅಲ್ಲಿಂದ ಹಿಂದೆ ಒಂದು ವರುಷವು ಲೆಕ್ಕದ ವರುಷವೆಂದಾಗುವುದು, -ಇಲ್ಲವೆ ನಿಯಂತ್ರಕನು ನಿರ್ಣಯಿಸುವ ತಾರೀಖಿನಿಂದ ಹಿಂದೆ ಹನ್ನೆರಡು ತಿಂಗಳು ಆ ಕಂಪನಿಯ ಲೆಕ್ಕದ ವರುಷವೆಂದಾಗುವುದು.

## ಕೆಲ ಕಂಪನಿಗಳ ಪಾಲುಗಳು ಮತ್ತು ಡಿಬೆಂಚರುಗಳು ಇವುಗಳನ್ನು ವಾರಸಾಕರಕ್ಕಾಗಿ ಬೆಲೆ ಕಟ್ಟುವುದು.

### ನಿಯಮ: ೧೫

ವಾರಸಾಕರಕ್ಕಾಗಿ ಮೃತನ ಮರಣದ ಮೂಲಕ ನಿಯಂತ್ರಿತ ಕಂಪನಿಯ ಪಾಲುಗಳು ಇಲ್ಲವೆ ಡಿಬೆಂಚರುಗಳು ಇಳಿದು ಬರುವಾಗ ಮೃತನ ಮರಣದ ಮುಂಚೆ ಮೂರು ವರುಷಗಳಲ್ಲಿ ಮೃತನ ಕೈಯಲ್ಲಿ ಆ ಕಂಪನಿಯ ನಿಯಂತ್ರಣವು ಇದ್ದರೆ ಆ ಪಾಲುಗಳ ಇಲ್ಲವೆ ಡಿಬೆಂಚರುಗಳ ಮುಖ್ಯಬೆಲೆಯು ಆ ಕಂಪನಿಯ ಸೊತ್ತುಗಳ ನಿಕ್ಕಿಬೆಲೆಯ ಪ್ರಮಾಣದ ಮೇಲಿಂದ ನಿರ್ಧರಿಸಲ್ಪಡಲಾಗುವುದು.

## ಪ್ರತಿ ಬೆಲೆಗಾಗಿ ಅಪವಾದಗಳ ಮಿತಿ, ಮತ್ತು ಮೃತನನ್ನು ಹೊರತುಪಡಿಸುವುದಕ್ಕೆ ಮಿತಿ

### ನಿಯಮ: ೧೬

ನಿಯಂತ್ರಿತ ಕಂಪನಿಯು ತನ್ನ ಸದಸ್ಯರ ಪರವಾಗಿ ವಿಶ್ವಸ್ತಸಂಸ್ಥೆ ಯಾಗಿರುವುದೆಂದು ನಿಯಂತ್ರಕನಿಗೆ ಸಮಾಧಾನವಾದರೆ, ಮತ್ತು ಕಂಪನಿಯು

ಧರ್ಮದರ್ಶಿಯ ಪದದಿಂದ ಕೆಲಸ ಮಾಡಿದ್ದರೆ, ಅಷ್ಟರ ಮಟ್ಟಿಗೆ ಕಲಮು ೨೬ ರಲ್ಲಿಯ ಅಪವಾದಗಳು ಅನ್ವಯಿಸುವುವು

## ಹಣ ತೊಡಗಿಸುವ (ಇನ್‌ವೆಸ್ಟಮೆಂಟ) ಕಂಪನಿಯೆಂದರೆ ಯಾವದು?

## ನಿಯಮ: ೧೭

ಆ ಕಂಪನಿಯು ಒಂದು ವ್ಯಕ್ತಿಯಾಗಿದ್ದರೆ, ಅದರಿಂದ ಬರುವ ಉತ್ಪನ್ನವು ಇನ್‌ಕಮ್ ಟ್ಯಾಕ್ಸ ಕಾಯಿದೆಯ ಪ್ರಕಾರ ಗಳಿಸಿದ ಆದಾಯವೆಂದು ಆಗುತ್ತಿದ್ದಿಲ್ಲವೊ ಅಂತಹ ಅಂದರೆ, ಪಾಲು ಡಿಬೆಂಚರ ಬಾಂಡು, ಮುಂತಾದವುಗಳಲ್ಲಿ ಹಣತೊಡಗಿಸಿ ಆದಾಯ ಮಾಡಿಕೊಳ್ಳುವ ಕಂಪನಿಯು ಹಣ ತೊಡಗಿಸುವ ( ಇನ್‌ವೆಸ್ಟಮೆಂಟ ) ಕಂಪನಿಯೆಂದು ಆಗುವುದು.

---

# ವಾರಸಾ ಕರ ಕಾಯಿದೆ

## ಪಾರಿಭಾಷಿಕ ಶಬ್ದಗಳ ಪಟ್ಟಿ

**ಈ ಪುಸ್ತಕದಲ್ಲಿ ಬಳಸಲಾದ ಪಾರಿಭಾಷಿಕ ಶಬ್ದಗಳನ್ನು ಮತ್ತು ಅವುಗಳ ಮೂಲ ಇಂಗ್ಲಿಶ್ ಪ್ರತಿಶಬ್ದಗಳೊಂದಿಗೆ ಪುಸ್ತಕದಲ್ಲಿ ಬಂದ ಕ್ರಮದಲ್ಲಿಯೆ ಇಲ್ಲಿ ಕೊಡಲಾಗಿದೆ.**

| | |
|---|---|
| ವಾರಸಾಕರ | Estate Duty |
| ಆಸ್ತಿಕರ | Property Tax |
| ಮೃತ್ಯುಕರ | Death duty |
| ವಾರಸದಾರ | Heir |
| ಜನಾಂಗಿಕವಾಗಿ | Racially |
| ದೇಶವಾಚಿಯಾಗಿ | Countrywise |
| ಮಸೂದೆ | Bill |
| ವಿಚಾರಪ್ರಣಾಲಿ | School of thought |
| ಹಸ್ತಾಂತರ | Transfer |
| ವಿಶ್ವಸ್ತ; ಧರ್ಮದರ್ಶಿ | Trustee |
| ಹಿತಸಂಬಂಧ | Interest |
| ಸಾಲ | Debt |
| ಋಣಭಾರ | Encumbrance |
| ಆದಾಯ ಕರ | Income tax |
| ಮೌಲ್ಯಮಾಪನ; ಬೆಲೆಕಟ್ಟುವಿಕೆ | Valuation |
| ಪ್ರತಿಜ್ಞಾಪತ್ರ | Affidavit |
| ಮೃತ್ಯುಲೇಖಾಧಿಕಾರಿ | Executor |
| ದಾನಿ | Donor |
| ದಾನಗ್ರಾಹಿ; ಪ್ರತಿಗ್ರಾಹಿ | Donee |

| | |
|---|---|
| ವಿನ್ಯಾಸ | Disposition |
| ದಾಯಶೇಷ | Remainder |
| ಶೇಷಭೋಗಾಧಿಕಾರ | Reversion |
| ಅಂತರ್ಗತ | Vested |
| ಅವಲಂಬಕ | Contingent |
| ಆಸ್ತಿ | Property ; Estate |
| ನಿವೇಶಿತ ಆಸ್ತಿ | Settled property |
| ನಿವೇಶನ | Settlement |
| ಮೌಲ್ಯಮಾಪಕ | Valuer |
| ಅರ್ಥವಿವರಣೆ | Interpretation |
| ನ್ಯಾಯಿಕ ಪ್ರತಿನಿಧಿ | Legal Representative |
| ಆವಧಿಕ ಋಣ | Terminable charges |
| ಗೇಣಿ | Lease |
| ದೇಶವಾಸ | Domicile |
| ಕ್ಷೇತ್ರಾಧಿಕಾರ | Jurisdiction |
| ಕೋಷ್ಟಕ | Schedule |
| ದಾಯಸಂಸ್ಥೆ | Coparcenary |
| ದಾಯಾದಿ | Coparcener |
| ಧಾರಕ | Holder |
| ದಾನ | Gift |
| ಸದ್ಭಾವ | Bonafide |
| ವಾರ್ಷಿಕ ವೇತನ | Annuity |
| ಮರಣೋನ್ಮುಖ | Mortis Causa |
| ಮೃತ್ಯುಲೇಖ | Will |
| ಕಬಜಾ; ಸ್ವಾಧೀನತೆ | Possession |
| ಪಾಶ್ಚಾತ್-ಜೀವಿತ್ವ | Survivorship |

| | |
|---|---|
| ಸಂಬಂಧಾತ್ಮಕ ಕ್ರಿಯೆಗಳು | Associated operations |
| ಶೇಷಭೋಗಾಧಿಕಾರಿ | Reversi oner |
| ಒಟ್ಟುಗೂಡಿಸುವಿಕೆ | Aggregation |
| ಕಡಿತ | Deduction |
| ಕರಪಾತ್ರ | Chargeable |
| ಕಡಿತಯೋಗ್ಯ | Deductible |
| ಪರಿಹಾರ | Relief |
| ಆಶ್ವಾಸನ ಪತ್ರಗಳು | Securities |
| ಹೇಳಿಕೆ | Statement |
| ನಿವೇದನೆ | Appeal |
| ಪರಿವರ್ತನ | Commutation |
| ನಮೂನೆಗಳು | Forms |
| ಮುಖ್ಯಬೆಲೆ | PrincipalValue |
| ಮುಖಬೆಲೆ | Face Value |
| ನಿಯಮಗಳು | Rules |
| ಲಾಭಾನುಗ್ರಹಿ | Beneficiary |
| ಸೊತ್ತು | Assets |
| ಹೊಣೆಗಾರಿಕೆ | Liability |
| ಸಂಬಂಧಿಕ | Relative |
| ಶಾಸನಿಕ ಘಟಕ | Legal Entity |
| ಮುಕ್ತತೆ | Exemption |
| ರಿಯಾಯತಿ | Concession |
| ವಿನಾಯತಿ | Allowance |
| ದಾಂಪತ್ಯಸಹಭಾಗಿ | Spouse |
| ಪ್ರತಿಬೆಲೆ | Consideratiou |

# ಶ್ರೀ. ನೆಗಳೂರ ರಂಗನಾಥರ ಕೃತಿಗಳು.

| | | | |
|---|---|---|---|
| ೧. | ಬಹಿಷ್ಕಾರ | ಸೀಳ್ಗತೆ | ೦—೪—೦ |
| ೨. | ಮದುವೆ | ಶಾಸ್ತ್ರೀಯ | ೧—೪—೦ |
| ೩. | ಶ್ರೀರಂಗ | ಚರಿತೆ | ೧—೮—೦ |
| ೪. | ಭಾರತದ ರಾಜ್ಯಘಟನೆ (ಕರಡು) | ಅನುವಾದ | ೪—೦—೦ |
| ೫. | ಪೂಜಾಫಲ | ಕಾದಂಬರಿ | ೧—೪—೦ |
| ೬. | ಪೌರನೀತಿ | ಶಾಸ್ತ್ರೀಯ | ೧—೮—೦ |
| ೭. | ನಾಳಿನಹಂಬು | ಕವನ ಸಂಗ್ರಹ | ೦—೧೫—೦ |
| ೮. | ಭಾರತದಲ್ಲಿ ಪ್ರಜಾಪ್ರಭುತ್ವ | ನಿಬಂಧ | ೦—೪—೦ |
| ೯. | ಇಂಡಿಯನ್ ಪೀನಲ್‌ಕೋಡ | | ೩—೧೨—೦ |
| ೧೦. | ಮುಂಬಯಿ ಪಾನಪ್ರತಿಬಂಧ ಕಾನೂನು | | ೧—೪—೦ |
| ೧೧. | ಪುರಾವೆ ನೀತಿ (ಎವಿಡೆನ್ಸ ಆ್ಯಕ್ಟ) | | ೨—೮—೦ |
| ೧೨. | ಭಾರತದ ಪಂಚವಾರ್ಷಿಕ ಯೋಜನೆ | | ೨—೦—೦ |
| ೧೩. | ವಾರಸಾಕರ ಕಾಯಿದೆ | | ೩—೦—೦ |
| ೧೪. | ವಿವಾಹ ಮತ್ತು ವಿವಾಹವಿಚ್ಛೇದನ ಕಾಯಿದೆ | | ಅಚ್ಚಿನಲ್ಲಿದೆ |
| ೧೫. | ಆದಾಯಕರ ಕಾಯಿದೆ | | ಅಚ್ಚಿನಲ್ಲಿದೆ |



# ನಮ್ಮ ಪ್ರಕಟನೆಗಳು

| | | | |
|---|---|---|---|
| ೧ ಇಂಡಿಯನ್ ಪೀನಲ್ ಕೋಡ | : | ನೆಗಳೂರ ರಂಗನಾಥ | ೩—೧೨—೦ |
| ೨ ಮುಂಬಯಿ ಪಾನಪ್ರತಿಬಂಧ ಕಾನೂನು | : | ನೆಗಳೂರ ರಂಗನಾಥ | ೧—೪—೦ |
| ೩ ಪುರಾವೆ ನೀತಿ ( ಎವಿಡೆನ್ಸ ಆ್ಯಕ್ಟ ) | : | ನೆಗಳೂರ ರಂಗನಾಥ | ೨—೮—೦ |
| ೪ ವಾರಸಾಕರ ಕಾಯಿದೆ | : | ಎಸ್. ಕೆ. ದೀಕ್ಷಿತ ಮತ್ತು ನೆಗಳೂರ ರಂಗನಾಥ | ೩—೦—೦ |